# ಮ್ಯಾಸ ಮಂಡಲ

ಡಾ. ಮೀರಾಸಾಬಿಹಳ್ಳಿ ಶಿವಣ್ಣ



ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು

ಆಕರ ಗ್ರಂಥಮಾಲೆ

# ವ್ಯಾಸ ಮಂಡಲ

ವ್ಯಾಸಬೇಡ ಬುಡಕಟ್ಟಿನ ಕ್ಷೇತ್ರಾಧ್ಯಯನ ಆಧಾರಿತ
ಸಂಶೋಧನ ಲೇಖನಗಳು

ಡಾ. ಮೀರಾಸಾಬಿಹಳ್ಳಿ ಶಿವಣ್ಣ


ಕನ್ನಡ ಪುಸ್ತಕ ಪ್ರಾಧಿಕಾರ
ಚಾಮರಾಜಪೇಟೆ,
ಬೆಂಗಳೂರು-೧೮.

**MYASA MANDALA**

A collection of Field Study Based Research Articles
on Myasa Beda Tribe

Writer

**Dr. Meerasabihally Shivanna** B.A.(Hons.)., M.A. Ph.D.,
Professor of Kannada
"Janapada" (House Near Telephone Tower)
Bapuji College Road
Challakere-577 522
Phone (R) 08195-550540

Publisher

**N. Thippeswamy**
Administrative Officer
Kannada Pustaka Pradhikara
(Kannada Book Authority)
Pampa Mahakavi Road
Chamarajpet, Bangalore- 560 018



First Print: Dec 2003
Pages: xiv +138 Price: Rs. 80-00
ISBN: 81-7713-131-1

Cover Page Photos:
**Dr. Meerasabihally Shivanna**

Cover Page and inner page Photo tracing Drawings:
**Pundlika Kalliganur**

Line Drawings courtesy:
**K.K. Makali**

**DTP**
**Sree Printary**
Prakashnagara, Bangalore

**Printed**
**Shakti Printers & Publishers**
No. 277, 5th Cross,
Vidhanasoudha Extn.,
Kavidhama Nagar, Laggere,
Bangalore- 560 058
Ph: 22712264, 22712299
23721627, 23721756

# ಅಕ್ಷರ ಸೂರ್ಯನಿಗೆ ನಮನ

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**

ಅಧ್ಯಕ್ಷರು

ಕನ್ನಡ ಪುಸ್ತಕ ಪ್ರಾಧಿಕಾರವು ನಾಡಿನ ಎಲ್ಲ ಬಗೆಯ ಜ್ಞಾನ ಸಂಪತ್ತನ್ನು ಉಳಿಸಿ-ಬೆಳೆಸುವ ತುಂಬು ಹಂಬಲವನ್ನು ಹೊತ್ತಿದೆ. ಇದು ಒಂದು ಬಗೆಯಲ್ಲಿ ಲೇಖಕ, ಪ್ರಕಾಶಕ, ಓದುಗ ಈ ಮೂವರ ಜತೆ ಸುಸಂಬದ್ಧವಾದ ಅಂತರ್‌ಜಾಲವನ್ನು ಪೋಷಿಸುವ ಸಾಂಸ್ಕೃತಿಕ ಚೈತನ್ಯದ ಸಂಸ್ಥೆಯಾಗಿದೆ. ನಾಡಿನ ಜ್ಞಾನ ಸಂಪತ್ತು ಅಕ್ಷಯವಾದುದು. ನಾವು ಬಗೆದಷ್ಟು ಮುಗಿಯದ ತವನಿಧಿ. ಈ ನಿಧಿಯ ರಕ್ಷಣೆ-ಪಾಲನೆ ಮತ್ತು ಘೋಷಣೆ ಎಂದೆಂದೂ ಬೇಕು. ಅಕ್ಷರನಿಧಿಯು ಎಂದೆಂದೂ ಅಳಿಯುವುದಿಲ್ಲ. ಈ ನಿಧಿಗೆ ಒಡೆಯರಾದವರು ನಮ್ಮ ಓದುಗರು. ಪಾರಂಪರಿಕ ಜ್ಞಾನಕ್ಕೂ ಆಧುನಿಕ ಕಾಲದ ಜ್ಞಾನಕ್ಕೂ ಓದುಗರೇ ವಾರಸುದಾರರು. ಈ ವಾರಸುದಾರರಿಗೆ ನಿಧಿಯ ಮೌಲ್ಯವನ್ನೂ, ಮಹತ್ವವನ್ನೂ ತೆರೆದು ತೋರಿಸುವುದು ಪುಸ್ತಕ ಪ್ರಾಧಿಕಾರದ ಕರ್ತವ್ಯಗಳಲ್ಲಿ ಒಂದೆಂದು ತಿಳಿದಿದ್ದೇನೆ. ನಮ್ಮ ಕರ್ತವ್ಯವನ್ನು ನಾವು ಮಾಡುವುದು ಬೇಡವೇ? ಈ ಕರ್ತವ್ಯಕ್ಕೆ ಹಲವು ದಾರಿಗಳಿವೆ. ಕೇವಲ ಪ್ರಕಟಣೆ ಮಾತ್ರ ನಮ್ಮ ಏಕೋದ್ದೇಶವಲ್ಲ. ಪ್ರಕಟಣೆಯ ಜತೆಗೆ ಅಕ್ಷರಸಂಸ್ಕೃತಿ ದೀಪಗಳನ್ನು ಕತ್ತಲೆಯ ಹಲವು ಮೂಲೆ ಮುಡುಕುಗಳಲ್ಲಿ ಇಡುವುದು ನಮ್ಮ ಕರ್ತವ್ಯದ ಭಾಗವೇ ಆಗಿದೆ. ಪ್ರತಿಯೊಂದು ತಾಲ್ಲೂಕುಗಳನ್ನು ಇಂಥ ದೀಪಗಳಿಂದ ಬೆಳಗಿಸಬೇಕಾಗಿದೆ. ನಗರ, ಪಟ್ಟಣ ಪ್ರದೇಶಗಳು ಅಕ್ಷರ ಬೆಳಕಿನಿಂದ ಬೆಳಗಿವೆ. ಆದರೆ ದೂರ ದೂರದ ಕತ್ತಲೆಯ ಜಾಗಗಳೂ ಅಜ್ಞಾತವಲಯಗಳೂ ಬೆಳಗುವುದು ಪ್ರಜಾಪ್ರಭುತ್ವದ ಕಾಲದಲ್ಲಿ ಅತಿ ಮುಖ್ಯವಲ್ಲವೆ? ಈಗ ನಮ್ಮೆಲ್ಲರ ಕಣ್ಣು ಮತ್ತು ಮನಸ್ಸು ಗ್ರಾಮ-ಗ್ರಾಮಾಂತರಗಳಿಗೂ ತಾಲ್ಲೂಕು-ತಾಲ್ಲೂಕುಗಳ ಕಡೆಗೂ ಚಾಚಬೇಕಾಗಿದೆ. ಅಲ್ಲಿರುವ ಸಹಸ್ರಾರು ಜ್ಞಾನದಾಹಿಗಳ ಮನಸ್ಸನ್ನು ಅರಳಿಸುವ, ಅಕ್ಷರಲೋಕಕ್ಕೆ ಕರೆದೊಯ್ಯುವ ಕೆಲಸ ಮಾಡಬೇಕಾಗಿದೆ. ಇದಕ್ಕಾಗಿ ಪುಸ್ತಕ ಪ್ರಕಟಣೆಯ ಜತೆಗೆ, ಪುಸ್ತಕ ಮೇಳ, ಪುಸ್ತಕ ಜಾತ್ರೆ ಆಗುವುದು ಅಗತ್ಯ. ಇದು ನೆರವೇರಿದಾಗ 'ಕನ್ನಡ ಪುಸ್ತಕ ಪ್ರಾಧಿಕಾರ' ಎಂಬ ಮಾತಿಗೆ ಬೆಲೆ ಬರುತ್ತದೆ; ಅದಕ್ಕೊಂದು ಸಾಂಸ್ಕೃತಿಕ ಮೌಲ್ಯ ಪ್ರಾಪ್ತವಾಗುತ್ತದೆಂಬ ನಂಬುಗೆ ನನ್ನದು !

ಜ್ಞಾನದ ಹಂಬಲ ಪ್ರತಿಯೊಬ್ಬರಿಗೂ ಉಂಟು ! ಈ ಜ್ಞಾನವು ಹಲವು ರೂಪಗಳಲ್ಲಿ ತೋರುತ್ತದೆ. 'ಜ್ಞಾನದ ಬಲದಿಂದ ಅಜ್ಞಾನದ ಕೇಡು' ಎಂದು ಬಸವಣ್ಣನವರು ಹೇಳಿದ್ದುಂಟು! ಇದು ಆಧುನಿಕ ಜ್ಞಾನಕ್ಕೂ ಅವಲಂಬಿಸುತ್ತದೆ. ಇಪ್ಪತ್ತನೆಯ ಶತಮಾನ ಕಳೆದು ಹೊಸ ಸಹಸ್ರಮಾನದಲ್ಲಿರುವ ನಮಗೆ ಹಲವು ಬಗೆಯ ತೊಡಕುಗಳಲ್ಲಿ ಮತ್ತು ಸಂಕಟಗಳಲ್ಲಿ ನಾವಿದ್ದೇವೆ. ಒಂದು ಕಡೆ ಇಪ್ಪತ್ತನೆಯ ಶತಮಾನ ಸಾಹಿತ್ಯಕವಾಗಿ ಸಮೃದ್ಧವಾದ ಕಾಲವೇನೋ ನಿಜ. ಮೂಲಜ್ಞಾನದ ಬೇರುಗಳು ಹೊರಹೊಮ್ಮಿ ಹಲವು ಬಗೆಯ ವೈವಿಧ್ಯಗಳಿಂದ ವಿರಾಜಮಾನದ ಕಾಲವೂ ಆಗಿದೆ ! ಸಾಹಿತ್ಯಕವಾಗಿ ಎಷ್ಟು ಸಮೃದ್ಧವೋ ಸಾಂಸ್ಕೃತಿಕವಾಗಿಯೂ ಅಷ್ಟೇ ಬಗೆಬಗೆಯ ವಾಗ್ವಾದ ಮತ್ತು ಸಂವಾದಗಳಿಂದ ಕೂಡಿದ ಕಾಲವಾಗಿದೆ ! ಅನೇಕ ತಳವರ್ಗದ ಜನಸ್ಥಾನಗಳು ಮೊದಲ ಬಾರಿಗೆ ಅಕ್ಷರ ಸೂರ್ಯನಿಗೆ ನಮಸ್ಕರಿಸಿದ್ದುಂಟಷ್ಟೆ. ಜ್ಞಾನಾರ್ಜನ ಎಂಬುದು ಒಂದು ಶೈಕ್ಷಣಿಕ ಶಿಸ್ತಾಗಿದೆ. ಆದರೆ ಇದು ಸಮಾಜದ ಅವಿರತ ಹಾಗೂ ಸದಾಕಾಲವೂ ಹಂಬಲಿಸುವ ಆಶಯ ಆಗಬೇಕು. ಈ ಆಶಯ, ಹಂಬಲ ಹಲವು ಬಗೆಯ ಸಂಕೇತಗಳಲ್ಲೂ, ರೂಪಕಗಳಲ್ಲೂ ಕಾಣಿಸುತ್ತದೆ. ಪಾರಂಪರಿಕ ಜ್ಞಾನ ಇವೆರಡು ಬೇರುಗಳನ್ನು ಕಸಿ ಹಾಕುವ ಅಗತ್ಯ ನಮ್ಮ ಮುಂದಿದೆ. ಇದು ಈಗ ಪಾರಂಪರಿಕ ಜ್ಞಾನವು ಕೇವಲ ಸಾಹಿತ್ಯಕ ಸಮೃದ್ಧತೆಯ ಕಡೆಗೆ ಮಾತ್ರ ಬೊಟ್ಟು ಮಾಡಿ ತೋರಿಸುತ್ತಿದೆಯೆಂದು ನಾವು ತಿಳಿಯುವಂತಿಲ್ಲ. ಸಮಾಜ-ಸಮುದಾಯಗಳಿಗೆ ಬೇಕಾದ ಹಲವು ಬಗೆಯ ಜ್ಞಾನದ ಕೌಶಲ್ಯಗಳು ನಮ್ಮಲ್ಲಿ ಹಿಂದೆ ಇದ್ದುವು. ೧೮೦೦ರಲ್ಲಿ ಅತ್ಯುತ್ತಮ ತಾಂತ್ರಿಕಜ್ಞಾನ ನಮ್ಮಲ್ಲಿದ್ದುದನ್ನು ಹೇಗೋ ಈಗ ಉಳಿದುಕೊಂಡಿರುವ ವಿಲಿಯಂ ಆ್ಯಡಂ ವರದಿಗಳು ತಿಳಿಸುತ್ತವೆ. ಆದರೆ ನಾವಿಂದು ಈ ಬಗೆಯ ಸ್ಮೃತಿಗಳಿಂದ ಹೊರಗುಳಿದಿದ್ದೇವೆ. ನಮ್ಮ ಸಂಸ್ಕೃತಿ ಸಮುದಾಯಗಳು ಪಡೆದಿರುವ ಜ್ಞಾನಕೌಶಲ್ಯ, ಜ್ಞಾನ ಸಂಪತ್ತನ್ನು - ಈ ಕಾಲದ ಅಗತ್ಯಗಳಿಗೆ ತಕ್ಕಂತೆ ಮರುಜೋಡಣೆ ಮಾಡುವ ಅಗತ್ಯವಿದೆ. ಇಲ್ಲದೆ ಹೋದರೆ, ಕಳೆದುಹೋದ ಕಾಲವು ನಿರ್ವಾತವಾಗಿತ್ತೆಂದೊ ಬರುವ ಕಾಲ ಈ ನಿರ್ವಾತವನ್ನು ತುಂಬುವ ಹಂಬಲವನ್ನು ಹೊತ್ತಿರುವುದೆಂದೊ ತಿಳಿಯುವ ಕ್ಲೈಬ್ಯದಲ್ಲಿ ನಾವು ಮುಳುಗಬೇಕಾಗುತ್ತದೆ! ಈ ಅಜ್ಞಾನದಿಂದ ನಾವು ಎಚ್ಚರಗೊಳ್ಳಬೇಕಾಗಿದೆ. ಹೀಗೆ ಎಚ್ಚರಿಸುವ ಕಾರ್ಯವನ್ನು ನಾಡಿನ ಹಲವಾರು ಸಾಂಸ್ಕೃತಿಕ ಸಂಸ್ಥೆಗಳು ಮಾಡುತ್ತಿವೆ. ಆದರೆ, ಕನ್ನಡ ಪುಸ್ತಕ ಪ್ರಾಧಿಕಾರವು ತನ್ನದೇ ಆದ ಕೆಲವು ನಿರ್ದಿಷ್ಟ ಯೋಜನೆ ಮತ್ತು

ಪ್ರಕಟಣಾ ನೀತಿಸಂಹಿತೆಯಿಂದ ಹೊಸ ಆಕಾರವನ್ನು ಪಡೆಯುವ ಹಂಬಲವನ್ನು ಹೊತ್ತಿದೆ.

ಈ ಹಿನ್ನಲೆಯಲ್ಲಿ ಹಲವು ಬಗೆಯ ಮಾಲೆಗಳನ್ನು ಹಿಂದಿನ ವರ್ಷಗಳಿಂದ ಕನ್ನಡ ಪುಸ್ತಕ ಪ್ರಾಧಿಕಾರವು ನಡೆಸಿಕೊಂಡು ಬರುತ್ತಿದೆ. ಹೊಸ ಹೊಸ ಮಾಲೆಗಳು ಈಗೀಗ ಅಸ್ತಿತ್ವಕ್ಕೆ ಬರುತ್ತಿವೆ. ನಮ್ಮ ಹೊಸ ಓದು, ಹೊಸ ನುಡಿಗಟ್ಟು, ಹೊಸ ಸಂವೇದನೆಗಳು ಸಹಸ್ರಮಾನದ ಉದ್ಯಮಕ್ಕೆ ಸಜ್ಜುಗೊಳ್ಳುವ ಅಗತ್ಯವಿದೆಯೆಂದು ಪುಸ್ತಕ ಪ್ರಾಧಿಕಾರವು ತಿಳಿಯುತ್ತದೆ ! ಕನ್ನಡ ಪುಸ್ತಕ ಪ್ರಾಧಿಕಾರವು ಮಹತ್ವದ ಪ್ರಕಟಣೆಗಳನ್ನು ಹೊರತರುತ್ತಿರುವುದು ಸರಿಯಷ್ಟೆ. ಆಕರ ಗ್ರಂಥಗಳ ಪ್ರಕಟಣೆ, ಜನಸಾಮಾನ್ಯರೆಲ್ಲ ಓದಬಲ್ಲ ಪ್ರಕಟಣೆ, ವಿಜ್ಞಾನ ಸಾಹಿತ್ಯ ಪ್ರಕಟಣೆ-ಮೊದಲಾದವುಗಳನ್ನು ವಿವಿಧ ಮಾಲೆಗಳಲ್ಲಿ ಪುಸ್ತಕ ಪ್ರಾಧಿಕಾರವು ಪ್ರಕಟಿಸುತ್ತಿದೆ. ನಾಡಿನ ಜನತೆ ಅತ್ಯಂತ ಪ್ರೀತಿಯಿಂದ ನಮ್ಮ ಪ್ರಕಟಣೆಗಳನ್ನು ಸ್ವಾಗತಿಸುತ್ತಿದೆ. ಉತ್ತಮ ಪ್ರಕಟಣೆಗಳನ್ನು ಹೊರತರುವುದೇ ಪ್ರಾಧಿಕಾರದ ಉದ್ದೇಶವೂ ಆಗಿದೆ. ಇದು ಪುಸ್ತಕ ಸಂಸ್ಕೃತಿಯ ದ್ಯೋತಕವೆಂದು ಪ್ರಾಧಿಕಾರವು ಭಾವಿಸುತ್ತದೆ.

ಕನ್ನಡ ಪುಸ್ತಕ ಪ್ರಾಧಿಕಾರವು ಈಗಾಗಲೇ ಕೆಲವು ಅಪರೂಪದ ಆಕರ ಗ್ರಂಥಗಳನ್ನು ಪ್ರಕಟಿಸುತ್ತಿದೆ. ಇದು ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಜಾನಪದ, ನಿಘಂಟು, ಛಂದಸ್ಸು ಕಾವ್ಯಚಿಂತನೆ ಮೊದಲಾದ ವಿವಿಧ ವಿಷಯಗಳನ್ನು ಕುರಿತಿದೆ. ಕನ್ನಡ ವಿದ್ವದ್‌ಲೋಕವು ಈಗಾಗಲೇ ಈ ಮಾಲೆಯಡಿ ಪ್ರಕಟಗೊಂಡ ಅಪೂರ್ವ ಗ್ರಂಥಗಳನ್ನು ಬಹುಹೆಮ್ಮೆಯಿಂದ ಸ್ವಾಗತಿಸುತ್ತಿದೆ.

ಡಾ. ಮೀರಾಸಾಬಿಹಳ್ಳಿ ಶಿವಣ್ಣ ನಮ್ಮ ನಡುವಿನ ಜನಪದ ಮತ್ತು ಬುಡಕಟ್ಟು ಸಂಸ್ಕೃತಿ-ಸಾಹಿತ್ಯ ಚಿಂತಕರು. ಅವರು ಜನಪದ ಸಂಗ್ರಹ, ಕ್ಷೇತ್ರಕಾರ್ಯ ಮತ್ತು ಜಾನಪದೇತಿಹಾಸಗಳ ಸೂಕ್ಷ್ಮಗಳನ್ನು ತಿಳಿದವರು. ಅವರು ಬರೆದ 'ಮ್ಯಾಸಮಂಡಲ' ಬುಡಕಟ್ಟು ಸಂಸ್ಕೃತಿಗೆ ಸಂಬಂಧಿಸಿದ ಉತ್ತಮ ಕೃತಿಯಾಗಿದೆ. ಇದು ವ್ಯಾಪಕ ಕ್ಷೇತ್ರಕಾರ್ಯಗಳ ಅಧ್ಯಯನದ ಫಲವಾಗಿದೆ. ಡಾ. ಮೀರಾಸಾಬಿಹಳ್ಳಿ ಶಿವಣ್ಣ ಅವರ ಬರಹದಲ್ಲಿರುವ ಜೀವಂತಿಕೆ ಮತ್ತು ಸೂಕ್ಷ್ಮ ವಿಮರ್ಶನ ದೃಷ್ಟಿಗಳು ಓದುಗರಿಗೆ ಹೊಸನೋಟಗಳನ್ನು ನೀಡುತ್ತವೆ. ಈ ಬರಹಗಳ ಕಟ್ಟು ನಮ್ಮ ನೆಲದ ಕನ್ನೆಭಾಗವನ್ನೂ ಅದರ ಒಡಲಿನ ತಾಪವನ್ನೂ ಜೀವಂತಿಕೆಯ

ನೆಲೆಯನ್ನೂ ನಮ್ಮೆದುರು ತೆರೆದು ನಿಲ್ಲಿಸುತ್ತದೆ. ಬುಡಕಟ್ಟು ಸಂಸ್ಕೃತಿ ಚಿಂತಕರು ಮತ್ತು ಆಧುನಿಕ ನೆಲೆಯಿಂದ ನೋಡಬಲ್ಲವರು ಅಗತ್ಯವಾಗಿ ಓದಲೇಬೇಕಾದ ಕೃತಿಯಾಗಿದೆ. ಇಂತಹ ಕೃತಿಯನ್ನು ಪುಸ್ತಕ ಪ್ರಾಧಿಕಾರದ ಮೂಲಕ ಪ್ರಕಟಿಸಲು ಒಪ್ಪಿಗೆ ನೀಡಿದ ಲೇಖಕರನ್ನು ಹಾರ್ದಿಕವಾಗಿ ನಾನು ಅಭಿನಂದಿಸುತ್ತೇನೆ. ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಈ ಪುಸ್ತಕ ಪ್ರಕಟಣೆಯ ಸಂದರ್ಭದಲ್ಲಿ ಪ್ರಾಧಿಕಾರದ ಸದಸ್ಯ ಮಿತ್ರರು ನನ್ನೊಡನೆ ಸದಾ ಇದ್ದಾರೆ. ಈ ಕೃತಿಯನ್ನು ಅಂದವಾಗಿ ಮುದ್ರಿಸಿದ ಶ್ರೀ ಪ್ರಿಂಟರಿ ಮಾಲೀಕರಾದ ಶ್ರೀ ಎಸ್. ರಂಗಸ್ವಾಮಿ ಯವರಿಗೂ ಅವರ ಸಿಬ್ಬಂದಿ ವರ್ಗಕ್ಕೂ ನೆನಕೆಗಳು ಸಲ್ಲುತ್ತವೆ. ಜಾನಪದ ವ್ಯಾಸಂಗಿಗಳು ಈ ಪುಸ್ತಕವನ್ನು ಮನಸಾರೆ ಸ್ವೀಕರಿಸಬೇಕೆಂದು ಆಶಿಸುತ್ತೇನೆ.

# ಮ್ಯಾಸ ಮಂಡಲದೊಳಗೆ

ನಾನು ಪಿ.ಎಚ್.ಡಿ. ಅಧ್ಯಯನಕ್ಕೋಸ್ಕರ ಕಾಡುಗೊಲ್ಲರ ಸಾಂಸ್ಕೃತಿಕ ವೀರರನ್ನು ಕುರಿತು ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಸುತ್ತುತ್ತಿರುವಾಗ ಎತ್ತಹೋದರೂ (ಅದೂ ಚಿತ್ರದುರ್ಗ ಪ್ರಾಂತದಲ್ಲಿ ದಟ್ಟವಾಗಿ) ಎಡತಾಕುತ್ತಿದ್ದುದು ಮ್ಯಾಸಬೇಡರ ಮಾಹಿತಿಗಳು. ಇವು ನನ್ನ ಅಧ್ಯಯನ ವಿಷಯಕ್ಕೆ ನೇರ ಸಂಬಂಧವಿಲ್ಲದಿದ್ದರೂ ಒಂದು ರೀತಿಯಲ್ಲಿ ಅಂತರಗಂಗೆಯಂತೆ ಗುಪ್ತಗಾಮಿನಿಯಾಗಿ ಇಡೀ ಕಾಡುಗೊಲ್ಲರ ಸಂಸ್ಕೃತಿಯ ವಿನ್ಯಾಸದೊಳಗೆಲ್ಲ ಒಡಬೆರತಿರುವ ಅನುಭವವಾಗಿ ರೋಮಾಂಚನಗೊಂಡೆ. ಇದು ನನ್ನ ಅಧ್ಯಯನವನ್ನು ಮತ್ತೊಂದು ನಿಟ್ಟಿನಿಂದ ನೋಡುವಂತೆ, ಹೊಸ ರೀತಿಯಲ್ಲಿ ವ್ಯಾಖ್ಯಾನಿಸುವಂತೆ, ಹೊಸ ರೀತಿಯಲ್ಲಿ ಕಟ್ಟುವಂತೆ ಮಾಡಿತು. ಹೀಗೆ ನನ್ನ ಗಮನಕ್ಕೆ ಬಂದು, ನನ್ನ ಮಾಹಿತಿಕೋಶದೊಳಗೆ ನಿದ್ರೆ ಮಾಡುತ್ತಿದ್ದ ಸಂಗತಿಗಳಿಗೆ ಜೀವ ಬಂದು ಅನೇಕ ಬಗೆಯ ಲೇಖನಗಳಾಗಿ ರೂಪುಗೊಂಡವು. ಅವು ನನ್ನ ಈ ಹಿಂದಿನ ಕೃತಿಗಳಾದ 'ದುರುಗ ಜಾನಪದ' ಮತ್ತು 'ಗೊಲ್ಲಕಡಗ'ಗಳಲ್ಲಿ ಬೆಳಕು ಕಂಡಿವೆ. ಹೀಗಾಗಿ ಕಾಡುಗೊಲ್ಲರಿಗಷ್ಟೇ ಕೇಂದ್ರಿಕೃತಗೊಂಡಿದ್ದಂತಹ ನನ್ನ ಆಸಕ್ತಿ 'ದುರುಗ'ದ ಇತರ ಬುಡಕಟ್ಟು, ಜಾತಿಗಳತ್ತ ಹರಿಯಿತು. ಚಿತ್ರದುರ್ಗ ಸೀಮೆ ಕೊನೆಯಿಲ್ಲದ ಬೆರಗಿನ ಗಣಿ ಎಂಬುದು ಮನದಟ್ಟಾಗುತ್ತಾ ಹೋಯಿತು. ಆದರೆ ಕ್ಷೇತ್ರಕಾರ್ಯದ ಮೂಲಕ ನನ್ನ ಅಧ್ಯಯನ ಮ್ಯಾಸಬೇಡರನ್ನು ಬೇಟೆ ಸಂಸ್ಕೃತಿಯ ಕನ್ನಡದಿಂದ ನೋಡುವುದನ್ನು ಬಿಟ್ಟು (ನನ್ನ ಹಳೆಯ ಲೇಖನಗಳಲ್ಲಿ ಈ ಬಗೆಯ ಗೊಂದಲವಿದೆ). ಪಶುಪಾಲಕ ಸಂಸ್ಕೃತಿಯ ಕನ್ನಡದಿಂದ ನೋಡತೊಡಗಿದಾಗ ಮ್ಯಾಸಮಂಡಲ ಹೊಸ ರೀತಿಯಲ್ಲಿ ಕಾಣತೊಡಗಿತು. ಆಳಕ್ಕೆ ಹೋದಂತೆಲ್ಲಾ ಹಳೆಯ ಬೇರಿಗೆ ಹೊಸ ಚಿಗುರುಗಳು ಮೂಡತೊಡಗಿದವು. ಅವುಗಳನ್ನು ಅವಕಾಶವಾದಾಗಲೆಲ್ಲ ದಾಖಲಿಸುತ್ತಾ ಬಂದೆ. ಕ್ಷೇತ್ರಕಾರ್ಯದ ಮೂಲಕ ಮತ್ತಷ್ಟು ಬೆಳೆಯುತ್ತಾ ಬಂದೆ. ನಾನು ಈ ಹಿಂದೆ ಬರೆದ ಲೇಖನಗಳನ್ನು ಹೊಸ ಮಾಹಿತಿಗಳಿಂದ ವಿಸ್ತರಿಸಿದೆ. ನನ್ನ ಆಲೋಚನಾ ಕ್ರಮದಲ್ಲಿ ಆದ ಬದಲಾವಣೆಯನ್ನು ಹೊಸ ಲೇಖನಗಳಲ್ಲಿ ಗುರುತಿಸಬಹುದು.

'ಮ್ಯಾಸಬೇಡರನ್ನು ಕುರಿತ ನಿಮ್ಮ ಎಲ್ಲ ಲೇಖನಗಳು ಒಂದು ಕಡೆ ಸಂಕಲನಗೊಂಡು ಬಂದರೆ ಆ ಸಂಸ್ಕೃತಿಯ ಒಂದು ಸ್ಪಷ್ಟ ಚಿತ್ರ ದೊರೆಯುತ್ತದೆ' ಎಂಬ ಅನಿಸಿಕೆಯನ್ನು ಆಗಾಗ್ಗೆ ವ್ಯಕ್ತಪಡಿಸುತ್ತಾ, ಒತ್ತಾಸೆ ಹೇರುತ್ತಿದ್ದವರು-ಪ್ರಿಯ ಶಿಷ್ಯರೂ, ಚಿತ್ರದುರ್ಗದ ಪಾಳೆಯಗಾರ ಅರಸರ ವಂಶಸ್ಥರೂ ಆದ ಟಿ.ಆರ್. ವೀರಭದ್ರನಾಯಕರು. ಇದರೊಂದಿಗೆ 'ನಮ್ಮ ಮ್ಯಾಸಬೇಡ ಸಂಸ್ಕೃತಿಯನ್ನು ಕುರಿತು ನೀವೇ ಅಧ್ಯಯನ ಮಾಡಿ ಪುಸ್ತಕ ಬರೆದಿದ್ದರೆ ನಮ್ಮ ಜನಾಂಗದವರು ಧನ್ಯರಾಗುತ್ತಿದ್ದರು' ಎಂಬಂತಹ ತಲೆ ತಿರುಗಿಸುವಂತಹ ಮಾತುಗಳು ಆಡುತ್ತಾ ಪ್ರಚೋದಿಸುತ್ತಿದ್ದ ಸಿ.ಟಿ.ರಾಮಣ್ಣ, ಟಿ.ತಿಪ್ಪೇಸ್ವಾಮಿಯವರಂತಹ ಅಭಿಮಾನಿಗಳು ಒತ್ತಡ ನನ್ನ ಮೇಲಿತ್ತು; ಇದಕ್ಕೆ ಚಿತ್ರದುರ್ಗದ ಸುಪ್ರಸಿದ್ಧ ಸಂಶೋಧಕರೂ, ಆತ್ಮೀಯ ಗೆಳೆಯರೂ ಆದ ಪ್ರೊ॥ ಬಿ. ರಾಜಶೇಖರಪ್ಪ ಮತ್ತು ಪ್ರೊ॥ ಲಕ್ಷ್ಮಣ್ ತೆಲಗಾವಿ ಅವರ ಬೆಂಬಲವೂ ಇತ್ತು. ಹೀಗೆ ಏನಾದರೊಂದು ಮಹತ್ವದುದನ್ನು ಬರೆಯಬೇಕೆಂಬ ಹಂಬಲ ಎದೆಯಲ್ಲಿ ಗೂಡುಗಟ್ಟತೊಡಗಿತು. ಅವಕಾಶಕ್ಕಾಗಿ ಕಾಯುತ್ತಿದ್ದಾಗ ವರದಂತೆ ನೆರವಿಗೆ ಬಂದದ್ದು-ಪ್ರಜಾವಾಣಿಯ ಸಂಪಾದಕರಾದ ಗಂಗಾಧರ ಮೊದಲಿಯಾರ್ ಅವರಿಂದ ದೀಪಾವಳಿ ವಿಶೇಷಾಂಕದ ಆಹ್ವಾನ. ಇದಕ್ಕಾಗಿ ಬರೆಯಲಿದ್ದ 'ಪಶುಪಾಲಕ ಮ್ಯಾಸಬೇಡರು' ಲೇಖನಕ್ಕಾಗಿ ಮತ್ತಷ್ಟು ಆಳವಾದ ಕ್ಷೇತ್ರಕಾರ್ಯ ಮಾಡುವುದು ಆವಶ್ಯಕ ಎನಿಸಿತು. ಜೊತೆಗೆ ಇದೇ ಸಂದರ್ಭದಲ್ಲಿ ಮ್ಯಾಸಬೇಡರ ಸಾಂಸ್ಕೃತಿಕ ನೆಲೆಗಳನ್ನೆಲ್ಲಾ ಆಮೂಲಾಗ್ರವಾಗಿ ನೋಡಿ ಬಿಡಬೇಕೆಂಬ ಹಂಬಲ ತೀವ್ರವಾಗತೊಡಗಿತು. ಆಗ ವಾಹನ ಸೌಕರ್ಯ ಒದಗಿಸುವ ಮೂಲಕ ನೇರವಿಗೆ ಬಂದವರು- ನಾಯಕ ಜನಾಂಗಕ್ಕೊಂದು ಸಾಂಸ್ಕೃತಿಕ ಕಣ್ಣುಕೊಟ್ಟ, ಕರ್ನಾಟಕ ಸರ್ಕಾರದ ಮಾಜಿ ಮಂತ್ರಿಗಳಾದ ತಿಪ್ಪೇಸ್ವಾಮಿ ಅವರು. ಹೀಗೆ ಕೆಲಸದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಸಹಾಯ ಹಸ್ತ ಚಾಚಿರುವ ಇವರೆಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

ಮ್ಯಾಸಮಂಡಲದ ಭೌಗೋಳಿಕ ವ್ಯಾಪ್ತಿಯೊಳಗೆ ಬದುಕುತ್ತಿರುವ ಕಾಡುಗೊಲ್ಲರು, ಕುಂಚಿಟಗರನ್ನು ಕುರಿತ ಒಂದೆರಡು ಲೇಖನಗಳಲ್ಲದೆ ಈ ನೆಲದ ಸಾಂಸ್ಕೃತಿಕ ಮಹತ್ವ ಸಾರುವ ಕಲಾವಿದರನ್ನು ಪರಿಚಯಿಸುವ, ಈ ಭಾಗದ ಜನಪದ ಕಾವ್ಯ ಪ್ರಕಾರಗಳನ್ನು ಕುರಿತು ತಾತ್ವಿಕವಾಗಿ ಚಿಂತಿಸುವ ಲೇಖನಗಳೂ ಇಲ್ಲಿ ಸೇರುವುದರೊಂದಿಗೆ ಒಂದು ಪ್ರದೇಶದ ಸಂಸ್ಕೃತಿಯ ಜಾನಪದದ ಚಿತ್ರ ಮೂಡಿಸುವಲ್ಲಿ ಯಶಸ್ವಿಯಾಗಿದೆ ಎಂದು ಆಶಿಸುತ್ತೇನೆ.

ಮ್ಯಾಸಬೇಡರನ್ನು ಕುರಿತ ಲೇಖನಗಳೆಲ್ಲವನ್ನು ಒಂದೆಡೆ ಸಂಕಲಿಸುವ ಕನಸನ್ನು ನನಸು ಮಾಡಿದವರು ನನ್ನ ಪುಸ್ತಕಗಳ ಪ್ರಕಾಶಕರಾದ ಸಿ.ವಿ.ಜಿ.

ಚಂದ್ರು ಅವರು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರೂ, ಸೃಜನಶೀಲ ವಿದ್ವಾಂಸರೂ ಆಗಿರುವ ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ್ ಅವರ ಬಳಿ ಸಾಂಸ್ಕೃತಿಕ ಮಹತ್ವದ ಈ ಕೃತಿಯನ್ನು ತಮ್ಮ ಸಂಸ್ಥೆಯ ವತಿಯಿಂದ ಪ್ರಕಟಿಸಬೇಕೆಂಬ ಪ್ರಸ್ತಾವನೆಯನ್ನು ಮುಂದಿಟ್ಟಾಗ, ಅವರು ಸಂತೋಷದಿಂದ ಒಪ್ಪಿ ಹಸಿರು ನಿಶಾನೆ ತೋರಿಸಿಯೇ ಬಿಟ್ಟರು. ಆಗ ಕೂತು ಈ ಲೇಖನಗಳನ್ನೆಲ್ಲಾ ಅಲ್ಲಲ್ಲಿ ಕೈಯಾಡಿಸಿ, ಈವರೆವಿಗೂ ನಾನು ಸಂಗ್ರಹಿಸಿದ ಹೆಚ್ಚುವರಿ ಮಾಹಿತಿಗಳೆಲ್ಲವನ್ನೂ ತುಂಬುವ ಪ್ರಯತ್ನ ಮಾಡಿದ್ದೇನೆ. ಸಾಂದರ್ಭಿಕ ಮಿತಿಗಳಿಗೆ ಅನುಗುಣವಾಗಿ ಬರೆದ ಲೇಖನಗಳಲ್ಲಿನ ವಿಷಯದ ಪುನರುಕ್ತಿಯನ್ನು ಲೇಖನದ ಬಿಟ್ಟು ಸ್ವರೂಪಕ್ಕೆ ಭಂಗಬರದಂತೆ ಸಾಧ್ಯವಾದಷ್ಟೂ ಪರಿಷ್ಕರಿಸುವ ಪ್ರಯತ್ನ ಮಾಡಿದ್ದೇನೆ. ನನ್ನನ್ನು ಸಂಸ್ಕೃತಿ ಕಟ್ಟುವ ಈ ಕೆಲಸದಲ್ಲಿ ತೊಡಗಿಸಿದ ಈ ಮಹನೀಯರನ್ನು ಪ್ರೀತಿಯಿಂದ ನೆನೆಯುತ್ತೇನೆ.

ನನ್ನ ಸಾಹಿತ್ಯ ಚಟುವಟಿಕೆಗಳಿಗೆ ಸದಾ ಪ್ರೋತ್ಸಾಹದ ನೀರೆರೆಯುವ ಸಹೋದರ, ಕವಿ ಸಿ. ಶಿವಲಿಂಗಪ್ಪ; ಟಿ.ತಿಮ್ಮರಾಜು ಹಾಗೂ ಚೆಳ್ಳಕೆರೆಯ ಶ್ರೀ ಚುಂಚನಗಿರಿ ಎಜುಕೇಷನ್ ಟ್ರಸ್ಟ್‌ನ ಎಲ್ಲಾ ಧರ್ಮದರ್ಶಿಗಳು, ಕಾಳೇಗೌಡ ನಾಗವಾರ, ಅಗ್ರಹಾರ ಕೃಷ್ಣಮೂರ್ತಿ, ವೆಂ. ಶ್ರೀನಿವಾಸ, ಆರ್.ಜಿ.ಹಳ್ಳಿ ನಾಗರಾಜ್, ಡಿ. ವಿ. ರಾಜಶೇಖರ, ಗಂಗಾಧರ ಮೊದಲಿಯಾರ್, ಗುಡಿಹಳ್ಳಿ ನಾಗರಾಜ್, ನಾಗೇಶ ಹೆಗಡೆ, ಅಬ್ಬೂರು ರಾಜಶೇಖರ, ಹರಿಯಬ್ಬೆ ಪ್ರೇಂಕುಮಾರ್, ಕಲಮರಹಳ್ಳಿ ಮಲ್ಲಿಕಾರ್ಜುನ, ಸಿ.ಜಿ.ಕೆ, ಜಿ.ವಿ. ಆನಂದಮೂರ್ತಿ ಅವರನ್ನು ಸ್ಮರಿಸುತ್ತೇನೆ.

ತಮ್ಮ ಪ್ರೀತಿಯ ಮಾತುಗಳಿಂದ ನನ್ನನ್ನು ಉತ್ತೇಜಿಸುವ ಹಿರಿಯ ಪತ್ರಕರ್ತ ಜಿ. ಎಸ್. ಉಜ್ಜನಪ್ಪ, ಕತೆಗಾರ ಟಿ. ಆರ್. ರಾಧಾಕೃಷ್ಣ, ಜಾನಪದ ವಿದ್ವಾಂಸರಾದ ಡಾ. ಎಂ. ಜಿ. ಈಶ್ವರಪ್ಪ, ಬಾಗೂರು ಆರ್. ನಾಗರಾಜಪ್ಪ, ಸೃಜನಶೀಲ ಲೇಖಕರಾದ ಆಗಸನಕಟ್ಟೆಯ ಪ್ರಹ್ಲಾದ-ಲೋಕೇಶ್ ಸೋದರರನ್ನು ನೆನೆಯದಿರಲಾರೆ.

ಸದಾ ಬೆನ್ನುತಟ್ಟುವ ಸಹೋದ್ಯೋಗಿಗಳಾದ ಬಿ.ಪಿ.ವೀರೇಂದ್ರಕುಮಾರ್ ಜಿ.ವೆಂಕಟೇಶ್, ಡಿ.ಶ್ರೀನಿವಾಸ, ಮಹೇಶ್, ಇ. ಮಹಾಲಿಂಗಪ್ಪ, ಎಸ್. ದೇವೇಂದ್ರ, ಶ್ರೀಮತಿ ಬಿ.ಡಿ.ಶೋಭ, ವೀರಾನಾಯಕ್, ಶ್ರೀಮತಿ ಶಾಂತವೀರಮ್ಮ, ರಾಮದಾಸ ರೆಡ್ಡಿ, ಜಗದೀಶ್, ವೀರೇಶ್, ಎಚ್.ಲಿಂಗಪ್ಪ, ರಂಗಪ್ಪ, ಶ್ರೀಮತಿ ವಿಜಯಾ ಕೋರಿಶೆಟ್ಟಿ, ವಿ.ನರೇಂದ್ರಪ್ಪ, ಬಿ.ಬಾಲರಾಜ, ಡಿ.ದೇವರಪ್ಪ, ಎಸ್.ಎಸ್.ಸುಳ್ಳದ್, ರಂಗಸ್ವಾಮಿ, ಗೋಪಾಲನಾಯಕ, ಟಿ.ಎಸ್.ಬಸವರಾಜು ಅವರ ಸಹಕಾರವನ್ನು ನೆನೆಯುತ್ತೇನೆ.

ಅಭಿಮಾನಿಗಳಾದ ಸಮಗ್ರಸುದ್ದಿ ಮಂಜುನಾಥ್ ಬಯಲುಸೀಮೆ ಸುದ್ದಿಯ ರಾಘವೇಂದ್ರ, ಯಾದಲಗಟ್ಟೆ, ಜಗನ್ನಾಥ, ಚಳ್ಳಕೆರೆ ವೀರಭದ್ರಯ್ಯ, ನೃತ್ಯ ನಿಕೇತನದ ಸುಧಾ-ವಿಷ್ಣುಮೂರ್ತಿರಾವ್, ಪ್ರಿಯ ಶಿಷ್ಯ ಎಚ್.ಎಸ್.ಸುಂದರ್‌ರಾಜ್(ಅಪ್ಪಿ) ಅವರನ್ನೂ ನೆನೆಯುತ್ತೇನೆ.

ಈ ಪುಸ್ತಕವನ್ನು ಹೊರತರುವಲ್ಲಿ ಆಸಕ್ತಿವಹಿಸಿದ ಪುಸ್ತಕ ಪ್ರಾಧಿಕಾರದ ಸಹಾಯಕ ನಿರ್ದೇಶಕರಾದ ಎ.ಕೆ. ಬಸವರಾಜಪ್ಪ, ಆಡಳಿತಾಧಿಕಾರಿಗಳಾದ ಎನ್. ತಿಪ್ಪೇಸ್ವಾಮಿ ಮತ್ತು ಕೃತಿಗೆ ಅರ್ಥಪೂರ್ಣವಾದ ಮುಖಪುಟ, ಛಾಯಾರೇಖಾಚಿತ್ರ ರಚಿಸಿದ ಕಲಾವಿದ ಮಿತ್ರ ಪುಂಡಲೀಕ ಕಲ್ಲಿಗನೂರು, ಡಿ.ಟಿ.ಪಿ. ಮಾಡಿದ ಆರ್. ಮೋಹನ್ ಸಿಂಗ್, ಮುದ್ರಿಸಿದ ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಮಾಲೀಕರಾದ ಚಂದ್ರು ಅವರಿಗೆ ವಂದನೆಗಳು ಸಲ್ಲುತ್ತವೆ.

ನನ್ನ ಎಲ್ಲ ಕಷ್ಟ-ಸುಖಗಳಿಗೆ ಹೆಗಲುಕೊಟ್ಟ ಷಡಕರಾದ ಶ್ರೀಧರ್-ರಂಗಸ್ವಾಮಿ-ಶಂಕರ್, ನಾದಿನಿಯರಾದ ನಾಗರತ್ನ-ಲೀಲ-ಮಂಜು ಮತ್ತು ಜೀವನ ಸಂಗಾತಿ ಶ್ರೀಮತಿ ವಸಂತ ಅವರನ್ನು ನೆನೆಯದಿದ್ದರೆ ಕರ್ತವ್ಯಲೋಪವಾದೀತು.

ಚಳ್ಳಕೆರೆ.

ತಾ|| 10-12-2003 ಡಾ|| ಮೀರಾಸಾಬಿಹಳ್ಳಿ ಶಿವಣ್ಣ

# ಮ್ಯಾಸಮಂಡಲದೊಳಗೆ ಒಂದು ಸುತ್ತು



# ನಾಯಕ ಜನಾಂಗ : ಒಂದು ನೋಟ

ಬುಡಕಟ್ಟು ಜನಾಂಗಗಳ ಅಧ್ಯಯನ ನಮ್ಮ ಸಾಂಸ್ಕೃತಿಕ ತಿಳುವಳಿಕೆಗೆ, ಸಮಾಜದ ಬಗೆಗಿನ ಒಳನೋಟಗಳಿಗೆ ಹೊಸ ಆಯಾಮಗಳನ್ನು ಒದಗಿಸುತ್ತದೆ. ಇಂತಹ ಸಾಂಸ್ಕೃತಿಕ - ಸಾಮಾಜಿಕ ಅಧ್ಯಯನ ಬ್ರಿಟಿಷರು ಭಾರತವನ್ನು ಆಳುತ್ತಿದ್ದ ಕಾಲದಿಂದಲೇ ನಡೆದು ಬಂದಿದೆ. ಅನೇಕ ವಿದೇಶಿ ವಿದ್ವಾಂಸರು ಈ ದಿಸೆಯಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ವೆರಿಯರ್ ಎಲ್ವಿನ್‌ರಂತಹ ವಿದ್ವಾಂಸರು ಭಾರತದ ಅನೇಕ ಬುಡಕಟ್ಟುಗಳ ಬಗ್ಗೆ ಸಂಶೋಧನೆ ಕೈಗೊಂಡು ಅವರ ಉದ್ಧಾರಕ್ಕಾಗಿ ತಮ್ಮ ಬದುಕನ್ನೇ ಅರ್ಪಿಸಿಕೊಂಡಿದ್ದರು.

ಕರ್ನಾಟಕ ಪ್ರಧಾನ ಬುಡಕಟ್ಟುಗಳಾದ ಮ್ಯಾಸನಾಯಕರು ಮತ್ತು ಕಾಡುಗೊಲ್ಲರನ್ನು ಕುರಿತು ಸಾಕಷ್ಟು ಅಧ್ಯಯನಗಳು ಇ. ಥರ್ಸ್ಟನ್[1], ಎಲ್. ಕೆ. ಅನಂತಕೃಷ್ಣ, ಅಯ್ಯರ್ ಮತ್ತು ಹೆಚ್. ವಿ. ನಂಜುಂಡಯ್ಯ[2], ಡಾ|| ತೀ. ನಂ. ಶಂಕರನಾರಾಯಣ[3], ಮತ್ತು ಡಾ||ಕಾಳೇಗೌಡ ನಾಗವಾರ[4] ಅವರನ್ನು ಮೊದಲುಗೊಂಡು ಹಲವಾರು ನಡೆದಿದ್ದರೂ, ಇನ್ನೂ ಯಾರ ಗಮನಕ್ಕೂ ಬಾರದಿರುವ ನಾಯಕ ಜನಾಂಗದ ಕೆಲವು ಆಚಾರ-ವಿಚಾರಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸ ಬಯಸುತ್ತೇನೆ.

ಕರ್ನಾಟಕದ ಉದ್ದಗಲಕ್ಕೂ ಹರಡಿರುವ ಈ ಬುಡಕಟ್ಟು ರಾಯಚೂರು, ಬಳ್ಳಾರಿ ಜಿಲ್ಲೆಗಳ ಪೂರ್ವ ಭಾಗದಲ್ಲಿ ಹೆಚ್ಚಾಗಿಯೂ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಅತಿದಟ್ಟವಾಗಿಯೂ ನೆಲೆಸಿದ್ದಾರೆ. ನೆರೆಯ ಆಂಧ್ರಪ್ರದೇಶದ ಅನಂತಪುರ, ಕರ್ನೂಲು ಜಿಲ್ಲೆಗಳಲ್ಲಿಯೂ ಸಾಕಷ್ಟು ಸಂಖ್ಯೆಯಲ್ಲಿ ವಾಸಿಸುತ್ತಿದ್ದಾರೆ. ಆದರೆ ಈ ಜನ ಸಾಮಾಜಿಕವಾಗಿ, ಆರ್ಥಿಕವಾಗಿ ಅತ್ಯಂತ ಹಿಂದುಳಿದಿದ್ದು ಭಾರತ ಮತ್ತು

---

1. E. Thurston : Castes and Tribes of Southern India, Vol. I, A&B, COSMO PUBLICATIONS, DELHI, 1975.
2. L. K. Anantha Krishna Iyer & H. V. Nanjundiah : The Mysore Tribes & Castes, Mysore University, Mysore.
3. ಡಾ|| ತೀ.ನಂ.ಶಂಕರನಾರಾಯಣ: ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು. ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, 1982.
4. ಡಾ|| ಕಾಳೇಗೌಡ ನಾಗವಾರ:ಬುಡಕಟ್ಟು ಹಟ್ಟಿ-ಒಂದು ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ.)

ಕರ್ನಾಟಕದ ಸರ್ಕಾರಗಳು ಕ್ರಮವಾಗಿ 'ಎಸ್.ಟಿ.' ಮತ್ತು 'ಬಿ.ಟಿ.' ಸವಲತ್ತುಗಳನ್ನು ನೀಡಿವೆ. (ಈಗ ಕರ್ನಾಟಕ ಸರ್ಕಾರ ಇವರನ್ನು ಎಸ್.ಟಿ. ಎಂದು ಗುರುತಿಸಿದೆ.)

ಇವರು ಮೂಲತಃ ಆಂಧ್ರಪ್ರದೇಶದ ಶ್ರೀಶೈಲದ ಬಳಿಯ ಕರಿಮಲೆ-ಕೊಮ್ಮಮಲೆ[5]ಗಳ ಕಡೆಯಿಂದ ಮತ್ತು ತಿರುಪತಿ ಬಳಿಯ ಜಡೇಕಲ್ಲುದುರ್ಗ[6]ದ (ಇದು ಆಂಧ್ರದ ಕಡಪ ಜಿಲ್ಲೆಯಲ್ಲಿ ಇದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.) ಕಡೆಯಿಂದ ವಲಸೆ ಬಂದ ಜನ. ಮೂಲತಃ ಬೇಟೆಗಾರರೂ, ಪಶುಪಾಲಕರೂ ಆದ ಈ ಜನ ಹುಲ್ಲು ನೀರು ಹುಡುಕುತ್ತಾ ದೇಶಾಂತರ ಬಂದವರು. ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರ ಕರ್ನಾಟಕದತ್ತ ವಲಸೆ ಬರತೊಡಗಿದ ಈ ಜನ ವೀರಯೋಧರಾಗಿದ್ದರು, ಯುದ್ಧ ಪ್ರೇಮಿಗಳಾಗಿದ್ದರು. ಹೀಗಾಗಿ ಇವರಿಗೆ ಸಮಾಜದಲ್ಲಿ ಹೆಚ್ಚಿನ ಸ್ಥಾನ-ಮಾನಗಳು ಸಹಜವಾಗಿ ದೊರೆತವು.

ಇವರ ಮನೆಯ ಮಾತು ತೆಲುಗು. ಈ ಜನಾಂಗದ ಚರಿತ್ರೆಗೆ ಸಂಬಂಧಿಸಿದ ಎಷ್ಟೋ ದಾಖಲೆಗಳು ತೆಲುಗಿನಲ್ಲಿ ಸಿಗುತ್ತವೆ. ಆದರೆ ಇವರು ಕನ್ನಡ ಪ್ರಾಂತ್ಯಗಳಲ್ಲಿ ನೆಲೆಸಿದ ನಂತರ ದಾಖಲೆಗಳು ಕನ್ನಡದಲ್ಲಿಯೂ ಸಿಗುತ್ತವೆ. ಇಂದು ಕನ್ನಡ ಪ್ರಾಂತ್ಯಗಳಲ್ಲಿ ನೆಲೆಸಿರುವ ಇವರ ತೆಲುಗು ಬಹುಪಾಲು ಕನ್ನಡ ಮಿಶ್ರವಾಗಿದ್ದು ತನ್ನದೇ ಆದ ವಿಚಿತ್ರ ಶೈಲಿಯನ್ನು ಹೊಂದಿದೆ. ಇವರ 'ತೆಲುಗನ್ನಡ' ಭಾಷಾ ವಿಜ್ಞಾನದ ದೃಷ್ಟಿಯಿಂದ ಕುತೂಹಲಕರವಾದ ಅಧ್ಯಯನವಾಗುತ್ತದೆ.

ಇವರು ತಮ್ಮನ್ನು ಬೇಡರು (ಬ್ಯಾಡರು), ವಾಲ್ಮೀಕಿಗಳು, ಪರಿವಾರದವರು, ಮ್ಯಾಸಬೇಡರು (ಮ್ಯಾಸ ನಾಯಕರು), ತಳವಾರರು, ನಾಯ್ಕರು, ಪಾಳ್ಳೇಗಾರರು ಎಂದು ನಾನಾ ಹೆಸರುಗಳಲ್ಲಿ ಕರೆದುಕೊಳ್ಳುತ್ತಾರೆ. ತೆಲುಗಿನಲ್ಲಿ ಇವರನ್ನು 'ಬೋಯ ಅಥವಾ ಬೇಡರ್' ಎಂದು ಗುರುತಿಸುತ್ತಾರೆ.

''ಬೇಡರೆಂದು ಕರೆದುಕೊಳ್ಳಬೇಕಾದ ಜನರು ನಾನಾ ಹೆಸರುಗಳನ್ನು ಇಟ್ಟುಕೊಂಡಿದ್ದಾದರೂ ಹೇಗೆ? ಅದಕ್ಕೆ ಅಂದಂದಿನ ಸನ್ನಿವೇಶಗಳೇ ಕಾರಣ. ವಾಲ್ಮೀಕಿ ಸಂತತಿಯವರು ತಮ್ಮ ಪ್ರಸಿದ್ಧ ಪೂರ್ವಿಕನ ಹೆಸರಿನಲ್ಲಿ ತಮ್ಮನ್ನು ವಾಲ್ಮೀಕಿಗಳೆಂದು ಕರೆದುಕೊಂಡು ಸಂತೃಪ್ತಿ ಪಡೆದಿದ್ದಾರೆ. ಕಾಡುಗಳಲ್ಲಿದ್ದು ಪಶುಪಾಲನೆಯನ್ನು ಮುಖ್ಯವೃತ್ತಿಯನ್ನಾಗಿ ಅವಲಂಬಿಸಿದವರು ತಮ್ಮ ಸಾಕು ಪ್ರಾಣಿಗಳನ್ನು ಕಾಡಿನಿಂದ ಕಾಡಿಗೆ ಅಟ್ಟಿಕೊಂಡು ಹೋಗಿ ಪೋಷಿಸುತ್ತಿದ್ದುದರ ಮೇಲೆ ತಮ್ಮನ್ನು ಕಾಡುಸಂಚರು ಎಂದು ಕರೆದುಕೊಂಡಿದ್ದಾರೆ. ಮೂಗನಾಯಕನ ಅನುಯಾಯಿಗಳೆಲ್ಲಾ ತಮ್ಮನ್ನು ನಾಯಕರೆಂದು ಕರೆದುಕೊಳ್ಳುತ್ತಾರೆ. ಪಾಳೆಯಗಾರರ ಸಂತತಿಯವರು ತಮ್ಮನ್ನು ಪಾಳ್ಳೆಗಾರರು ಅಥವಾ ದೊರೆಗಳು ಎಂದು ಕರೆದುಕೊಳ್ಳುತ್ತಾರೆ. ಹಗಲಿರುಳೂ ಗ್ರಾಮಗಳ ರಕ್ಷಣಾಕಾರ್ಯಕ್ಕೆ ನಿಯಮಿಸಲ್ಪಟ್ಟವರ

---

5. ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್: 1967. ಪುಟ 60.
6. ಅದೇ, ಪುಟ 53

ಸಂತತಿಯವರು ತಮ್ಮನ್ನು ತಳವಾರರೆಂದು ಕರೆದುಕೊಳ್ಳುತ್ತಾರೆ. ಕೆಲವರು ಹಿಂದಿನಿಂದಲೂ ಉಪಯೋಗಿಸುತ್ತಿದ್ದ ಶಬರ, ಕಿರಾತ, ಭಿಲ್ಲವ ಪದಗಳನ್ನೇ ತಮ್ಮ ಜಾತಿಯೆಂದು ಉಳಿಸಿಕೊಂಡಿದ್ದಾರೆ''[7] ಎಂಬುದು ರಾಜನ ರಾಜಣ್ಣನವರ ವಾದ.

"ಕ್ಷತ್ರಿಯ ಕುಲನಾಶಕ್ಕೆ ಗಂಡುಗೊಡಲಿ ಹಿಡಿದು ಹೊರಟ ಪರಶುರಾಮನ ಹಾವಳಿಯಿಂದ ತಲೆತಪ್ಪಿಸಿಕೊಂಡು ಕಾಡು ಸೇರಿದ ಕ್ಷತ್ರಿಯರು ತಮ್ಮನ್ನು 'ನಾಯಕರು' ಎಂದು ಕರೆದುಕೊಂಡರು ಕ್ರಮೇಣ ತಾವು ಕಟ್ಟಿದ ಸಾಮ್ರಾಜ್ಯಗಳನ್ನು ಮರೆತು, ಕಾಡಿನ ಬದುಕಿನೊಂದಿಗೆ ಬೆರೆತುಹೋಗಿ 'ಕಿರಾತ'ರೆನಿಸಿಕೊಂಡರು''[8] ಎಂಬ ವಿಶಿಷ್ಟ ವ್ಯಾಖ್ಯಾನ ಹರತಿ ವೀರನಾಯಕರದು.

ಪುರಾಣಕಾಲದ ವಾಲ್ಮೀಕಿ, ಧರ್ಮವ್ಯಾಧ, ಬೇಡರ ಕಣ್ಣಪ್ಪ, ಏಕಲವ್ಯ, ಶಬರಿಯರನ್ನು ಬಿಟ್ಟರೆ ಕ್ರಿ.ಶ. 9ನೇ ಶತಮಾನಕ್ಕೆ ಸೇರಿದ 'ವಡ್ಡಾರಾಧನೆ' ಎಂಬ ಹಳಗನ್ನಡ ಗದ್ಯಕೃತಿಯ ಅನೇಕ ಕತೆಗಳಲ್ಲಿ ನಗರ ರಕ್ಷಣೆಯಲ್ಲಿ ನಿರತನಾದ 'ತಳವಾರ'ನ ಉಲ್ಲೇಖವನ್ನು ಕಾಣಬಹುದು. ಇವರೆಲ್ಲರನ್ನೂ ಒಟ್ಟಾಗಿ 'ನಾಯಕರು' (ಇತ್ತೀಚೆಗೆ ಹೆಮ್ಮೆಯಿಂದ 'ಪಾಳೇಗಾರರು') ಎಂದು ಕರೆಯುವುದು ವಾಡಿಕೆಯಾಗಿದೆ. ಆದರೆ ಇವರಲ್ಲಿ 'ಮ್ಯಾಸ ನಾಯಕರು, ಊರು ನಾಯಕರು ಮತ್ತು ಪಾಳೆಯಗಾರರು' ಎಂಬ ಪ್ರಧಾನವಾದ ಪಂಗಡಗಳಿವೆ.

**1. ಮ್ಯಾಸ ನಾಯಕರು:** ಬೇರೆಲ್ಲ ಪಂಗಡಗಳಿಗಿಂತಲೂ ಅತಿಹೆಚ್ಚಿನ ಜನಸಂಖ್ಯೆ ಚಿತ್ರದುರ್ಗ ಪ್ರಾಂತ್ಯದಲ್ಲಿ ಇದೆ. ಸಹಜವಾಗಿ ಕೃಷ್ಣಕಾಯರಾದ ಈ ಜನಗಳಲ್ಲಿ ಗಿರಿಜನ ಾಂಗದ ಪ್ರಾಚೀನ ಲಕ್ಷಣಗಳನ್ನು, ಆಚಾರ ವಿಚಾರಗಳನ್ನು ಕಾಣಬಹುದು. ಇವರಲ್ಲಿ 'ಮಂದಲೋರು, ಮಲ್ಲನಾಯಕನೋರು' ಎಂಬ ಎರಡು ಪ್ರಧಾನ ಒಳಪಂಗಡಗಳಿವೆ. ಇವರು ಕ್ರಮವಾಗಿ ವಿಷ್ಣು, ಶಿವನ ಆರಾಧಕರಾಗಿರುತ್ತಾರೆ. ಮಲೆಲೋರು ಎಲ್ಲ ಬೆಡಗುಗಳ ಒಳಪಂಗಡಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾರೆ, ಅಂದರೆ ಇವರು ಎಲ್ಲ ಕುಲಕ್ಕೂ (ಬೆಡಗು) ನೆಂಟರಾಗಿ ನಡೆದುಕೊಳ್ಳುತ್ತಾರೆ. (ಕುಂಚಿಟಿ ವಕ್ಕಲಿಗರಲ್ಲಿ ಈ ಬೆಡಗನ್ನೇ ಹೋಲುವ 'ಒಳಕಲ್ಲೋರು' ಎಂಬ ಅಪರೂಪದ ಬೆಡಗಿದೆ).

ಇವರಲ್ಲಿರುವ 'ಎನುಮಲೋರು' (ಎಮ್ಮೆಯವರು) ಎಂಬ ಬೆಡಗು ಇದೆ. (ಕುಂಚಿಟಿ ವಕ್ಕಲಿಗರಲ್ಲೂ ಇದನ್ನೇ ಹೋಲುವ 'ಎಮ್ಮೆನೋರು' ಎಂಬ ಬೆಡಗು ಇದೆ). ಇವಲ್ಲದೆ ಅಲ್ಪ ಜನಸಂಖ್ಯೆ ಇರುವ ಅನೇಕ ಬೆಡಗುಗಳು ಇವೆ. (ಈ ಬೆಡಗುಗಳು ಅಣ್ಣ-ತಮ್ಮಂದಿತನ, ನೆಂಟತನ ನಿರ್ಧರಿಸಲು ಸಹಾಯಕವಾಗುತ್ತವೆ).

ಕಾಡುಗೊಲ್ಲರಿಗೂ ಮ್ಯಾಸನಾಯಕರಿಗೂ ಅತ್ಯಂತ ಹತ್ತಿರದ ಅನೇಕ ಹೋಲಿಕೆಗಳಿರುವುದು ಸಮಾಜ ವಿಜ್ಞಾನಿಗಳಿಗೆ ಆಶ್ಚರ್ಯವನ್ನು ಉಂಟುಮಾಡುವುದರೊಂದಿಗೆ ಇವೆರಡೂ ಬುಡಕಟ್ಟುಗಳು ಮೂಲದಲ್ಲಿ ಒಂದೇ ಆಗಿದ್ದಿರಬಹುದೆಂಬ ಅನುಮಾನವನ್ನು ಹುಟ್ಟು

---

7. ರಾಜನ ರಾಜಣ್ಣ : ನಾಯಕ ಜನಾಂಗದ ಇತಿಹಾಸ, ಚಳ್ಳಕೆರೆ, 1982, ಪುಟ 8.
8. ಹೆಚ್.ವಿ. ವೀರನಾಯಕ: ಕ್ಷಾತ್ರಾಂಶ ಪ್ರಬೋಧ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಹಿರಿಯೂರು ತಾ॥, ಚಿತ್ರದುರ್ಗ ಜಿಲ್ಲೆ.

ಹಾಕುತ್ತವೆ. ಇಂತಹುದೇ ಸಾಮ್ಯಗಳು ಕುರುಬ ಮತ್ತು ಕುಂಚಿಟಿ ಒಕ್ಕಲಿಗ ಜಾತಿಗಳೊಳಗೂ ಕಾಣಬಹುದು.

ಪ್ರಚಲಿತವಿರುವ ಜನಪದ ಕತೆ[9]ಯೊಂದರ ಪ್ರಕಾರ, ಈಗ ಮ್ಯಾಸಬ್ಯಾಡರು ಮತ್ತು ಕಾಡುಗೊಲ್ಲರು ಎಂದು ಕರೆಯಲ್ಪಡುವ ಇವರು ಒಂದೇ ತಾಯಿಯ ಮಕ್ಕಳಂತೆ ಇಬ್ಬರೂ ಗೋಪಾಲಕರಾಗಿದ್ದರು. ಬರ ಬಂದಾಗ ದನಗಳನ್ನು ಪಡುವಲ ಸೀಮೆಗೆ ತಿರುಗಿಸಿದರು. ಬಹಳಷ್ಟು ದಿನಗಳಿಂದ ಆಹಾರವಿಲ್ಲದೆ ಹಸಿವಿನಿಂದ ಕಂಗೆಟ್ಟಿದ್ದವನು ತಡೆಯಲಾರದೆ, ಆಗ ತಾನೆ ಈದ (ಜನನವಾದ) ಕುಂಟ ಆಕಳು ಕರುವಿನ ತೊಡೆಯನ್ನು ಕಿತ್ತುಕೊಂಡು ತಿಂದನಂತೆ. ಇದನ್ನು ನೋಡಿದ ದೊಡ್ಡವನು 'ಅಯ್ಯೋ, ಕಂಕಾ (ಅನಾಗರಿಕ) ಎಂಥಾ ಕೆಲಸ ಮಾಡಿದಿಯೋ' ಎಂದು ಬಯ್ದನಂತೆ; ಅಂದಿನಿಂದ ಅವರು ಬೇರೆಯಾದರಂತೆ. 'ಕಂಕಾ' ಎಂದು ಕರೆಯಲ್ಪಟ್ಟವನು ಮುಂದೆ 'ಮ್ಯಾಸ ನಾಯಕ' ನೆನಿಸಿಕೊಂಡನಂತೆ : ಉಳಿದವನು ತನ್ನ 'ಗೊಲ್ಲ'ತನವನ್ನು ಹಾಗೇ ಉಳಿಸಿಕೊಂಡನಂತೆ[9ಅ]. ಇದನ್ನು ಸಮರ್ಥಿಸುವಂತೆ ಕೆಲವು ಮ್ಯಾಸಬೇಡರು ಇಂದಿಗೂ ದನದ ಮಾಂಸ ಭಕ್ಷಣೆ ಮಾಡುತ್ತಿದ್ದಾರೆ. ಗ್ರಾಮದೇವತೆಯ ಜಾತ್ರೆಯಲ್ಲಿ ಬಲಿ ನೀಡುವ ಕೋಣದಲ್ಲಿ ಮಾದಿಗರವನಿಗೆ 'ಬಿದ್ದ ಮಗ್ಗಲು' (ಕೆಳಮಗ್ಗಲು), ತಳವಾರನಿಗೆ 'ಎದ್ದಮಗ್ಗಲು' (ಮೇಲು ಮಗ್ಗಲು) ಸಲ್ಲತಕ್ಕದ್ದೆಂಬ ನಿರ್ಣಯವೇ ಕೈವಾಡದವರಲ್ಲಿ ಇದೆ[9ಆ]. ಗೋಮಾಂಸ ಭಕ್ಷಣೆ ಇತ್ತೀಚಿನ ದಿನಗಳಲ್ಲಿ ಮಾಯವಾಗಿದೆ. ಆದರೆ ಹಳೆಯ ಕಾಲದ ಕೆಲವು ಮ್ಯಾಸಬೇಡರ ಹಿರಿಯರು ಗೋಮಾಂಸ ಭಕ್ಷಣೆಯಲ್ಲಿ ಯಾವ ತಪ್ಪೂ ಇಲ್ಲ ಎನ್ನುತ್ತಾರೆ[9ಇ]

ಈ ಕತೆಯನ್ನು ಸಮರ್ಥಿಸುವಂತೆ ಅನೇಕ ಆಚಾರ-ವಿಚಾರಗಳು ಒಂದೇ ಆಗಿರುವುದನ್ನು ಈ ಕೆಳಕಂಡಂತೆ ಗುರುತಿಸಬಹುದು. ಗೊಲ್ಲರಲ್ಲಿ-ಕಾಡುಗೊಲ್ಲರು, ಊರುಗೊಲ್ಲರು ಇರುವಂತೆ, ನಾಯಕರಲ್ಲಿ ಮ್ಯಾಸನಾಯಕರು, ಊರು ನಾಯಕರು ಎಂಬ ಎರಡು ಪ್ರಭೇದಗಳಿವೆ.

ಹಳೆಯ ತಲೆಮಾರಿನ ಮ್ಯಾಸನಾಯಕರ ಯಜಮಾನರು ಕಾಡುಗೊಲ್ಲರಂತೆ ತಲೆಕೂದಲನ್ನು ಕತ್ತರಿಸದೆ 'ತುರುಬು' ಕಟ್ಟುವುದನ್ನು ಇಂದೂ ಕಾಣಬಹುದು. (ಆದರೆ ಮುಂದಲೆಯ ಕೂದಲನ್ನು ಚಂದ್ರಕಾರವಾಗಿ ಕತ್ತರಿಸಿರುತ್ತಾರೆ). ಕಾಡುಗೊಲ್ಲರ ಹೆಂಗಸರು

---

9. ಈ ಜನಪದ ಕತೆಯನ್ನು 'ಇಟ್ಟಕ್ಕಿ ಗೊಲ್ಲರು' ಎಂದು ಕರೆಯಲ್ಪಡುವ ಚಳ್ಳಕೆರೆ ತಾಲ್ಲೂಕಿನ ಚೌಳೂರು ಗ್ರಾಮದ ಈರಣ್ಣನವರು ಹೇಳಿದ್ದಾರೆ.

9ಅ. ಇನ್ನೊಂದು ಕತೆಯ ಪ್ರಕಾರ - ಎಳೆಯ ಹಸುವಿನ ಕರುವಿನ ತೊಡೆಯ ಮಾಂಸಕ್ಕೆ ಬಾಯಿ ಹಾಕಿದವನನ್ನು 'ಬೇಡ ಕಣೋ ಬೇಡ' ಎಂದರೂ ಕೇಳದೆ ತಿಂದದ್ದರಿಂದ ಅಂದಿನಿಂದ ಬೇಡದ ಕೆಲಸ ಮಾಡಿದ ಅವನು 'ಬೇಡ'ನಾದನಂತೆ.

9ಆ. ಈ ವಿಚಾರವನ್ನು ನನಗೆ ತಿಳಿಸಿದವರು ಚಳ್ಳಕೆರೆ ತಾಲ್ಲೂಕು ಮೀರಾಸಾಬಿಹಳ್ಳಿ ಗ್ರಾಮದ ಸುಮಾರು 70 ವಯಸ್ಸಿನ ಆದಿಕರ್ನಾಟಕ ಪಂಗಡದ ದಿ॥ ದುರುಗಜ್ಜನವರು.

9ಇ. ಈ ವಿಷಯವನ್ನು ನನಗೆ ಖಚಿತಪಡಿಸಿದವರು: ಚಳ್ಳಕೆರೆ ತಾಲ್ಲೂಕಿನ ನನ್ನಿವಾಳ ಗ್ರಾಮದ ಸುಮಾರು 90 ವಯಸ್ಸಿನ ಮ್ಯಾಸನಾಯಕರ ಯರ‍್ರಪ್ಪನವರು.

ಮೇಲು ರವಿಕೆ (ಕುಪ್ಪಸ) ತೊಡದಿರುವಂತೆ, ಹಳೆಯ ಕಾಲದ ಮ್ಯಾಸಬೇಡರ ಹೆಂಗಸರೂ ರವಿಕೆ ತೊಡುವುದಿಲ್ಲ; ಕಾಡುಗೊಲ್ಲರ ಹೆಂಗಸರು ಮುಂಗೈಗೆ 'ಗೊಲ್ಲಕಡಗ' ಧರಿಸಿದರೆ, ಅದನ್ನೇ ಹೋಲುವಂತಹ 'ಬದ್ದ' ಎಂಬ ಹಿತ್ತಾಳೆಯ ಆಭರಣವನ್ನು ಇವರು ಮುಂಗೈಗೆ ತೊಡುತ್ತಾರೆ.

ಕಾಡುಗೊಲ್ಲರ ಹಾಗೆ ಇವರೂ ಕೂಡ ಹಟ್ಟಿಯನ್ನು ಊರ ಹೊರವಲಯದಲ್ಲಿ ಪ್ರತ್ಯೇಕವಾಗಿ ಹಾಕಿಕೊಂಡು ಜನಸಂಪರ್ಕದಿಂದ ದೂರವಿರುತ್ತಾರೆ. ಬಹಳಷ್ಟು ಕಡೆಗಳಲ್ಲಿ ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಹಟ್ಟಿಗಳು ಅಕ್ಕಪಕ್ಕದಲ್ಲೇ ಇರುತ್ತವೆ.

ಕಾಡುಗೊಲ್ಲರಂತೆ ಇವರೂ ಹಟ್ಟಿಯ ಸುತ್ತ ಕಳ್ಳೆಬೇಲಿಯನ್ನು ಹಾಕುತ್ತಾರೆ. ಜೊತೆಗೆ ಕಾಡುಗೊಲ್ಲರಂತೆ ಕೋಳಿಯನ್ನು ಹಟ್ಟಿಯೊಳಗೆ ಸೇರಿಸುವುದಿಲ್ಲ, ತಿನ್ನುವುದೂ ಇಲ್ಲ. (ಆದರೆ ಈಗೀಗ ಈ ಬಿಗಿಯಾದ ಕಟ್ಟು-ನಿಟ್ಟು ಸಡಿಲವಾಗುತ್ತಿದೆ).

ಈ ಎರಡೂ ಜನಾಂಗಗಳ ಪ್ರಮುಖ ದೈವಗಳಾದ ಕಾಟಂಲಿಂಗ, ಚಿತ್ರಲಿಂಗ ದೇವರುಗಳು ಒಂದೇ ಆಗಿವೆ; ಈ ಎರಡೂ ಬುಡಕಟ್ಟುಗಳು 'ಧಗಮು'[10] ಎಂಬ ವಿಶಿಷ್ಟ ವಾದ್ಯವನ್ನು ತಮ್ಮ ದೇವರಿಗೆ ಬಳಸುತ್ತಾರೆ.

ಕಾಡುಗೊಲ್ಲರ ಸಾಂಸ್ಕೃತಿಕ ವೀರರೂ ಹಾಗೂ ಗೋಪಾಲಕರೂ ಆಗಿದ್ದ ಎತ್ತಪ್ಪ ಜುಂಜಪ್ಪಗಳು ಹೇಗೆ ಆರಾಧ್ಯದೈವಗಳೋ ಹಾಗೇ ಮ್ಯಾಸಬೇಡರಲ್ಲೂ ಗೋಪಾಲಕರಾಗಿದ್ದ ಗಾದಿರಿ ಪಾಲನಾಯಕ, ಜಗಲೂರು ಪಾಪನಾಯಕರು ಆರಾಧ್ಯ ದೈವಗಳೂ, ಸಾಂಸ್ಕೃತಿಕ ವೀರರೂ ಆಗಿದ್ದಾರೆ.

ಕಾಡುಗೊಲ್ಲರಲ್ಲಿ ಜುಂಜಪ್ಪನಿಗೆ ದನವನ್ನು ಬಿಡುವಂತೆ, ಮ್ಯಾಸ ನಾಯಕರೂ ದನಕರುಗಳನ್ನು ತಮ್ಮ ದೇವರುಗಳಿಗೆ ಬಿಡುತ್ತಾರೆ. ಇಂಥ ದೇವರ ದನಗಳನ್ನು ಕಾಯುವವರನ್ನು 'ಎತ್ತಿನ ಕಿಲಾರಿ' ಎನ್ನುತ್ತಾರೆ. ಈ ದನವನ್ನು ಮಾರಾಟ ಮಾಡುವಂತಿಲ್ಲ, ಸತ್ತರೆ ಅವನ್ನು ಕೊಯ್ಯಲು ಕೊಡುವಂತಿಲ್ಲ, ಅವನ್ನು 'ಮಣ್ಣು' ಮಾಡಿ ಭಕ್ತಿಯಿಂದ ಪೂಜಿಸುತ್ತಾರೆ. ಇಲ್ಲವೇ ಅವನ್ನು 'ಕಲ್ಲುಬಣವೆ' ಎಂಬ ವಿಶಿಷ್ಟ ರೀತಿಯಲ್ಲಿ ಸಮಾಧಿ ಮಾಡುತ್ತಾರೆ. ಕಾಡುಗೊಲ್ಲರೂ ಜುಂಜಪ್ಪನ ಬಸವಗಳನ್ನು ಕುರಿತು ಇದೇ ಸಂಪ್ರದಾಯವನ್ನು ಅನುಸರಿಸುತ್ತಾರೆ.

ಹೊಳಲ್ಕೆರೆ ಮತ್ತು ನಾಯಕನಹಟ್ಟಿ ಭಾಗದಲ್ಲಿರುವ ಕೆಲವು ಮ್ಯಾಸನಾಯಕರು ಈಚಲು ಚಾಪೆಯ ಮೇಲೆ ಕೂರುವುದಿಲ್ಲ. ಕಸ ತೆಗೆಯಲು ಈಚಲು ಪೊರಕೆಗಳನ್ನೂ ಬಳಸುವುದಿಲ್ಲ! ಹೆಂಡ ಕೊಡುವ ಹೊಲಸು ಮರದ ಈಚಲು ಗರಿಯನ್ನು ಬಳಸಿದರೆ ಮೈಲಿಗೆಯಾಗುತ್ತದೆ ಎಂಬ ನಂಬಿಕೆ ಅವರದು.

ಕಾಡುಗೊಲ್ಲರು-ಬೇಡರು ಇವರು ಅಣ್ಣ-ತಮ್ಮಂದಿರಾಗಿದ್ದಿರಬಹುದು ಎಂಬುದನ್ನು

10. ಜೀವಂತವಾದ ಗೊಡ್ಡೆ ಮಣಕ (ಬಂಜೆಯಾದ ಆಕಳು)ದ ಚರ್ಮವನ್ನು ಸುಲಿದು ತಯಾರಿಸುವ ವಾದ್ಯ, ಇದರ ವಾದನಕ್ಕೆ ಅದೇ ಚರ್ಮದಿಂದ 'ಕೈ'ಗಳ ಆಕಾರದಲ್ಲಿ ಮಾಡಿರುವ ಚರ್ಮದ ಕೈಗಳನ್ನೇ ಬಳಸಿ ಬಡಿಯುತ್ತಾರೆ.

ಸಮರ್ಥಿಸುವಂತಿರುವ ವಿಶಿಷ್ಟ ಆಚರಣೆ[11] ಚಳ್ಳಕೆರೆ ತಾಲ್ಲೂಕಿನ ಮತ್ಸಮುದ್ರ ಗ್ರಾಮದಲ್ಲಿ ಹನುಮಂತರಾಯನ 'ಕಾರ್ತೀಕ' ಉತ್ಸವದಲ್ಲಿ ನಡೆಯುತ್ತದೆ. ಹಗ್ಗಗಳಿಂದ ನಿಲ್ಲಿಸಲ್ಪಟ್ಟ 20 ಅಡಿ ಎತ್ತರವಿರುವ ಕಂಬದ ಬುಡದಲ್ಲಿ ಸಣ್ಣ ವೃತ್ತಾಕಾರದ ಪಾತಿ ಮಾಡಿ ನೀರು ತುಂಬುತ್ತಾರೆ. ಕಂಬದ ತುದಿಯಲ್ಲಿ ಗೂಡಿನ ಆಕಾರದಲ್ಲಿ ನಿರ್ಮಿಸಿದ ಕಮಾನಿಗೆ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಅಡ್ಡಗೂಟ ಬಡಿದಿರುವ ಹಸಿತೆಂಗಿನ ಕಾಯಿಗಳನ್ನು ತೂಗು ಬಿಟ್ಟಿರುತ್ತಾರೆ. ಜೊತೆಗೆ ಬಟ್ಟೆಗಳಲ್ಲಿ ಹಲವು ತಿನಿಸುಗಳ ಗಂಟುಕಟ್ಟಿ ಇಟ್ಟಿರುತ್ತಾರೆ, ಎಣ್ಣೆ-ಓಕಳಿಸರಗಳ ಮಡಕೆ ಹಿಡಿದ ವ್ಯಕ್ತಿಯೊಬ್ಬ ಕಂಬದ ತುದಿಯಲ್ಲಿ ಕುಳಿತಿರುತ್ತಾನೆ. ಈ ಕಂಬದ ಮೈಗೆ ಜೇಡಿಮಣ್ಣಿನ ಬುರುಜೆ ಮತ್ತು ಎಣ್ಣೆಯನ್ನು ಜಾರುವಂತೆ ಬಳಿದಿರುತ್ತಾರೆ. ಇದು ಕೃಷ್ಣ ಗೋಕುಲದಲ್ಲಿ ಬೆಣ್ಣೆ ಕದಿಯುತ್ತಿದ್ದ ಮೊಸರು, ಹಾಲುಗಳನ್ನು ಇಡುತ್ತಿದ್ದ 'ನೆಲುವು' ನೆನಪಿಗೆ ತರುವಂತಿದೆ. ಜೊತೆಗೆ ಇದನ್ನು ತೆಲುಗಿನಲ್ಲಿ 'ಉಟ್ಲು' ಎನ್ನುತ್ತಾರೆ - ಅಂದರೆ 'ನೆಲುವು' ಎಂದೇ ಅರ್ಥ; ಅದಕ್ಕಾಗಿಯೇ ಇದನ್ನು 'ಉಟ್ಲುಮರ' ಎಂದು ಕರೆಯುತ್ತಾರೆ. ಈ ಕಂಬವನ್ನು ಹತ್ತಿ ಇನ್ನೇನು ತುದಿಮುಟ್ಟಿದೆವು ಎನ್ನುವಾಗ ಮೇಲಿನಿಂದ ಜರ್ರನೆ ಜಾರುವ ಈ ರೋಮಾಂಚಕಾರಿ ಆಟ ಕೆಲವೊಮ್ಮೆ ಪ್ರಾಣಕ್ಕೂ ಸಂಚಕಾರ ತರುತ್ತದೆ. ಈ ಕಂಬವನ್ನು ಹತ್ತುವ ಹಕ್ಕು ಗೊಲ್ಲರದು. ಅವರು ಹತ್ತುವ ಶಾಸ್ತ್ರ ಮಾಡಿ, ಅನುಮತಿ ಕೊಟ್ಟ ನಂತರವೇ ಮ್ಯಾಸನಾಯಕರು ಈ ಕಂಬ ಹತ್ತುತ್ತಾರೆ; ಇಲ್ಲಿ ಇವರು ಅಣ್ಣ-ತಮ್ಮಂದಿರಂತೆ ನಡೆದುಕೊಳ್ಳುತ್ತಾರೆ.

ಮ್ಯಾಸನಾಯಕರ ಹೆಣ್ಣಿಗೂ, ಕಾಡುಗೊಲ್ಲನೊಬ್ಬನಿಗೂ ವಿವಾಹವಾದದ್ದರಿಂದ ಕಾಡುಗೊಲ್ಲರಲ್ಲಿ 'ತಾಳಿಕಟ್ಟದ ಗೊಲ್ಲರು' ಎಂಬ ವಿಶಿಷ್ಟ ಬೆಡಗು ಹುಟ್ಟಿಕೊಳ್ಳಲು ಕಾರಣವಾದ ಕತೆ[12] ಈ ಎರಡೂ ಜನಾಂಗಗಳ ಮಧ್ಯೆ ನಡೆದಿರಬಹುದಾದ ಸಂಬಂಧಗಳ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ.

ಹರತಿಕೋಟೆಯ ರಾಜನ ಮಕ್ಕಳಲ್ಲಿ ಒಬ್ಬಳಾದ ಕರಿಯೋಬಿಯನ್ನು ಬಸವಿಗೆ ಬಿಟ್ಟಿದ್ದರು (ಇತಿಹಾಸ ಈ ಬಗ್ಗೆ ಮೌನವಾಗಿದೆ). ಆಕೆ ಪ್ರತ್ಯೇಕವಾದ ಅರಮನೆ ಕಟ್ಟಿಸಿಕೊಂಡು ಅರಮನೆಯ ಮುಂದೆ -"ಕಪ್ಪೆಕಲಕದ ನೀರು, ಬಿಸಿಲಿಗೆ ಬಾಡದ ಹೂವು, ನಾಲ್ಕು ಏಣಿನ ಹಸಿರು ಕಲ್ಲು ಕಂಭ, ತಲೆಗೆ ಮೆತ್ತನೆ ಕಲ್ಲು, ಕಾಯಿಸದೆ ಆಗಿರೋ ತುಪ್ಪ, ಒಂದು ಕೋಬಿನ ಮೇಕೆ ಹೋತ ತಂದುಕೊಟ್ಟವರಿಗೆ ಭೋಗ ಕೊಡ್ತೀನಿ, ಇವನ್ನು ತರದೆ ಸೋತವನು ಸಾವಿರ ವರಹ ದಂಡ ಕೊಡಬೇಕು" ಎಂದು ಶಾಸನ ಹಾಕಿಸಿದ್ದಳು. ಹೀಗೆ ಸೋತವರಿಂದ ಏಳು ಕೊಪ್ಪರಿಗೆ ವರಹ ಸಂಪಾದಿಸಿದ್ದಳು. ಈ ಸುದ್ದಿ ಕೇಳಿದ ಹಟ್ಟಿ ಮಲ್ಲಪ್ಪನಾಯಕ (ಹಟ್ಟಿ ಪಾಳೆಗಾರರಲ್ಲಿ ಲಫಂಗನಾಗಿದ್ದ ಚಿಕ್ಕಮಲ್ಲಪ್ಪನಾಯಕ ಇರಬಹುದೇ?) ಬಂದು ಆಕೆಯ ಒಗಟನ್ನು ಬಿಡಿಸಲಾರದೆ ಹುಚ್ಚಾಗಿ ಕಾಡಿನಲ್ಲಿ ತಿರುಗುತ್ತಿದ್ದಾಗ 'ಕಲ್ಡಿ ಬುಳ್ಳಣ್ಣ' ಎಂಬ ಗೊಲ್ಲ ಸಿಕ್ಕ. ಅವನು 'ಇದೇನು ಮಹಾ ಒಗಟು ನಾನು ಬಿಡಿಸ್ತೀನಿ.ಇಂಥ ಸಾವಿರ ಒಗಟು ನನ್ನ ಜೇಬಿನಾಗೆ

11. ಈ ಬಗ್ಗೆ ಮಾಹಿತಿ ಒದಗಿಸಿದವರು ಮತ್ಸಮುದ್ರ ಗ್ರಾಮದ 90ವರ್ಷದ ದಿ. ರಂಗಜ್ಜನವರು.
12. ಈ ಕತೆಯನ್ನು ಹೇಳಿದವರು 'ಚಳ್ಳಕೆರೆ ಟೌನ್ ಕಾಟಪ್ಪನ ಹಟ್ಟಿ ವಾಸಿ 75 ವರ್ಷದ ಕಣ್ಣೀರ ಗೊಲ್ಲರ ದಿ. ಗಿಡ್ಡಜ್ಜಪ್ಪನವರು

ಇದಾವೆ' ಎಂದು ಅದರ ರಹಸ್ಯ ಒಡೆದ. ಹಟ್ಟಿಮಲ್ಲಪ್ಪನಾಯಕ ತಕ್ಷಣವೇ ಕರಿಯೋಬಿಯ ಬಳಿಗೆ ಹೋಗಿ "ಎಳನೀರೇ - ಕಪ್ಪೆಕಲಕದ ನೀರು, ನವಿಲುಗರಿಯೇ - ಬಿಸಿಲಿಗೆ ಬಾಡದ ಹೂವು, ಮುಂಗರ ಬಳ್ಳಿಯೇ - ನಾಲ್ಕು ಏಣಿನ ಹಸಿರು ಕಲ್ಲುಕಂಭ, ಕೈಯ ತೋಳೇ- ತಲೆಗೆ ಮೆತ್ತನೆಯ ಕಲ್ಲು, ಜೇನು ತುಪ್ಪವೇ - ಕಾಯಿಸದೆ ಆಗಿರೋ ತುಪ್ಪ, ಕೋಳಿನೇ-ಒಂಟಿ ಕೊಂಬಿನ ಮೇಕೆ ಹೋತ" ಎಂದು ಒಗಟನ್ನು ಬಿಡಿಸಿದ. ಆದರೆ ಆಕೆ ಇವನ ಜಾಣತನವನ್ನು ನಂಬದೆ ಮೂಲ ಶೋಧಿಸಿದಾಗ ಕಲ್ಡಿ ಬುಳ್ಳಣ್ಣ ಎಂದು ಗೊತ್ತಾಗುತ್ತದೆ. ಸೋತ ಮಲ್ಲಪ್ಪನ ನಾಯಕ ಹ್ಯಾಪುಮೋರೆ ಹಾಕಿಕೊಂಡು ಹೊರಟ.

ಕರಿಯೋಬಿ ಕಲ್ಡಿ ಬುಳ್ಳಣ್ಣನನ್ನು ಮದುವೆಯಾಗಲು ಬೇಡಿಕೊಳ್ಳುತ್ತಾಳೆ. ಆದರೆ ಅವನು "ನನಗೆ ಬಾಲಮ್ಮ - ನಾಗಮ್ಮ ಅಂತ ಇಬ್ರು ಹೆಂಡ್ರು. ಅವರು ಒಪ್ಪದ ಹೊರತೂ ನಿನ್ನ ಕೂಡೋಕೆ ಆಗೋಲ್ಲ" ಅಂತಾನೆ. ಕರಿಯೋಬಿ ಅವರನ್ನು ಒಲಿಸಿ-ಒಪ್ಪಿಸಿ ಕಲ್ಡಿ ಬುಳ್ಳಣ್ಣನನ್ನು ಮದುವೆಯಾಗುತ್ತಾಳೆ. ಸಾಕಷ್ಟು ವಯಸ್ಸಾದರೂ ಮಕ್ಕಳಾಗದಿದ್ದ ಕರಿಯೋಬಿ (ನಂತರ ಈ ಊರಿಗೆ ಕರಿಯೋಬಹಳ್ಳಿ ಊ ಕರಿಯೋಬನಳ್ಳಿ ಎಂಬ ಹೆಸರು ಬಂತು, ಇದು ಹಿರಿಯೂರು ತಾಲ್ಲೂಕಿನ ಹರ್ತಿಕೋಟೆಗೆ ಸಮೀಪದಲ್ಲೇ ಇದೆ.) ಬಾಲಮ್ಮನ ಮಗನೊಬ್ಬನನ್ನು ದತ್ತು ತೆಗೆದುಕೊಂಡು, ಅವನು ಬೆಳೆದು ದೊಡ್ಡವನಾದ ಮೇಲೆ ನಾಯಕ ಜಾತಿಯಲ್ಲಿ ಒಂದು ಹೆಣ್ಣು ತೆಗದು ಮದುವೆ ಮಾಡುತ್ತಾಳೆ. ಅವನಿಗೆ ಏಳು ಜನ ಮಕ್ಕಳಾಗುತ್ತಾರೆ, ಅವರೆಲ್ಲರಿಗೂ ಮದುವೆಯಾಗಿ ಏಳು ಮಂದಿ ಸೊಸೆಯರೂ ಮನೆಗೆ ಬರುತ್ತಾರೆ. ಈ ಸೊಸೆಯರು ಆ ಹಳ್ಳಿಗೆ ಬಂದ ಮುತ್ತಿನ ಸೆಟ್ಟಿ ಹತ್ತಿರ ಇದ್ದ 'ಮುತ್ತಿನ ವಸ್ತ್ರ' ಕಂಡ ಸೊಸೆಯರು - 'ನಮ್ಮತ್ತೆ ಏಳು ಕೊಪ್ಪರಿಗೆ ವರಹ ಸಂಪಾದಿಸಿದರೇನು ಬಂತು? ಒಂದು ಮುತ್ತಿನ ವಸ್ತ್ರ ಸಂಪಾದಿಸಲಿಲ್ಲ' ಎಂದು ಹಾಸ್ಯಮಾಡಿ ನಕ್ಕರು. ಇದರಿಂದ ನೊಂದುಕೊಂಡ ಕರಿಯೋಬಜ್ಜಿ ಮಕ್ಕಳಲ್ಲಿ ದುಃಖ ತೋಡಿಕೊಂಡಳು. ಮಕ್ಕಳು ಮುತ್ತಿನ ಸೆಟ್ಟಿಯ ಹಿಂದೆಯೇ ಹೋಗಿ, ಮುತ್ತು ಹೊರುತ್ತಿದ್ದ ಎತ್ತಿನ ಕುತ್ತಿಗೆ ಕೊಯ್ದು 'ಮುತ್ತಿನಮೂಡೆ'ಯನ್ನೇ ಕದ್ದು ತಂದರು. ಮುತ್ತಿನ ಸೆಟ್ಟಿಗೆ ಕಳವಿನ ವಿಚಾರ ಗೊತ್ತಾಗಿ ಪಂಚಾಯ್ತಿ ಹಾಕಿಸಿದ. ಆಗ ಇವರು 'ಮುತ್ತಿನ ತೂಕದ ಒಡವೆ ಕೊಡ್ತೀವಿ' ಅಂತ ಒಪ್ಪಿಕೊಂಡು, ಮನೆಯಲ್ಲಿದ್ದ ಒಡವೆ ವಸ್ತ್ರ ಎಲ್ಲ ಹಾಕಿದರೂ ಆ ಮುತ್ತಿಗೆ ಸರಿತೂಗದಾಗ; ಏಳು ಮಂದಿ ಸೊಸೆಯರು ತಮ್ಮ ಕೊರಳಲ್ಲಿಯ ಮಾಂಗಲ್ಯಗಳನ್ನು ತೆಗೆದುಹಾಕಿದರು, ಆದರೂ ಸರಿದೂಗಲಿಲ್ಲ! ಕೊನೆಗೆ ನಾಗಮ್ಮನ ಸೊಸೆಯರಿಗೆ ಅವರ ಮಾಂಗಲ್ಯಗಳನ್ನು ಹಾಕಲು ಹೇಳಿದಾಗ ಅವರು ನಿರಾಕರಿಸಿದರು. ತಪ್ಪು ಮಾಡಿ ಮಾಂಗಲ್ಯ ಕಳೆದುಕೊಂಡ ಈ ಜನ ಮುಂದೆ 'ತಾಳಿಕಟ್ಟದ ಗೊಲ್ಲರು' ಆದರು, ತಾಳಿ ತೆಗೆಯಲು ನಿರಾಕರಿಸಿದವರು ತಾಳಿಕಟ್ಟುವ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋದರು.

ಈ ಕತೆ ಈ ಎರಡೂ ಜನಾಂಗಗಳ ಸಾಮರಸ್ಯ ವೈಷಮ್ಯಗಳನ್ನು, ಇವರ ಪ್ರಾಚೀನ ಸಂಬಂಧಗಳನ್ನು ಕುರಿತು ಹೇಳುತ್ತದೆ.

ಈ ಜನಾಂಗದವರು ಪೂಜಿಸುವ ಪ್ರಮುಖ ದೈವಗಳು - ಕಾಟಂಲಿಂಗ, ಚಿತ್ರಲಿಂಗ, ಬೋರೆದೇವರು, ಬೋಸೆದೇವರು, ಗಾದಿರಿ ಪಾಲನಾಯಕ, ಜಗಲೂರು ಪಾಪನಾಯಕ, ಮಾರಮ್ಮ, ಬಂಗಾರದೇವರು, ಬೊಮ್ಮಲಿಂಗ, ಓಬಳನರಸಿಂಹಸ್ವಾಮಿ ಮುಂತಾದವುಗಳು. ಇವರು ಮದುವೆಯ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯಗಳು ವಿಶಿಷ್ಟವಾಗಿವೆ. ಮದುವೆಯ ನಿಶ್ಚಿತಾರ್ಥದ ಸಂದರ್ಭದಲ್ಲಿ ನಡೆಸುವ ಕ್ರಿಯೆಯನ್ನು 'ವೀಳ್ಯಶಾಸ್ತ್ರ' ಎನ್ನುತ್ತಾರೆ. ಕಂಬಳಿ ಗದ್ದಿಗೆಯ ಮೇಲೆ ಮೂರು ವೀಳ್ಯಗಳನ್ನು ಇಟ್ಟಿರುತ್ತಾರೆ. ಈ ಕಂಬಳಿಯನ್ನು ಹಾಸುವವನು 'ಮಳೆಲೋರವನು'. ಈ ವೀಳ್ಯಗಳನ್ನು ಮಂದಲೋರ ವೀಳ್ಯ, ಮಲ್ಲನಾಯಕನೋರ ವೀಳ್ಯ, ಮಳೆಲೋರವೀಳ್ಯ ಎನ್ನುತ್ತಾರೆ. ಇವು ಆಯಾ ಬಳಪಂಗಡಗಳ ಹಿರಿಯರಾದ ಮೂಲ ಪುರುಷರ ಹೆಸರಿನಲ್ಲಿದ್ದು ಅವರಿಗೆ ತೋರುವ ಸಾಂಕೇತಿಕ ಗೌರವ ಇದಾಗಿದೆ. ಆಯಾ ಬಳಪಂಗಡಗಳ ವಂಶಸ್ಥರು ಇವುಗಳನ್ನು ಪಡೆಯುತ್ತಾರೆ. ಮೊದಲೆರಡು ವೀಳ್ಯಗಳನ್ನು ಕಂಬಳಿ ಗದ್ದಿಗೆಯ ಮೇಲಿನಿಂದ ಎತ್ತಿಕೊಟ್ಟರೆ ಕೊನೆಯದನ್ನು ಕಂಬಳಿಯ ಅಡಿಯಿಂದ ಎತ್ತಿಕೊಡುತ್ತಾರೆ.

ಈ ಜನಾಂಗದ ಪುರಾಣ ಕಾಲದ ಮೂಲ ಪುರುಷರೂ, ವಿಭೂತಿ ಪುರುಷರೂ ಆದ ವಾಲ್ಮೀಕಿ, ಶಬರಿ, ಧರ್ಮವ್ಯಾಧ, ಏಕಲವ್ಯ, ಮುಂತಾದವರುಗಳಿಗೆ ಯಾವ ಗೌರವದ ವೀಳ್ಯವನ್ನು ತೆಗೆದಿಡದಿರುವುದು ಆಚ್ಚರಿಯ ಸಂಗತಿ, ಜೊತೆಗೆ ಇವರನ್ನು ಅವರು ಪೂಜಿಸದಿರುವುದೂ ಮತ್ತೊಂದು ವಿಚಿತ್ರ! ಆದರೆ 'ಕನ್ನಯ್ಯನವೀಳ್ಯ' ಎಂದು ಬೇಡರ ಕಣ್ಣಪ್ಪನಿಗೆ ವೀಳ್ಯ ತೆಗೆಯುತ್ತಾರೆ.

ಸಮಾಜದ ಮೇಲ್ವರ್ಗದವರ ಮದುವೆಗಳಲ್ಲಿರುವಂತೆ 'ಹರಿಣೆ'(ಪವಿತ್ರವಾದ ಕುಂಭ), ಧಾರೆ ಚಪ್ಪರ, ಹಸೆಕಟ್ಟೆ ಇರುವುದಿಲ್ಲ. ತಮ್ಮ ಜಾತಿಗೆ ಸೇರಿದ ತಮ್ಮ ಮನೆದೇವರುಗಳ ಪೂಜಾರಿಗಳೇ ಪೌರೋಹಿತ್ಯವನ್ನು ನಿರ್ವಹಿಸುತ್ತಾರೆ.

ಇವರಲ್ಲಿ ಕುಲಾಚಾರದ ಕಟ್ಟುಗಳನ್ನು ನಿರ್ದೇಶಿಸುವ - ನಿಷೇಧಿಸುವ 'ಕಟ್ಟೆಮನೆ' ಗಳಿರುತ್ತವೆ. ಇವನ್ನು ಇವರು 'ಮ್ಯಾಸಮಂಡಲಿ' ಗಳೆನ್ನುತ್ತಾರೆ. ಉದಾಹರಣೆಗೆ ಚಳ್ಳಕೆರೆ ತಾಲ್ಲೂಕಿನ ನನ್ನಿವಾಳ, ಹಿರೇಹಳ್ಳಿ, ಗೌರಸಮುದ್ರ (ಐಪ್ರೋಜಿ ಮಠ)ಗಳನ್ನು ಹೆಸರಿಸಬಹುದು.

ಸತ್ತಾಗ ನಿರ್ವಹಿಸುವ ಕರ್ಮಗಳಲ್ಲೂ ಅವರದೇ ಆದ ಭಿನ್ನತೆಯನ್ನು ಕಾಣಬಹುದು -"ಸತ್ತವರನ್ನು ಸ್ಮಶಾನಕ್ಕೆ ಒಯ್ಯುವಾಗ ವಾರಸುದಾರನಾದವನು ಒಂದು ಮಣ್ಣಿನ ಮಡಕೆಯಲ್ಲಿ ಪಿಂಡವನ್ನು ಇಟ್ಟುಕೊಂಡು ಹೆಣದ ಮುಂದೆ ಸಾಗುತ್ತಾನೆ. ಮಾರ್ಗ ಮಧ್ಯದಲ್ಲಿ ಒಂದು ಹಸಿರುಗಿಡದ ಬುಡದಲ್ಲಿ ಪಿಂಡದ ಮಡಕೆಯನ್ನಿಟ್ಟು, ಸ್ಮಶಾನಯಾತ್ರೆಯಲ್ಲಿ ಪಾಲ್ಗೊಂಡವರೆಲ್ಲರೂ ಕಲ್ಲುಗಳನ್ನು ಬೀರಿ ಆ ಮಡಕೆಯನ್ನು ನುಚ್ಚುನೂರು ಮಾಡುತ್ತಾರೆ. ಮೂರನೆಯ ದಿನ - ಸತ್ತವನ ಸಂಬಂಧಿಕರು ಸಮಾಧಿ ಪೂಜೆ ಮಾಡಿ ಮನೆಗೆ ಹಿಂತಿರುಗಿದ ನಂತರ 'ಕರಿ'ಯನ್ನು ತೀರಿಸುತ್ತಾರೆ. ಯಾವ ಸ್ಥಳದಲ್ಲಿ ವ್ಯಕ್ತಿಯು ನಿಧನವಾದನೋ ಆ ಜಾಗದಲ್ಲಿ ಒಂದು ಟಗರು ಮರಿಯನ್ನು ಬಲಿ ಮಾಡುವ ಕರ್ಮಕ್ಕೆ 'ಕರಿ'ಯೆಂದು ಹೆಸರು. ಅದೇ ಮಾಂಸದಿಂದ

ಮನೆಮಂದಿಯೆಲ್ಲಾ ಅಡಿಗೆ ಮಾಡಿ ಉಣ್ಣುತ್ತಾರೆ. ತೀರಾ ಬಡವರಾದರು ಕಟುಕನಿಂದ ಟಗರಿನ ತಲೆಯನ್ನು ಕೊಂಡುತಂದಾದರೂ 'ಕರಿ' ತೀರಿಸುತ್ತಾರೆ. ಕರಿ ತೀರಿಸುವ ಕರ್ಮ ಮುಗಿಯುವವರೆಗೆ ಅನ್ಯರಿಗೆ ಆ ಮನೆಗೆ ಪ್ರವೇಶವಿರುವುದಿಲ್ಲ. ಹದಿನಾಲ್ಕನೆಯ ದಿನ ಕೈಲಾಸ ಆರಾಧನೆಯನ್ನು ಸತ್ತವರ ಹೆಸರಿನಲ್ಲಿ ತಮ್ಮ ಯೋಗ್ಯತಾನುಸಾರ ನಡೆಸುತ್ತಾರೆ[13]."

ಇ.ಥರ್ಸ್‌ಟನ್‌ರವರು ಕರ್ನೂಲು ಭಾಗದ ಮ್ಯಾಸಬೇಡರ ಬಗ್ಗೆ ಬರೆಯುತ್ತಾ ಅಲ್ಲಿ ಇವರನ್ನು ಅಪರಾಧಿ ಬುಡಕಟ್ಟುಗಳು (Criminal Tribes) ಎಂದು ಗುರುತಿಸುತ್ತಾರೆ.

"ಶೌರ್ಯ-ಸಾಹಸಗಳಿಗೆ ಹೆಸರಾದ ಈ ಜನಾಂಗದ ಅನೇಕರು ದರೋಡೆಕೋರರೆಂತಲೂ, ಸುಲಿಗೆಕೋರರೆಂತಲೂ ಕುಖ್ಯಾತಿ ಪಡೆದವರು. ಅವರು ಶಸ್ತ್ರ ಸಜ್ಜಿತರಾಗಿ ಅರಣ್ಯಗಳಲ್ಲೂ, ಗುಡ್ಡಗಳಲ್ಲೂ ಸಂಚರಿಸುತ್ತಾ, ಗ್ರಾಮಗಳನ್ನು ಲೂಟಿ ಮಾಡುತ್ತಾ ಸಾಮಾನ್ಯರಿಗೆ ಸಿಂಹಪ್ರಾಯರಾಗಿರುತ್ತಿದ್ದರು'[14] ಎಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸುತ್ತಾರೆ.

ಮೂಲತಃ ಯುದ್ಧವೀರರೂ, ಬೇಟೆಗಾರರೂ ಆದಂತಹ ಈ ಜನಾಂಗಕ್ಕೆ ಪಾಳಯಪಟ್ಟುಗಳ ಅವನತಿಯ ನಂತರ ಕೆಲಸವಿಲ್ಲದಂತಾಯಿತು. ಬ್ರಿಟಿಷರ ಆಳ್ವಿಕೆಯಲ್ಲಿ ಬೇಟೆಗೆ ಬಂದೊದಗಿದ ನಿಷೇಧದಿಂದ ನಿರುದ್ಯೋಗಿಗಳಾದ ಇವರನ್ನು ಪರಿಸ್ಥಿತಿಯೇ ಅಪರಾಧ ಮಾಡಲು ಪ್ರಚೋದಿಸಿರಬೇಕು. ಇವರ ಅಪರಾಧಿ ನಡವಳಿಕೆಗಳನ್ನು ಸಮರ್ಥಿಸುವಂತಹ ಗಾದೆಗಳು ಇಂದೂ ಚಲಾವಣೆಯಲ್ಲಿವೆ.

ನಾಗರಿಕ ಜನಾಂಗದ ಸಂಪರ್ಕವಿಲ್ಲದೆ ಗಿರಿ-ಕಂದರ, ಅರಣ್ಯಗಳಲ್ಲಿ ಇದ್ದಂತಹ ಈ ಜನಾಂಗ, ನಾಗರಿಕ ಜನಗಳಲ್ಲಿ ತಮ್ಮ ಸಹಜ ಒರಟುತನದ ಮೂಲಕ ಅಸಹನೆ-ಅಪನಂಬಿಕೆಗಳನ್ನು ಮೂಡಿಸಿರಬಹುದು. ಈ ಜನಾಂಗ ಇಂದು ಗೌರವಯುತ ನಡವಳಿಕೆಯಿಂದ ಇದ್ದರೂ-ಬೇರೆಯವರು ಇವರನ್ನು ಭಯಮಿಶ್ರಿತ ದೃಷ್ಟಿಯಿಂದಲೇ ನೋಡುತ್ತಿದ್ದಾರೆ.

ಈ ಜನಾಂಗದ ಕೆಲವು ಹಬ್ಬ ಮತ್ತು ಸಂಪ್ರದಾಯಗಳನ್ನು ನೋಡೋಣ.

**ಗುಗ್ಗರಿ ಹಬ್ಬ**[15]: ಹಿಂದೂಗಳಂತೆ ಬೇರೆಲ್ಲಾ ಹಬ್ಬಗಳನ್ನು ಇವರು ಆಚರಿಸಿದರೂ, 'ಗುಗ್ಗರಿ ಹಬ್ಬ' ಅವರನ್ನು ಬೇರೆಯವರಿಂದ ಪ್ರತ್ಯೇಕಿಸುವಷ್ಟು ವಿಶಿಷ್ಟವಾಗಿದೆ.

ತಮ್ಮ ಹೊಲಗಳಲ್ಲಿ ಹೊಸದಾಗಿ ಬೆಳೆದ ಹುರುಳಿ, ತೊಗರಿ, ಹಲಸಂದೆ, ಹೆಸರುಕಾಳು ಮುಂತಾದ 'ಗುಗ್ಗರಿ' ಬೇಯಿಸಲು ಬರುವಂತಹ ದ್ವಿದಳ ಧಾನ್ಯಗಳನ್ನು ಬೆಳೆದರೂ, ಗುಗ್ಗರಿಹಬ್ಬ ಮಾಡುವವರೆಗೂ ಒಂದು ಕಾಳನ್ನೂ ಬಳಸುವಂತಿಲ್ಲ, ಬೇಯಿಸುವಂತೆಯೂ ಇಲ್ಲ! (ಇಂಥದೇ ವಿಶಿಷ್ಟ ಆಚರಣೆಯನ್ನು ಚಳ್ಳಕೆರೆ ತಾಲ್ಲೂಕಿನ ಪುರ್ಲೆಹಳ್ಳಿ ಬಳಿ ಇರುವ ಚೆನ್ನಮ್ಮ

---

13. ರಾಜನ ರಾಜಣ್ಣ: ನಾಯಕ ಜನಾಂಗದ ಇತಿಹಾಸ, ಪುಟ 4.
14. ಲಕ್ಷ್ಮಣ್ ತೆಲಗಾವಿ : ಚಂದ್ರವಳ್ಳಿ (ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ), ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ, 1976, ಪುಟ 63.
15. ಗುಗ್ಗರಿ ಹಬ್ಬದ ಬಗ್ಗೆ ಮಾಹಿತಿಯನ್ನು ಒದಗಿಸಿದವರು ಚಳ್ಳಕೆರೆಯ ಕಾಟಪ್ಪನ ಹಟ್ಟಿಯ ಚಿತ್ರದುರ್ಗ ಪಾಳೆಯಗಾರರಾದ ದಿ. ಸಿ. ಪಿ. ರಾಮಸ್ವಾಮಿ ನಾಯಕರು.

ನಾಗತಿಹಳ್ಳಿಯಲ್ಲಿರುವ 'ಕ್ಯಾತಪ್ಪನ ಪರಿಸೆ'ಯಲ್ಲೂ ಕಾಣಬಹುದು. ಈ ಹಬ್ಬ ನಡೆಯುವ ಒಂದು ತಿಂಗಳು ಈ ದೇವರಿಗೆ ನಡೆದುಕೊಳ್ಳುವ ಯಾವ ಗೊಲ್ಲರೂ ತಮ್ಮ ಮನೆಗಳಲ್ಲಿ ಹುರುಳಿ, ನವಣೆಗಳನ್ನು ಇಟ್ಟುಕೊಳ್ಳುವಂತಿಲ್ಲ; ಹಬ್ಬ ಮುಗಿಯುವವರೆಗೂ ಬೇರೆಯವರ ಮನೆಗಳಲ್ಲಿ ಇಡುತ್ತಾರೆ. ಈ ದೇವರನ್ನು ಹುರುಳಿ - ನವಣೆ ಹೊಲಗಳ ಮೇಲೆ ಕೊಂಡೊಯ್ಯುವಂತೆಯೂ ಇಲ್ಲ! ಆದರೆ ಮ್ಯಾಸನಾಯಕರ ಯಾವ ದೇವರುಗಳಿಗೂ (ಕಾಟಂಲಿಂಗನನ್ನು ಬಿಟ್ಟು) ನವಣೆಯ 'ತಂಬಿಟ' (ತಂಬಿಟ್ಟು) ಆಗುವುದಿಲ್ಲ. ಗುಗ್ಗರಿ ಹಬ್ಬವನ್ನು ಕಾಡುಗೊಲ್ಲರು, ಮಣೇಗಾರರು (ಮಾದಿಗರು) ಆಚರಿಸುತ್ತಾರೆ!

ಗುಗ್ಗರಿ ಹಬ್ಬದ ದಿನ ಎಲ್ಲರೂ ತಾವು ಬೆಳೆದ ಈ ಧಾನ್ಯಗಳನ್ನು ತಂದು ದೇವಸ್ಥಾನದಲ್ಲಿ ಸುರಿಯುತ್ತಾರೆ. ಬೇಯಿಸಿದ ನಂತರ ದೇವರುಗಳಿಗೆ 'ಎಡೆ' ಹಾಕುತ್ತಾರೆ, ನಂತರ 'ಪ್ರಸಾದ'ವೆಂದು ತಿನ್ನುತ್ತಾರೆ. ನಂತರ ಮುಂದಿನ ಗುಗ್ಗರಿ ಹಬ್ಬದವರೆಗೂ ಬಳಸುತ್ತಾರೆ.

ಈ ಹಬ್ಬವನ್ನು ಎಲ್ಲಾ ಪಂಗಡಗಳ ಮ್ಯಾಸನಾಯಕರು ಆಚರಿಸಿದರೂ ವಿಶೇಷ ಆಸ್ತೆಯಿಂದ ಹಬ್ಬ ಮಾಡುವವರು - ಮಳೆಲೋರು. ಇವರ ಮನೆದೇವರು ಮಾಕನಡುಕು ನರಸಿಂಹಸ್ವಾಮಿ. ಇದು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿದೆ. ಗುಗ್ಗರಿ ಹಬ್ಬದ ದಿನ ಇಲ್ಲಿ ಸಾವಿರಾರು ಭಕ್ತರು ಸೇರುತ್ತಾರೆ. ಗುಗ್ಗರಿ ನೀರಿನಲ್ಲಿ ಕುದಿಯುತ್ತಾ, ಬೇಯುತ್ತಿರುವಾಗ, ಪಟ್ಟದ ಪೂಜಾರಿಯ ಹೆಂಡತಿ ಅಂದು ಒಂದೊತ್ತಿನಲ್ಲಿದ್ದು, ಮಡಿಯಲ್ಲಿ ಬಂದು ಬೇಯುತ್ತಿರುವ ಗುಗ್ಗರಿ ಕೊಳಗದಲ್ಲಿ ಕೈಯಿಟ್ಟು ಗುಗ್ಗರಿಯನ್ನು ಬರಿಗೈಯಿಂದ ತಿರುವುತ್ತಾಳೆ! (ಸೌಟು ಮಾಡುವ ಕೆಲಸವನ್ನು ಈಕೆಯ ಬರಿಗೈ ಮಾಡುತ್ತದೆ!) ಆಕೆಯ ಕೈಯಲ್ಲಿ ಬೊಬ್ಬೆ ಕೂಡಾ ಏಳುವುದಿಲ್ಲ!



ಇದೇ ಹಬ್ಬದಲ್ಲಿ ಇನ್ನೊಂದು ವಿಶಿಷ್ಟ ಕಾರ್ಯಕ್ರಮ ನಡೆಯುತ್ತದೆ. ಗುಗ್ಗರಿ 'ಎಡೆ'ಯ ನಂತರ ಈ ದೇವರುಗಳನ್ನು ಊರ ಹೊರಗೆ ಹೊರಡಿಸಿಕೊಂಡು ಹೋಗುತ್ತಾರೆ. ಸಾಮಾನ್ಯವಾಗಿ ಇವರ ದೇವರುಗಳೆಲ್ಲ 'ಬುಟ್ಟಿದೇವರು' ಗಳು ಅಥವಾ 'ಪೆಟ್ಟಿಗೆ ದೇವರು'ಗಳು. ತೆಲುಗಿನಲ್ಲಿ ಇವನ್ನು 'ದೇವಗಂಪಲು' ಎನ್ನುತ್ತಾರೆ. 'ದೇವ' ಎಂದರೆ 'ದೇವರುಗಳು', 'ಗಂಪ' ಎಂದರೆ ಪುಟ್ಟಿ (ತಟ್ಟಿ) ಅಥವಾ ಹೆಡಿಗೆ; ಆದ್ದರಿಂದ ಇವನ್ನು ಪುಟ್ಟಿಯಲ್ಲಿರುವ ದೇವರುಗಳು (ದೇವಗಂಪಲು) ಎನ್ನುತ್ತಾರೆ. ಹಿಂದುಳಿದ ವರ್ಗದ ಜನಗಳ ಬಹಳಷ್ಟು ದೇವರುಗಳು ವಾಸ ಮಾಡುವುದು ಇಂತಹ ಪುಟ್ಟಿ, ತಟ್ಟಿ, ಹೆಡಿಗೆ ಅಥವಾ ಪೆಟ್ಟಿಗೆಗಳಲ್ಲೇ. (ಉದಾಹರಣೆಗೆ ಶ್ರೀಶೈಲದಿಂದ ಮ್ಯಾಸನಾಯಕರು ವಲಸೆ ಬರುವಾಗ ತಮ್ಮ ಜೊತೆಯಲ್ಲಿ ತಮ್ಮ ಹನ್ನೆರಡು ಪೆಟ್ಟಿಗೆ ದೇವರುಗಳನ್ನು ಜೊತೆಯಲ್ಲೇ ತರುತ್ತಾರೆ.)

ಊರುನಾಯಕರು ಮಾರಮ್ಮನನ್ನು ತಟ್ಟಿಯಲ್ಲಿ ಅಥವಾ ಪೆಟ್ಟಿಗೆಯಲ್ಲಿ ಇಟ್ಟುಕೊಂಡು ಬೀದಿ ತಿರುಗುತ್ತಾ ಭಿಕ್ಷೆ ಎತ್ತುವುದನ್ನು ಕಾಣಬಹುದು. ಬೆಸ್ತರು 'ಜೋಕುಮಾರ'ನನ್ನು ತೂರುವ ಪುಟ್ಟಿ ಅಥವಾ ಮೊರದಲ್ಲಿ ಇಟ್ಟು ಮೆರೆಸುವುದನ್ನು ಇಲ್ಲಿ ನೆನೆಯಬಹುದು. ಊರ ಹೊರಗೆ ಕರೆದುಕೊಂಡು ಬಂದ ದೇವರುಗಳನ್ನು ಒಂದು ಕಡೆ ನಿಲ್ಲಿಸುತ್ತಾರೆ. ಅಲ್ಲಿಗೆ 'ಎತ್ತಿನ ಕಿಲಾರಿ' (ದೇವರುಗಳ ಹೆಸರಿನಲ್ಲಿ ಬಿಟ್ಟ ದನಗಳನ್ನು ಕಾಯುವ ಪವಿತ್ರ ಕಾಯಕ ಮಾಡುವ ಪೂಜಾರಿ. ಮ್ಯಾಸನಾಯಕರ ಸಾಂಸ್ಕೃತಿಕ ವೀರರಾದ ಗಾದಿರಿ ಪಾಲನಾಯಕ ಮತ್ತು ಜಗಲೂರ ಪಾಪನಾಯಕ ಅವರುಗಳ ಎತ್ತಿನ ಕಿಲಾರಿಗಳಾಗಿದ್ದರು) ಕೆಲವು ದೇವರ ದನಗಳನ್ನು ಅಲ್ಲಿಗೆ ತಂದು ಕಲೆಸುತ್ತಾನೆ. ಇಲ್ಲಿಗೆ ಬರುವ ಈ ಬುಟ್ಟಿ ದೇವರುಗಳನ್ನು 'ಉದಿ' ಎಂದೂ, ಬಂದು ಸೇರುವ ದೇವರ ದನಗಳನ್ನು 'ಪದಿ' ಎಂದೂ, ಇವೆರಡೂ ಸೇರುವುದನ್ನು 'ಉದಿ-ಪದಿ'ಗಳ ಸೇರುವಿಕೆ ಎಂದು ಭಕ್ತಿಯಿಂದ ಪೂಜಿಸುತ್ತಾರೆ.

**ಹಂದಿ ಬೇಟೆ :** ಗರಡಿ ಸಾಧನೆ ಮೂಲಕ ದೃಢವಾದ ಮೈಕಟ್ಟನ್ನು ಮೈಗೂಡಿಸಿಕೊಂಡು ಬಂದಿರುವ ಇವರು ಪ್ರಾಣದ ಹಂಗು ತೊರೆದು ಬೇಟೆಯಾಡುವುದರಲ್ಲಿ ಸಿದ್ಧಹಸ್ತರು ಎಂದು ಬಳ್ಳಾರಿ ಜಿಲ್ಲೆಯ ಹೊಸಪೇಟೆ ಭಾಗದ ಮ್ಯಾಸಬೇಡರ ಬಗ್ಗೆ ಇ.ಥರ್ಸ್‌ಟನ್[16] ಬರೆಯುತ್ತಾರೆ.

ಚಳ್ಳಕೆರೆಯ ಪ್ರಾಂತ್ಯದಲ್ಲಿರುವ ಮ್ಯಾಸನಾಯಕರು 'ವರ್ಷದಡುಕು ದಿನ' (ಯುಗಾದಿ ಹಬ್ಬದ ಎರಡನೆಯ ದಿನ) ನೂರಾರು ಯುವಕರು, ಮುದುಕರು ಕೈಯಲ್ಲಿ ಕತ್ತಿ, ಭರ್ಚಿ, ಈಟಿ, ಗಂಡುಗೊಡಲಿ, ಚಿಪ್ಪುಗೊಡಲಿ, ಕೊಡಲಿ, ಕುಡುಗೋಲು, ಮಚ್ಚು, ಕೋವಿಗಳನ್ನು ಹಿಡಿದು ಊರಹೊರಗಿನ 'ಸೀಮೆ ಜಾಲಿ' (ಬಳ್ಳಾರಿ ಜಾಲಿ)ಗಳಲ್ಲಿ ಅಡಗಿರುವ ಹಂದಿಯನ್ನು ಬೇಟೆಯಾಡಲು ಹಾಹಾಕಾರ ಮಾಡುತ್ತಾ, ಕೇಕೆ ಹಾಕಿ ಅಬ್ಬರಿಸುತ್ತಾ, ತಪ್ಪಡೆಯ ರಿಂಗಣ ಕುಣಿತಕ್ಕೆ ಆವೇಶಭರಿತರಾಗಿ ಕುಣಿಯುತ್ತಾ ಹೋಗುತ್ತಾರೆ. ಬೇಟೆ ಸಿಗದಿದ್ದಲ್ಲಿ ಬರಿಗೈಯಲ್ಲಿ ಮನೆಗೆ ಮರಳುವಂತಿಲ್ಲ! ಕೆಲವು ಬಾರಿ ಎರಡು ಮೂರು ದಿನಗಳಾದರೂ ಬೇಟೆ ಸಿಗದಿರುವ ನಿದರ್ಶನಗಳೂ ಉಂಟು.

---

16. E. Thurston : Castes and Tribes of Southern India, Page 190.

ಕೆಲವು ಸಾರಿ ಒಂದೇ ಬೇಟೆಯನ್ನು ಎರಡು ಊರಿನವರು ಬೇಟೆಯಾಡಿದಾಗ ಬೇಟೆ ಯಾರಿಗೆ ಸೇರಬೇಕು ಎಂಬುದರ ಬಗ್ಗೆ 'ಕಿರಾತಾರ್ಜುನೀಯ'ವೇ ಆಗುತ್ತದೆ. ಆದರೆ ಯಾರೂ ಬೇಟೆ ಬಿಟ್ಟುಕೊಡಲು ತಯಾರಿರುವುದಿಲ್ಲ, ಇದು ಪ್ರತಿಷ್ಠೆಯ ಪ್ರಶ್ನೆ. ಹಂದಿಯಲ್ಲಿ ಊರಿನ 'ಹುಲುಸು' (ಸಮೃದ್ಧಿ) ಅಡಗಿದೆ ಎಂಬ ನಂಬಿಕೆ ಇರುವುದರಿಂದ ಯಾರೂ ತಮ್ಮ ಹಕ್ಕನ್ನು ಕಳೆದುಕೊಳ್ಳಲು ತಯಾರಿಲ್ಲದೆ ದೊಡ್ಡ ರಗಳೆಗಳೇ ನಡೆಯುತ್ತವೆ. ಕೊನೆಗೆ ಬೇಟೆಗೆ ಹೋದವರೆಲ್ಲಾ ಬೇಟೆಯನ್ನು-ಒಂದೊಂದು ತುಂಡು ಸಿಕ್ಕರೂ ಸರಿ ಎಲ್ಲರೂ ಸಮವಾಗಿ ಹಂಚಿಕೊಳ್ಳುತ್ತಾರೆ. ಇಂತಹ ಸಂಪ್ರದಾಯದ ಮೂಲಕ ತಮ್ಮ ಪೂರ್ವಜರ ವೃತ್ತಿಯಾದ ಬೇಟೆಯ ಖುಷಿಯನ್ನು ಅನುಭವಿಸುತ್ತಾರೆ. ಇದಲ್ಲದೆ ವರ್ಷದ ಬೇರೆ ದಿನಗಳಲ್ಲಿ ಬಲೆಗಳನ್ನು ತೆಗೆದುಕೊಂಡು ಹೋಗಿ ಮೊಲಗಳ ಬೇಟೆಯಾಡಿಕೊಂಡು ಅಲ್ಲೇ ಅಡಿಗೆಮಾಡಿಕೊಂಡು ಊಟಮಾಡಿ ಬರುವುದುಂಟು. ಆದರೆ ಈ ಪ್ರಕ್ರಿಯೆ ಬೇಡರಿಗಷ್ಟೇ ಮೀಸಲಲ್ಲ. ಎಲ್ಲ ಜಾತಿಯ ಜನಗಳೂ ಈ ಕ್ರಿಯೆಯಲ್ಲಿ ಭಾಗಿಗಳಾಗುತ್ತಾರೆ.

**ವಾಸೆ ಕೊಯ್ಯೋದು**[17] : ಇದು ಐದು - ಹತ್ತು ವರುಷಗಳಿಗೊಮ್ಮೆ ನಡೆಸುವ ಅಪರೂಪದ ವಿಶಿಷ್ಟ ಸಂಪ್ರದಾಯ. ತಮ್ಮ ಮನೆ ದೇವರನ್ನು, ಇಷ್ಟದೇವತೆಯನ್ನು ಬೆಳಗಿನ ಜಾವವೇ 'ಹೊಳೆ'ಗೆ ಹೊರಡಿಸಿಕೊಂಡು ಹೋಗುತ್ತಾರೆ. ಅಲ್ಲಿ ವಾಸೆ ಕೊಯ್ಯಲು ಬಳಸುವುದು ಅಚ್ಚಕಪ್ಪು ಬಣ್ಣದ ಹೋತವನ್ನು ಮಾತ್ರ! ಇದರ ಮೈಯಲ್ಲಿ ಒಂದೇ ಒಂದು ಬೇರೆ ಬಣ್ಣದ ಕೂದಲು ಇರಕೂಡದು! (ಮೇಕೆ ಅಥವಾ ಕುರಿಯನ್ನು ಈ ಕಾರ್ಯಕ್ಕೆ ಬಳಸುವಂತಿಲ್ಲ) ಇದನ್ನು 'ಪೋತರಾಜ' ಎನ್ನುತ್ತಾರೆ. ಸೂರ್ಯೋದಯಕ್ಕೆ ಮೊದಲೇ ಈ ಸಂಪ್ರದಾಯವನ್ನು ನೆರವೇರಿಸಬೇಕು. ಹೋತವನ್ನು ಅಂಗಾತ ಮಲಗಿಸಿಕೊಂಡು (ಮುಸ್ಲಿಮರು 'ಹಲಾಲು' ಮಾಡುವ ರೀತಿಯಲ್ಲಿ) ಅದರ ಕುತ್ತಿಗೆ ಕೊಯ್ಯುತ್ತಾರೆ. ಅದರ ಕುತ್ತಿಗೆ ಕೊಯ್ದು ನಂತರ 'ಸೂರ್ಯನಿ ಮೊಕ್ಕು' (ಸೂರ್ಯನ ನಮಸ್ಕಾರ) ಮಾಡುತ್ತಾರೆ. ಇದು ಈ ಸಂಪ್ರದಾಯಕ್ಕೆ ವಿಶಿಷ್ಟತೆ ತಂದುಕೊಟ್ಟ 'ಯರಮಂಚನಾಯಕ' ನಿಗೆ ತೋರುವ ಗೌರವ ಎಂದು ಭಾವಿಸುತ್ತಾರೆ. ಇದನ್ನೇ 'ವಾಸೆ ಕೊಯ್ಯುವುದು ಅಥವಾ ನೋಮು ತೀರಿಸುವುದು' ಎನ್ನುತ್ತಾರೆ. ಈ ಕಾರ್ಯ ನಿರ್ವಹಿಸುವಲ್ಲಿ ಅಣ್ಣ-ತಮ್ಮಂದಿರು ಇದ್ದಾಗ-ವಾಸೆಕೊಯ್ಯುವ ಮೊದಲ ಹಕ್ಕು ಅಣ್ಣನದು, ನಂತರದ್ದು ತಮ್ಮನದು. ಇದರಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ದೊಡ್ಡ ರಾದ್ಧಾಂತವೇ ನಡೆದು ಬಿಡುತ್ತದೆ. ನಾಯಕನಹಟ್ಟಿ ಪಾಳೆಯಗಾರರ ಮೂಲ ಸಂತತಿಗೆ ಸೇರಿದ ಸೂರೆದೇವನ ಪಾಪನಾಯ್ಕನಿಗೂ, ನಿಡುಗಲ್ಲಿನ ಹೊಟ್ಟೆಳನಾಯ್ಕನಿಗೂ ಈ ವಿಚಾರವಾಗಿ ಅನೇಕ ವಿವಾದಗಳು ನಡೆದ ಸೂಚನೆ ನಾಯಕನಹಟ್ಟಿ ಬಖೈರಿನಲ್ಲಿ ದೊರೆಯುತ್ತದೆ.[18]

ಹಟ್ಟಿಪಾಳೆಯಪಟ್ಟಿಗೆ ಸಂಬಂಧಿಸಿದ ದಸ್ತಾವೇಜೊಂದರ ಪ್ರಕಾರ[19] ಯರಮಂಚ

---

17. ವಾಸೆಕೊಯ್ಯುವ ಸಂಪ್ರದಾಯದ ಬಗ್ಗೆ ವಿವರಗಳನ್ನು ತಿಳಿಸಿದವರು - ಗೌರಸಮುದ್ರದ ಕೆ. ಎಸ್. ಲಿಂಗಣ್ಣನವರು ಮತ್ತು ಚಳ್ಳಕೆರೆಯ ದಿ. ರಾಜಣ್ಣನವರು.
18. ಎಂ. ಎನ್. ಪ್ರಭಾಕರ : ಚಂದ್ರವಳ್ಳಿ (ನಾಯಕನಹಟ್ಟಿ ಬಖೈರು), ಪುಟ 30.

ನಾಯಕ, ಕಾಕಳಕುಮಾರ (ಇವನನ್ನು ದಸ್ತಾವೇಜಿನಲ್ಲಿ ಕಾಕುಮಂಚಿ ಕುಮಾರ ಎಂದು ಹೆಸರಿಸಲಾಗಿದೆ. ಇವನೇ ಹಟ್ಟಿ ಪಾಳೆಯಪಟ್ಟಿನ ಮೂಲ ಪುರುಷ) ಇಬ್ಬರೂ ಅಣ್ಣ ತಮ್ಮಂದಿರು. ಯರಮಂಚನಾಯಕನದು ಕೆಂಪುಬಣ್ಣದ ಹೋತ, ಕಾಕಳಕುಮಾರನದು ಕಪ್ಪು ಬಣ್ಣದ ಹೋತ. ಅಣ್ಣ ಯರಮಂಚನಾಯಕ ವಾಸೆಕೊಯ್ಯಲು ಬರುವುದು ತಡವಾಯಿತೆಂದು ಆತನ ಪ್ರಥಮ ಹಕ್ಕನ್ನು ಉಲ್ಲಂಘಿಸಿ ಕಾಕಳನಾಯಕ 'ವಾಸೆ ಕೊಯ್ದ' ನಂತರ ಬಂದ ಯರಮಂಚನಾಯಕ ತನಗೆ ಅವಮಾನವಾಯಿತು ಎಂದು ದುಃಖಿತನಾಗಿ 'ಒಂದೇ ಕಾಯಿ-ಒಂದೇ ಹೋತ-ಒಬ್ಬನೇ ಹುಡುಗನಿಂದ ಏಳು ಬಾರಿ ವಾಸೆಕೊಯ್ದ'. ಪ್ರತಿಸಾರಿ ವಾಸೆ ಕೊಯ್ದಾಗಲೂ ಹೋತ ಬದುಕಿ ಬರುತ್ತಿತ್ತು, ಒಡೆದ ಕಾಯಿ ಕೂಡಿಕೊಳ್ಳುತ್ತಿತ್ತು, ಸತ್ತ ಹುಡುಗ ಬದುಕಿ ಬರುತ್ತಿದ್ದ! ಹುಡುಗ ಕೆಂಗುರಿ ಗೊಲ್ಲರವನಾಗಿದ್ದನು. ಆದರೆ ಅವನು ಸಾಯದೆ ಕೆಂದಕುರಿ ಅವನ ಸ್ಥಾನದಲ್ಲಿ ಕಾಣಿಸಿಕೊಳ್ಳುತ್ತಿತ್ತು. ಅದಕ್ಕೋಸ್ಕರ ಖುದಾಪುರದ ಬೋರೆದೇವರ ಮೊದಲ ಮೀಸಲು ಪೂಜೆ ಆ ಜನಾಂಗದವರಿಗೇ ಸಲ್ಲಬೇಕೆಂದು ಶಾಸನ ಮಾಡಿದ ವಿವರ ಮತ್ತೊಂದು ದಸ್ತಾವೇಜಿನಲ್ಲಿ[20] ದೊರೆಯುತ್ತದೆ.

ತನ್ನ ಸತ್ಯ ತೋರಿದ ಯರಮಂಚನಾಯಕ, ಅವಮಾನವಾದ ಮೇಲೆ ಇಲ್ಲಿ ಇರಬಾರದೆಂದು ಹೊರಟು ವೇದಾವತಿ ನದಿ ದಾಟುತ್ತಿರುವಾಗ, ಈ ಸುದ್ದಿ ತಿಳಿದ ಸಮೀಪದ ಗೌರಸಮುದ್ರದ (ಆಗ ಇದು ಐವ್ವೋಜಿ ಮಠ ಎಂದು ಕರೆಯಲ್ಪಡುತ್ತಿದ್ದು, ಮ್ಯಾಸ ಮಂಡಲಿಯ ಒಂದು ಪ್ರಮುಖ ಕಟ್ಟೆಮನೆಯಾಗಿತ್ತು) ಮ್ಯಾಸರು - 'ಯರಮಂಚ ನಾಯಕನನ್ನು ಹೀಗೇ ಬಿಟ್ಟರೆ ಊರು ನಾಯಕರಲ್ಲಿ ಸೇರಿ ಬಿಡುತ್ತಾನೆಂದು ಭಾವಿಸಿ, ಹೋಗಿ ಹಿಂದಿರುಗುವಂತೆ ಬೇಡಿಕೊಂಡರು. ಆಗ ಅವನು 'ನನ್ನ ಮಾತಿಗೆ ಎದುರು ಆಡುವುದಿಲ್ಲವೆಂದರೆ ಮಾತ್ರ ನಾನು ನಿಮ್ಮನ್ನು ಸೇರುತ್ತೇನೆ' ಎಂದ. ಅದಕ್ಕೆ ಅವರು ಒಪ್ಪಿದ್ದಲ್ಲದೆ ತಮ್ಮ ಮ್ಯಾಸಮಂಡಲಿಗೆ ನಾಯಕನನ್ನಾಗಿ ಮಾಡಿಕೊಂಡರು.

ವಿಭೂತಿಪುರುಷನಾದ ಯರಮಂಚನಾಯಕ "ಒಂದೇ ಜ್ಯೋತಿಗೆ ಕುಲಗೋತ್ರ ಭೇದವಿಲ್ಲದೆ ಎಲ್ಲರನ್ನೂ ಒಂದೇ 'ಮುಕ್ಕು' (ನಮಸ್ಕಾರ) ಮುಗಿಸ್ತೀನಿ" ಎಂದು ಪ್ರತಿಜ್ಞೆ ಮಾಡಿದ. ಗೌರಸಮುದ್ರದಲ್ಲಿ ನಡೆಯುವ ಮಾರಮ್ಮನ ಜಾತ್ರೆಯ ಸಂದರ್ಭದಲ್ಲಿ ಗೌರಸಮುದ್ರದ ಊರೊಳಗಿನಿಂದ ತುಮ್ಮಲಿಗೆ ಮಾರಮ್ಮ ಬಂದು ಕೂತಾಗ, ಆಕೆಯ ಎದುರಿಗೆ ಕಾಣುವಂತೆ

---

19. ನಾಯಕನಹಟ್ಟಿ ಪಾಳೆಯಗಾರರ ಸಂತತಿಗೆ ಸೇರಿದ, ಈಗಿನ ನಾಯಕನಹಟ್ಟಿ ದೊರೆ ಎಂದು ಕರೆಯಲ್ಪಡುವ ದೊರೆ ತಿಪ್ಪೇಸ್ವಾಮಿ ನಾಯಕ ಅವರ ಕಡತಗಳಿಂದ ದೊರೆಯುವ ದಸ್ತಾವೇಜಿನ ವಿವರಗಳನ್ನು ಗಮನಿಸಿದರೆ 'ಈಗಾಗಲೇ ಚಂದ್ರವಳ್ಳಿ'ಯಲ್ಲಿ ಪ್ರಕಟವಾಗಿರುವ ನಾಯಕನಹಟ್ಟಿ ಬಖೈರು ಹೇಳುವ ಮಾಹಿತಿಗಳಿಗಿಂತ ಭಿನ್ನವಾದ ಮಾಹಿತಿಗಳನ್ನು ಮತ್ತು ಕಾಟೇನಾಯ಼್ಕನ ಮಲ್ಲಯ್ಯನ ಉಳಿದ ಮಂದಿ ಸಹೋದರರ ವಂಶಾವಳಿಯ ವಿವರಗಳನ್ನು ತಿಳಿಸುವುದರೊಂದಿಗೆ ಇದೇ ಬಖೈರನ್ನು ಪುನರ್ ಪರಿಶೀಲಿಸಬೇಕಾದ ಮಹತ್ವದ ಮಾಹಿತಿಗಳನ್ನು ಈ 'ದಸ್ತಾವೇಜು' ಒದಗಿಸುತ್ತದೆ.
20. ನರಬಲಿಕೊಡುವ ಸಂಪ್ರದಾಯದ ಈ ವಿವರವನ್ನು ನಾಯ್ಕನಹಟ್ಟಿ ದೊರೆ ತಿಪ್ಪೇಸ್ವಾಮಿ ನಾಯಕರ ಕಡತದಿಂದ ದೊರೆಯುವ ಮತ್ತೊಂದು 'ದಸ್ತಾವೇಜು' ಹೇಳುತ್ತದೆ.

ಏಳುಸ್ತಂಭದ ದೀಪ ಸ್ತಂಭ ನೆಡಿಸಿ, ಅದರ ಮೇಲೆ 'ಜ್ಯೋತಿ' ಇಟ್ಟಾಗ ಕುಲಗೋತ್ರ ಭೇದವಿಲ್ಲದೆ ಎಲ್ಲರೂ ಕೈಮುಗಿಯುವಂತೆ ಮಾಡಿ ತನ್ನ ಮಹಿಮೆಯನ್ನು ಮೆರೆದ. ವಾಸೆ ಕೊಯ್ದಾಗ ಮಾಡುವ ಸಾಂಕೇತಿಕವಾದ 'ಸೂರ್‍ಯನಿ ಮೊಕ್ಕು' ಸಂಪ್ರದಾಯದ ಹಿಂದೆ ಈ ಕತೆ ಇರುವುದನ್ನು ಅರಿಯಬಹುದು.

ವಾಸೆ ಕೊಯ್ದ ನಂತರ ಮಾಡಿದ ಮಾಂಸದ ಅಡುಗೆಯಲ್ಲಿ ಅಣ್ಣ-ತಮ್ಮಂದಿರಿಗೆ ಬಿಟ್ಟು, ಬೇರೆ ಯಾರಿಗೂ ಒಂದು ಸಣ್ಣ ತುಂಡು ಮಾಂಸವನ್ನೂ ಕೊಡುವುದಿಲ್ಲ. ಸಂಪೂರ್ಣವಾಗಿ ತಾವೇ ತಿನ್ನುತ್ತಾರೆ ! ಈ ಮಾಂಸವನ್ನು ಇವರು 'ಬಂಗಾರದ ತುಂಡು' ಎಂದು ಭಾವಿಸಿ ತಿನ್ನುತ್ತಾರೆ. ಮಾಂಸವನ್ನು ಪೂರ್ಣವಾಗಿ ತಿಂದ ನಂತರ ಉಳಿಯುವ ಎಲುಬು ಮೂಳೆಗಳನ್ನು ಬಿಸಾಕುವುದಿಲ್ಲ! ಸಮೀಪದಲ್ಲಿಯೇ ಒಂದು ಗುಂಡಿ ತೆಗೆದು ಅದರಲ್ಲಿ ಹೋತನ ತೊಗಲು (ಚರ್ಮ), ಮೂಳೆ, ತಟ್ಟೆ ತೊಳೆದ ನೀರು, ವಾಸೆ ಕೊಯ್ಯುವಾಗ ಮಣ್ಣಿನ ಮೇಲೆ ಚೆಲ್ಲಿದ ರಕ್ತದ ಮಣ್ಣನ್ನು, ಕೊನೆಗೆ ಕೈಯಲ್ಲಿಯ ಜಿಡ್ಡನ್ನು ತೊಳೆದ ಸೋಪಿನ ನೀರನ್ನು ಸಹ ಆ ಗುಂಡಿಗೆ ಬಿಟ್ಟು, ಮಣ್ಣು ಮುಚ್ಚಿ ಅದರ ಮೇಲೆ ಕಳ್ಳಿ ಅಸೆ ಹಾಕಿ ಗುಂಡು ಹೇರುತ್ತಾರೆ. ವಾಸೆ ಕ್ರಿಯೆ ಅತ್ಯಂತ ಪವಿತ್ರವಾದುದು ಎಂಬ ಭಾವನೆ ಇರುವುದರಿಂದ, ಹೂಳಿದ ಮೂಳೆಗಳನ್ನು ನಾಯಿ-ನರಿ ಮುಟ್ಟಿ ಅಪವಿತ್ರಗೊಳಿಸಬಾರದು ಎಂಬುದೇ ಈ ಕಟ್ಟುನಿಟ್ಟಿನ ನಡವಳಿಕೆಗೆ ಕಾರಣ.

ವಾಸೆ ಕೊಯ್ಯುವ ಸಂಪ್ರದಾಯವನ್ನು ಗೌರಸಮುದ್ರದಲ್ಲಿ ಪ್ರತಿವರ್ಷವೂ ತಪ್ಪದೆ ಆಚರಿಸುತ್ತಾರೆ. ಗೌರಸಮುದ್ರದ ಮಾರಮ್ಮನ ಹಬ್ಬ ಮಂಗಳವಾರವಾದರೆ, ಅದರ ಹಿಂದಿನ ಗುರುವಾರವೇ ಇವರು ಬೊಮ್ಮಲಿಂಗ ದೇವರ (ಈತನನ್ನು ಮಾರಮ್ಮನ ತಮ್ಮ ಎನ್ನುತ್ತಾರೆ. ಇವನೇ ಕೊಳಗಲು ಬೊಮ್ಮ ಇರಬಹುದೇ?) ನೇತೃತ್ವದಲ್ಲಿ 'ಲಿಂಗದ ಗುಡಿ'ಯ ಬಳಿ ವಾಸೆ ಕೊಯ್ಯುತ್ತಾರೆ.



**ಥಿಕ್ಕ ಹಬ್ಬ**[21] : ಚಳ್ಳಕೆರೆಯಿಂದ ವಾಯುವ್ಯಕ್ಕೆ 8 ಕಿ.ಮೀ. ದೂರದಲ್ಲಿರುವ ನನ್ನಿವಾಳ ಮ್ಯಾಸಬೇಡರ ಒಂದು ಪ್ರಮುಖವಾದ ನೆಲೆ ಮತ್ತು ಅವರ ಸಾಂಸ್ಕೃತಿಕ ಕೇಂದ್ರ. ನನ್ನಿವಾಳದ ಸುತ್ತ 2-3 ಕಿ.ಮೀ.ಗಳ ಅಂತರದಲ್ಲಿ ಹತ್ತಾರು ಮ್ಯಾಸಬೇಡರ ಪಟ್ಟಿಗಳಿವೆ. ಇಲ್ಲಿ ಅಪರೂಪಕ್ಕೆ

21. ಈ ಸಂಪ್ರದಾಯಗಳ ಬಗ್ಗೆ ತಿಳಿಸಿದವರು 60 ವರ್ಷದ ನನ್ನಿವಾಳದ ಸಿ.ಡಿ. ಚನ್ನಪ್ಪನವರು

ಥಿಕ್ಕಿ ಹಬ್ಬ ನಡೆಯುತ್ತದೆ. ಸುತ್ತಿನ ಹಟ್ಟಿಗಳಿಂದ 12 ಪೆಟ್ಟಿಗೆ ದೇವರುಗಳು ಸೇರುತ್ತವೆ. 12 ಪೆಟ್ಟಿಗೆ ದೇವರುಗಳಲ್ಲೊಂದಾದ ಬಂಗಾರ ದೇವರಿಗೆ ತೆಂಗಿನಕಾಯಿ ಸೇರುವುದಿಲ್ಲ. ಹೀಗಾಗಿ ಆ ದೇವರಿಗೆ ತೆಂಗಿನಕಾಯಿ ಒಡೆಯುವಂತಿಲ್ಲ! ಆದರೆ 'ತಲೆ'ಯನ್ನೇ 'ತೆಂಗಿನಕಾಯಿ' ಎಂದು ಭಾವಿಸಿ, ಹರಕೆ ಹೊತ್ತ ಅತ್ತೆ-ಸೊಸೆಯರು ಅಂದರೆ ನೆಂಟರು-ಭಂಟರು, ಒಬ್ಬರ ಜುಟ್ಟು, (ತಲೆಕೂದಲು) ಮತ್ತೊಬ್ಬರು ಹಿಡಿದು ಒಬ್ಬರ ತಲೆಗೊಬ್ಬರು 'ಫಟ್-ಫಟ್' ಎಂದು 'ಥೀ' ಕುಟ್ಟಿಕೊಳ್ಳುವ ಕ್ರಿಯೆಯ ಮೂಲಕ ಅಪರೋಕ್ಷವಾಗಿ ತೆಂಗಿನಕಾಯಿ ಅರ್ಪಿಸಿದ ತೃಪ್ತಿ ಪಡೆಯುತ್ತಾರೆ. ಸೋತವರು ಗೆದ್ದವರಿಗೆ ಕಜ್ಜಾಯ ಕೊಡಿಸಬೇಕಾಗಿರುವುದರಿಂದ ಇದೊಂದು ಆಟವೂ ಆಗುತ್ತದೆ. ಈ ಊರಿನ ಮತ್ತೊಂದು ವೈಶಿಷ್ಟ್ಯವೆಂದರೆ, ಈ ಊರಿನ 'ಹೊಲ-ಮೇರೆ'ಯಲ್ಲಿ, ಒಂದೇ ಒಂದು ಕಾಗೆಯೂ ಪ್ರವೇಶಿಸುವುದಿಲ್ಲ! ಹಿಂದೆ ಮಾಂತ್ರಿಕನೊಬ್ಬ ಆ ರೀತಿ 'ಕಟ್ಟು' ಮಾಡಿದ ಕತೆ, ಥಿಕ್ಕಿ ಹಬ್ಬದ ಸಂದರ್ಭದಲ್ಲಿ ಹಾಡುವ ಸೋಬಾನೆ ಪದಗಳೊಂದಿಗೆ ತಳಕು ಹಾಕಿಕೊಂಡಿರುವುದನ್ನು ಗಮನಿಸಬಹುದು.

ಮುಂಜಿ:[22] ನನ್ನಿವಾಳದ ಸುತ್ತಿನ ವ್ಯಾಸಬೇಡರು ಮುಸ್ಲಿಂರಂತೆ ಮುಂಜಿ ಮಾಡಿಸಿಕೊಳ್ಳುವ ಸಂಪ್ರದಾಯ ಪಾಲಿಸುವುದು ಅತ್ಯಂತ ಆಶ್ಚರ್ಯದ ವಿಷಯ. ಇದರ ಹಿಂದೆ ಒಂದು ಕತೆಯೇ ಇದೆ. ನನ್ನಿವಾಳವನ್ನು ಆಳುತ್ತಿದ್ದ ದೊರೆಯೊಬ್ಬ 'ನನ್ನೆಮ್ಮ' ಎಂಬ ಮುಸ್ಲಿಂ ಹೆಂಗಸಿನೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದನಂತೆ, ಆಗ ನನ್ನಿವಾಳವನ್ನು ನಂದಿವಾಳ ಎನ್ನುತ್ತಿದ್ದರು. (ಈ ಊರಿಗೆ ಹೊಂದಿಕೊಂಡೇ ಇರುವ ಸುಮಾರು ಸಾವಿರ ಅಡಿ ಎತ್ತರವಿರುವ ಬೃಹದಾಕಾರದ ಪರ್ವತ 'ನಂದಿಯ ಭುಜ'ವನ್ನೇ ಹೋಲುವುದರಿಂದ ಇದು 'ನಂದಿವಾಳ' ಎನಿಸಿಕೊಂಡಿರಬಹುದು) ಈಕೆ ದೊರೆಯಲ್ಲಿ ತನ್ನ ಹೆಸರನ್ನು ಶಾಶ್ವತಗೊಳಿಸುವಂತೆಯೂ, ತಮ್ಮ ಮುಸ್ಲಿಂ ಸಂಪ್ರದಾಯವನ್ನು ವ್ಯಾಸನಾಯಕರು ಅನುಸರಿಸುವಂತೆ ಮಾಡಬೇಕೆಂಬುದಾಗಿಯೂ ಕೇಳಿದ್ದರಿಂದ, ರಾಜ ಊರಿನ ಹೆಸರನ್ನು 'ನನ್ನಿವಾಳ'ವೆಂದು ಬದಲಾಯಿಸಿ, ಎಲ್ಲರೂ ಮುಂಜಿ ಮಾಡಿಸಿಕೊಳ್ಳಬೇಕೆಂದು ಆಜ್ಞೆ ಮಾಡಿದನಂತೆ.

ಹಿಂದಿನ ಕಾಲದಲ್ಲಿ ಮುಂಜಿ ಮಾಡಿದ ಹುಡುಗರನ್ನು ಗ್ರಾಮಕ್ಕೆ ಮೈಲಿಗೆಯಾಗುತ್ತದೆಂದು ಮನೆಯಲ್ಲಿ ಇಟ್ಟುಕೊಳ್ಳದೆ ಊರ ಹೊರಗಿನ ಕಾಡಿನಲ್ಲಿ ಬಿಡುತ್ತಿದ್ದರು. ಮುಂಜಿ ಮಾಡಿದ ನಂತರದ 22 ದಿನಗಳವರೆಗೂ ಇವರಿಗೆ ಊರೊಳಗೆ ಪ್ರವೇಶವಿರುತ್ತಿರಲಿಲ್ಲ. ಕಾಡಿನಲ್ಲಿರುವ ಹಣ್ಣು-ಹಂಪಲುಗಳನ್ನು ತಿಂದುಕೊಂಡು, ಊರಿನಿಂದ ಬರುವ ಬುತ್ತಿಯನ್ನು ಉಂಡುಕೊಂಡು ಕಾಲ ಕಳೆಯಬೇಕಿತ್ತು.

ಈಗಲೂ ಹಳೆಯಕಾಲದ ಜನ ಈ ಸಂಪ್ರದಾಯವನ್ನು ಅನುಸರಿಸುತ್ತಾರೆ. ಆದರೆ ಈಗೀಗ ನಾಗರಿಕ ತರುಣರು ಮುಸ್ಲಿಂ ಸಂಪ್ರದಾಯವನ್ನು ನಾವೇಕೆ ಅನುಸರಿಸಬೇಕು ಎಂದು ಧಿಕ್ಕರಿಸುತ್ತಿದ್ದಾರೆ.

ಆದರೂ ಈ ಸಂಪ್ರದಾಯದ ಅವಶೇಷ ಎನ್ನುವಂತೆ - ಒಂದು ಬಟ್ಟಲು ಅಡಕೆಯ ಮೇಲೆ ಒಂದು ವೀಳೆಯದ ಎಲೆ ಇಟ್ಟು, ಅದರ ಮೇಲೆ ಪುರುಷ ಜನನಾಂಗದ

22. ಈ ಮಾಹಿತಿಯನ್ನು ನೀಡಿದವರು 21ರ ಟಿಪ್ಪಣಿಯಲ್ಲಿ ಉಲ್ಲೇಖಿತರಾದವರೇ.

ತುದಿಚರ್ಮವನ್ನು ಇರಿಸಿ, ಅದರ ಮೇಲ್ಲೊಂದು ಅಡಕೆಯ ಚೂರನ್ನು ಇಟ್ಟು, ಚುಚ್ಚುವ ಸಾಂಕೇತಿಕ ಕ್ರಿಯೆಯ ಮೂಲಕ ಆಚರಿಸುತ್ತಾರೆ.

ಮೊಲದ ಓಟ : ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಮಂಚಲದೊರೆಯ ಬಳಿ ಇರುವ ವೀರಮುಚ್ಚಿಗನಹಳ್ಳಿಯ 'ಕಂಬದ ರಂಗ'ನ (ನರಸಿಂಹಸ್ವಾಮಿ) ಜಾತ್ರೆಯಲ್ಲಿ ಒಂದು ವಿಚಿತ್ರ ಆಚರಣೆ ನಡೆಯುತ್ತದೆ. ಅಲ್ಲಿಯ ನಾಯಕ ಜನಾಂಗ (ಇಲ್ಲಿ 'ಮುಚ್ಚಲೋರು' ಎಂಬ ಬೆಡಗಿನ ಜನಗಳೇ ಹೆಚ್ಚಾಗಿದ್ದಾರೆ). ಒಂದು ಮೊಲವನ್ನು ಹಿಡಿದು ತಂದು ಅದರ ಕುತ್ತಿಗೆಗೆ ಒಂದು ಸಣ್ಣ ಗೆಜ್ಜೆಯನ್ನು ಕಟ್ಟುತ್ತಾರೆ. ಕಂಬದ ರಂಗನ ತೇರು ಎಳೆಯಲು ಸಿದ್ಧತೆ ಮಾಡಿದ ನಂತರ, ಆ ತೇರಿಗೆ ನೇರವಾಗಿ ಸುಮಾರು ಒಂದು ಫರ್ಲಾಂಗು ದೂರದಲ್ಲಿ ಈ ಗೆಜ್ಜೆ ಕಟ್ಟಿದ ಮೊಲವನ್ನು ಹಿಡಿದ ವ್ಯಕ್ತಿ ಇರುತ್ತಾನೆ. ಜಾತ್ರೆಗೆ ಬಂದ ಜನ ತೇರಿಗೂ-ಮೊಲ ಹಿಡಿದವನಿಗೂ ಮಧ್ಯೆ ದಾರಿ ಬಿಟ್ಟು ಮೊಲದ ಓಟವನ್ನು ನೋಡಲು ನಿಂತಿರುತ್ತಾರೆ. ಮೊಲ ಹಿಡಿದ ವ್ಯಕ್ತಿ ಅದನ್ನು ಬಿಡುತ್ತಿದ್ದಂತೆಯೇ ಅದು ಗಾಬರಿಯಿಂದ ಘೇರಿ ಕೀಳುತ್ತಾ ರಥದತ್ತ ಓಡತೊಡಗುತ್ತದೆ, ಜನ ಕೇಕೆ ಹಾಕಿ ಹುಚ್ಚೆದ್ದು ಕುಣಿಯುತ್ತಾರೆ. ಆ ಮೊಲ ಜನಗಳಿಂದ ತಪ್ಪಿಸಿಕೊಂಡು ಕಾಡಿಗೆ ಓಡುತ್ತದೆ, ನಂತರ ತೇರು ಎಳೆಯುತ್ತಾರೆ. ಮತ್ತೆ ಎಂದಾದರೂ ಬೇಟೆಯಾಡುವಾಗ ಆ ಗೆಜ್ಜೆ ಕಟ್ಟಿದ ಮೊಲ ಬಲೆಯಲ್ಲಿ ಸಿಕ್ಕರೆ ಕೊಲ್ಲುವುದಿಲ್ಲ. ಅದನ್ನು 'ದೇವರ ಪ್ರಾಣಿ' ಎಂಬ ಗೌರವದಿಂದ ಜೀವಂತವಾಗಿ ಬಿಟ್ಟುಬಿಡುವ ಈ ಸಂಪ್ರದಾಯ ಬೇಟೆಯಲ್ಲಿ ತೋರಬೇಕಾದ ದಯೆ-ಮಾನವೀಯತೆ-ಪಾವಿತ್ರ್ಯಗಳ ಅವಶ್ಯಕತೆಯನ್ನು ಎತ್ತಿ ಹಿಡಿಯುವಂತಿದೆ. ಜೊತೆಗೆ ತಮ್ಮ ಪೂರ್ವಿಕರ ಆಚರಣೆಯನ್ನು ಅನುಕರಿಸುವಂತಿದೆ.

**2. ಊರು ನಾಯಕರು :** ಈ ಜನಾಂಗ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯಲ್ಲಿ ತುಮಕೂರು ಜಿಲ್ಲೆಯ ಪೂರ್ವಭಾಗದ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಇದ್ದಾರೆ. (ಗೊಲ್ಲರಲ್ಲಿ ಕೂಡ ಊರುಗೊಲ್ಲರು ಎಂಬುದೊಂದು ಪಂಗಡವಿದೆ. ಇವರು ಹಿಂದೆ ರಾಜನ ಖಜಾನೆಯ ಕಾವಲುಗಾರರಾಗಿ ಕೆಲಸ ಮಾಡುತ್ತಿದ್ದರು. ಖಜಾನೆ ಇಲಾಖೆಯಲ್ಲಿ ಇಂದಿಗೂ 'ಗೊಲ್ಲರ್' ಎಂಬ ಶಬ್ದ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು).

ಮ್ಯಾಸನಾಯಕರಿಗೆ ಸಹಜ ಕಾಯಕವಾದ ಯುದ್ಧಕ್ಕೆ ಅಂಜಿ ಮನೆಗಳಲ್ಲಿ ಉಳಿದ ಈ ಜನಗಳನ್ನು ಕುಲಾಚಾರದ ಕಟ್ಟಿನಿಂದ ಹೊರಗಿಟ್ಟು, ಹಟ್ಟಿಗಳಿಂದ ಇವರನ್ನು ಉಚ್ಚಾಟನೆ ಮಾಡಿದ್ದರಿಂದ, ಅನಿವಾರ್ಯವಾಗಿ ನಾಗರಿಕ ಜನಗಳ ಮಧ್ಯೆ ಬಂದು ಊರುಗಳಲ್ಲಿ ಬದುಕಬೇಕಾಗಿದ್ದರಿಂದ ಇವರನ್ನು 'ಊರು ನಾಯಕರು' ಎಂದು ಕರೆಯಲಾಯಿತೆಂದು ಹಿರಿಯರೊಬ್ಬರು ಹೇಳುತ್ತಾರೆ.

ಇನ್ನೊಂದು ಹೇಳಿಕೆಯ ಪ್ರಕಾರ - ಮ್ಯಾಸಬೇಡರಿಗೆ ನಿಷಿದ್ಧವಾದ ಕೋಳಿ, ಹಂದಿ ಸೇವನೆ ಮಾಡಿದ್ದರಿಂದ ಇವರನ್ನು ಜಾತಿಯಿಂದ ಹೊರಗೆ ಹಾಕಲಾಯಿತು ಎನ್ನುತ್ತಾರೆ.

ಅದೇನೇ ಇರಲಿ- ಈ ಜನ ಊರುಗಳಲ್ಲಿದ್ದರೂ ಹೇಳಿಕೊಳ್ಳುವಂತಹ ನಾಗರಿಕತೆಯ. ಹೆಚ್ಚಿನ ಲಕ್ಷಣಗಳೇನೂ ಇವರಲ್ಲಿ ಕಾಣುವುದಿಲ್ಲ. ಆದರೆ ನಾಗರಿಕ ಜನಾಂಗದ ರೀತಿ-

ನೀತಿಗಳನ್ನು ಅನುಕರಿಸುವ ಈ ಜನಗಳ ಮದುವೆ ಸಂಪ್ರದಾಯದಲ್ಲಿ ಶಿಷ್ಟ ಜಾತಿಯ ಆಚರಣೆಗಳನ್ನು ಕಾಣಬಹುದು. ಮ್ಯಾಸನಾಯಕರು ಇವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವುದಿಲ್ಲ (ಆದರೆ ಇತ್ತೀಚಿಗೆ ಯುವಕರು ಈ ಕಟ್ಟಳೆಗಳನ್ನು ಮುರಿಯುತ್ತಿದ್ದಾರೆ), ಆದರೆ ಊರ ನಾಯಕರು -ಮ್ಯಾಸನಾಯಕರೊಂದಿಗೆ ಸಂಬಂಧಗಳನ್ನು ಬೆಳೆಸಲು ಕಾತುರರಾಗಿದ್ದಾರೆ.

ಈ ಜನಾಂಗದ ಆರಾಧ್ಯದೈವ - ಮಲೆಮಹದೇಶ್ವರ. ಇವರಲ್ಲಿ ಕೂಡ್ಲಿಗಿ ಭಾಗದ ಕೆಲವು ವರ್ಗದವರು ವಿಜಯನಗರದ ಅಚ್ಯುತದೇವರಾಯನ ಕಾಲದಲ್ಲಿ ರಾಜರ ಭೋಗದ ವಸ್ತುಗಳಾಗಿದ್ದರು. ವಿಜಯನಗರ ಪತನಾನಂತರ ಬೀದಿಗೆ ಬಿದ್ದ ಈ ಜನ ಕೂಡ್ಲಿಗಿಯಲ್ಲಿ ದಟ್ಟವಾಗಿ ನೆಲೆಸಿದ್ದಾರೆ, ನಾಟಕ ಕಲೆಯಿಂದ ಉದರಪೋಷಣೆ ಮಾಡುತ್ತಿದ್ದಾರೆ. ಇನ್ನೂ ಕೆಳಹಂತದಲ್ಲಿರುವ ಜನ-ಹಳ್ಳಿಗಳಲ್ಲಿ ಉರುಮೆ ಬಾರಿಸುತ್ತಾ, ಹೊತ್ತಾಡೋ ಮಾರಮ್ಮನನ್ನು (ಈಕೆಯನ್ನು ಗಾಳಿಮಾರಮ್ಮ, ಉರಿ ಮಾರಮ್ಮ ಎಂದೂ ಕರೆಯುತ್ತಾರೆ) ಹೊತ್ತು, ಮೈಗೆ ಚಾಟಿಯಿಂದ ರಕ್ತ ಬರುವಂತೆ ಹೊಡೆದುಕೊಂಡು, ಜನಗಳಿಂದ ಕಾಳುಕಡ್ಡಿ ಪಡೆದು ಜೀವನಮಾಡುವ ಚಿಂತಾಜನಕ ಪರಿಸ್ಥಿತಿಯಲ್ಲಿದ್ದಾರೆ.

**3.ಪಾಳೆಯಗಾರರು** : ಸಮಾಜದ ಅತ್ಯಂತ ಉನ್ನತ ಸ್ಥಾನದಲ್ಲಿರುವ ಜನಾಂಗ ಇದು. ಇವರು ಮೂಲತಃ ಮ್ಯಾಸಬೇಡರಾಗಿದ್ದರೂ ತಾವು ಪಡೆದ ಸ್ಥಾನಮಾನದ ದೆಸೆಯಿಂದ 'ಪಾಳೆಯಗಾರರು' ಎನಿಸಿಕೊಂಡರು. ಇವರನ್ನು ಇಂದೂ 'ದೊರೆಗಳು'ಎಂದೇ ಕರೆಯುತ್ತಾರೆ.

"ಭಾರತಕ್ಕೆ ಧಾಳಿಯಿಟ್ಟು ಮುಸ್ಲಿಮರಿಂದ ತಮ್ಮ ಜನಗಳ ಮಾನ ಪ್ರಾಣ ಧರ್ಮವನ್ನು ಕಾಪಾಡಿಕೊಳ್ಳಲು ಪಾಳೆಯಗಳನ್ನು ಕಟ್ಟಿ ತಿರುಗುತ್ತಿದ್ದವರೇ 'ಪಾಳೆಯಗಾರರು' ಎನಿಸಿಕೊಂಡರು"[23] ಎಂಬುದು ಹರತಿ ವೀರನಾಯಕರ ವ್ಯಾಖ್ಯಾನ.

"ಬಹಳಷ್ಟು ಮಂದಿ ಪಾಳೆಯಗಾರರ ಉದಯವಾದದ್ದು ವಿಜಯನಗರ ಅರಸರ ಕಾಲದಲ್ಲಿ ಮಾತ್ರ. ವಿಜಯನಗರದ ಅರಸರು ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿ, ಅದಕ್ಕೆ ಸೇರಿದ ನಾನಾ ಭಾಗಗಳ ಮೇಲೆ ತಾವೇ ನೇರವಾಗಿ ಆಳ್ವಿಕೆ ನಡೆಸುವುದು ಕಷ್ಟವೆಂದು ಕಂಡು ಬಂದಾಗ, ಆಯಾ ಪ್ರದೇಶಗಳ ಆಡಳಿತದ ಉಸ್ತುವಾರಿ ನೋಡಿಕೊಳ್ಳಲು, ಕಂದಾಯ ವಸೂಲಿ ಮಾಡಲು, ಇವೇ ಮೊದಲಾದ ಉದ್ದೇಶಗಳಿಗಾಗಿ ಕೆಲವು ಬಲಿಷ್ಠ ಹಾಗೂ ಪ್ರಭಾವವುಳ್ಳ ಅಧಿಕಾರಗಳನ್ನು ನೇಮಿಸುತ್ತಿದ್ದರು. ಈ ಸಾಮಂತ ಅಧಿಕಾರಗಳೇ ಕ್ರಮೇಣ ಪಾಳೆಗಾರರೆನಿಸಿಕೊಂಡರು"[24] ಎಂಬ ಲಕ್ಷ್ಮಣ್ ತೆಲಗಾವಿಯವರ ವ್ಯಾಖ್ಯಾನ ಅತ್ಯಂತ ಸಮರ್ಪಕವಾಗಿದೆ.

ವಿಜಯನಗರ ಪತನಾನಂತರ ತಮ್ಮನ್ನು ಸ್ವತಂತ್ರರೆಂದು ಘೋಷಿಸಿಕೊಂಡ ಇವರು ತಮ್ಮದೇ ಪಾಳೆಯಪಟ್ಟುಗಳನ್ನು ಕಟ್ಟಿ ಮೆರೆದರು. ಇವರಲ್ಲಿ ಚಿತ್ರದುರ್ಗದ ಪಾಳೆಯಗಾರರು

23. ಹೆಚ್.ವಿ. ವೀರನಾಯಕ : ಕ್ಷಾತ್ರಾಂಶ ಪ್ರಬೋಧ, 1987.
24. ಲಕ್ಷ್ಮಣ್ ತೆಲಗಾವಿ : ಚಂದ್ರವಳ್ಳಿ, (ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ) 1976, ಪುಟ 63.

ಪ್ರಮುಖರು.

ಚಿತ್ರದುರ್ಗದ ಪಾಳೆಯಗಾರರ ಖಾಸಾವಂಶಸ್ಥರಾದ ಶ್ರೀ ಪಿ.ಆರ್.ವೀರಭದ್ರನಾಯಕರ ಮನೆತನದವರು, ಚಳ್ಳಕೆರೆಯ ಗ್ರಾಮದೇವತೆಯಾದ 'ಚಳಕೇರಮ್ಮ'ನಿಗೆ, ಆಕೆಯ ಜಾತ್ರೆಯಲ್ಲಿ 'ತಾಳಿಭಾಗ್ಯ' ಕೊಡುವ ವಿಶಿಷ್ಟ ಸಂಪ್ರದಾಯವೊಂದು ಇದೆ. ಉತ್ಸವದ ಮೊದಲ ದಿನ ಬ್ರಾಹ್ಮಣಳಾದ ದೇವತೆ ತನಗೆ ಮೋಸ ಮಾಡಿ ಮದುವೆಯಾದ ಅಸ್ಪೃಶ್ಯ ಗಂಡನನ್ನು ಕೋಣನ ರೂಪದಲ್ಲಿ ಬಲಿ ತೆಗೆದುಕೊಳ್ಳುತ್ತಾಳೆ. ಕಳೆದ ವರ್ಷದ ಜಾತ್ರೆಯಲ್ಲಿ ಹಾಕಿದ್ದ ಮಾಂಗಲ್ಯವನ್ನು ತೆಗೆದು ಆಕೆಯನ್ನು ವಿಧವೆ ಮಾಡುತ್ತಾರೆ. ಎರಡನೆ ದಿನ-ಕಡಿದ ಕೋಣದಿಂದ ತೆಗೆದ ಕೊಬ್ಬಿನಿಂದ ದೇವಿಯ ಎದುರಿನ 'ದೃಷ್ಟಿಕಂಬ'ದ ಬಳಿ ದೀಪ ಉರಿಸುತ್ತಾರೆ. ಇದರಿಂದ ಆಕೆಗೆ ತನ್ನ ಗಂಡನನ್ನು ಶಿಕ್ಷಿಸಿದ ಸಂತೃಪ್ತಿ ಸಿಗುತ್ತದೆ ಎಂಬ ನಂಬಿಕೆ ಇದೆ. ಅಂದು ಆಕೆ ಗಂಡನನ್ನು ಕಳೆದುಕೊಂಡ ವಿಧವೆಯಂತಿರುತ್ತಾಳೆ. ಮತ್ತೆ ಮೂರನೆಯ ದಿನ-ಆವಳಿಗೆ ತಾಳಿಯ ಧಾರಣೆ ಆಗುತ್ತದೆ. ಸುಮಂಗಲಿಯಾಗುತ್ತಾಳೆ. ಈ ತಾಳಿಯನ್ನು ಪಾಳೆಯಗಾರರು ತಮ್ಮ ಮನೆದೇವತೆ ಮತ್ತು ಮನೆಯ ಹೆಣ್ಣುಮಗಳು ಎಂಬ ಭಾವನೆಯಿಂದ ಕೊಡುತ್ತಾರೆ.

ಪಾಳೆಯಗಾರರ ಮದುವೆಯ ರೀತಿ-ರಿವಾಜುಗಳು ಮ್ಯಾಸನಾಯಕರಿಗಿಂತ ಭಿನ್ನವಾಗಿವೆ. ವಧು-ವರರ ಸುತ್ತ ಅಗ್ನಿಕುಂಡ ರಚನೆಯ ಮಾದರಿಯಲ್ಲಿ ಇಟ್ಟಿಗೆಗಳನ್ನು ಇಡುತ್ತಾರೆ. ಇದನ್ನೇ ಇವರು 'ಹಸೆಕಟ್ಟೆ' ಎನ್ನುವುದು. ಈ ಹಸೆಕಟ್ಟೆಗೆ ಹಾಕಿರುವ ಚಪ್ಪರದಲ್ಲಿ 'ಹತ್ತಿ-ಆಲ-ಅರಳಿ-ಮಾವು'ಗಳ ಕೊನೆಗಳನ್ನು ಬಳಸಿರುತ್ತಾರೆ. ಈ ಹಸೆಕಟ್ಟೆ ಏರುವ ಮುನ್ನವೇ ವರನಿಗೆ 'ಯಜ್ಞೋಪವೀತ' ಧಾರಣೆಯಾಗುತ್ತದೆ, ಇದನ್ನು 'ಮುಂಜಿ ಅಥವಾ ನಾಂದಿ' ಎನ್ನುತ್ತಾರೆ.

ಬ್ರಾಹ್ಮಣರಲ್ಲಿ ಇರುವಂತೆ ಇವರಿಗೂ 'ಋಷಿ ಗೋತ್ರ'ಗಳಿದ್ದು, ಹೆಚ್ಚು ಕಡಿಮೆ ಬ್ರಾಹ್ಮಣರ ರೀತಿ-ನೀತಿಗಳಿಗೆ ಸಮಾನವಾದ ನಡವಳಿಕೆಗಳನ್ನು ತೋರುತ್ತಾರೆ.

ಇವರ ವೈವಾಹಿಕ ಸಂಬಂಧ ಪಾಳೆಯಗಾರರೊಂದಿಗೆ ಮಾತ್ರ ಸೀಮಿತವಾಗಿದೆ. ಇವರಿಗೆ ದೊರೆತ ಸಾಮಾಜಿಕ ಸ್ಥಾನಮಾನಗಳೇ ಹೇಗೆ ಬುಡಕಟ್ಟೊಂದು- 'ಜಾತಿ'ಯಾಗಿ ಪರಿವರ್ತಿತವಾಗುತ್ತದೆ ಎಂಬುದಕ್ಕೆ ಸೊಗಸಾದ ಉದಾಹರಣೆಯಾಗಿದೆ.

ಶವಸಂಸ್ಕಾರ ಸಂಪ್ರದಾಯಗಳಲ್ಲಿಯೂ ಇವರಲ್ಲಿ ಭಿನ್ನತೆಯನ್ನು ಗುರುತಿಸಬಹುದು. ಮ್ಯಾಸನಾಯಕರು ಶವವನ್ನು 'ಮಣ್ಣು' ಮಾಡಿದರೆ, ಬ್ರಾಹ್ಮಣರಂತೆ ಇವರು 'ದಹನ' ಮಾಡುತ್ತಾರೆ. ಶವವನ್ನು ಬಿದಿರು ಗಳದ 'ಚಟ್ಟ'ದಲ್ಲಿ ಮಾತ್ರ ಸಾಗಿಸುತ್ತಾರೆ, ಬಿದಿರುಗಳ ಸಿಗದಿದ್ದಾಗ ಅನಿವಾರ್ಯವಾಗಿ 'ಹಾಲು ಕಂಬ'(ಕಳ್ಳಿ ಬಡಿಗೆ)ಬಳಸುತ್ತಾರೆ. ಶವವನ್ನು ಚಟ್ಟದ ಸಮೇತ ದಹನಕ್ಕಾಗಿ ಒಟ್ಟಿದ ಕಟ್ಟಿಗೆಗಳ ಮೇಲೆ ಇಟ್ಟು, ಚಟ್ಟದ ಬಲಭಾಗದಲ್ಲಿರುವ ಚಟ್ಟದ ಗಳವನ್ನು ಕಿತ್ತುಪಕ್ಕಕ್ಕೆ ಎಸೆಯುತ್ತಾರೆ. ಈ ಬಿದಿರುಗಳನ್ನು ಯಾರಾದರೂ ರೈತರು ಬಿತ್ತನೆಯ 'ಅಕ್ಕಡಿ ಸೆಡ್ಡೆ'ಗಾಗಿ ತೆಗೆದುಕೊಂಡು ಹೋಗುತ್ತಾರೆ. ಇಂಥ ಬಿದಿರು 'ಗಳ'

ಸಿಗುವುದು ಅದೃಷ್ಟ, ಪುಣ್ಯ ಎಂಬ ನಂಬಿಕೆ ಜನರಲ್ಲಿ ಇದೆ. ಮೂರು ದಿನಗಳ ನಂತರ 'ದಿವಸ' (ಶ್ರಾದ್ಧ)ಕ್ಕೆ ಬಂದಾಗ ಈ ಬಿದಿರು ಗಳ ಸಿಕ್ಕರೆ ಮನೆಯವರೇ ತೆಗೆದುಕೊಂಡು ಹೋಗಿ ಬಿತ್ತನೆಯ' ಅಕ್ಕಡಿ ಸೆಡ್ಡೆ'ಯಾಗಿ ಬಳಸಿಕೊಳ್ಳುತ್ತಾರೆ. ಇದನ್ನು ಬಳಸುವುದರಿಂದ ಬೆಳೆ 'ಹುಲುಸು' ಆಗುತ್ತದೆ ಎಂಬ ನಂಬಿಕೆ ಇದೆ.

ಶ್ರಾದ್ಧ ಮಾಡುವ ಮೂರನೆ ದಿನ ಸತ್ತವ್ಯಕ್ತಿಗೆ ಇಷ್ಟವಾದಂತಹ ಎಲ್ಲ ರೀತಿಯ ಅಡುಗೆಗಳನ್ನು ಮಾಡಿರುತ್ತಾರೆ. ಅವನಿಗೆ ಮಾಂಸ, ಹೆಂಡ ಇಷ್ಟವಾಗಿದ್ದಲ್ಲಿ ಎಲ್ಲವನ್ನೂ ತಂದು ಅವನನ್ನು ಸುಟ್ಟ ಜಾಗದಲ್ಲಿ, ಮಣ್ಣುಗುಡ್ಡೆ ಮಾಡಿ ಅದರ ಮೇಲೆ ಇಡುತ್ತಾರೆ. ಕಾಗೆ ಬಂದು ಮುಟ್ಟಿದಾಗ ಅವನಿಗೆ ಮುಕ್ತಿ ದೊರೆಯಿತು ಎಂದು ನಂಬುತ್ತಾರೆ. ಕಾಗೆ ಬಂದು ಮುಟ್ಟದಿದ್ದಲ್ಲಿ ಎಲ್ಲ ವಸ್ತುಗಳನ್ನು ಅವನ ಶವದ ಬೂದಿಯ ಜೊತೆಗೆ 'ಗಂಗೆ ಪಾಲು' ಮಾಡುತ್ತಾರೆ.

ನಾಯಕ ಜನಾಂಗದ ಆಚಾರ-ವಿಚಾರಗಳ ಪಕ್ಷಿನೋಟವನ್ನು ಕೊಡುವ ಒಂದು ಕಿರುಪ್ರಯತ್ನ ಇದು.

* ಜಾನಪದ ಗಂಗೋತ್ರಿ, 1988.

* ವಾಲ್ಮೀಕಿ ಜ್ಯೋತಿ, 1989.

* ಗೊಲ್ಲಕಡಗ, 1999.



# ಮೊಳಕಾಲ್ಮೂರು ತಾಲ್ಲೂಕಿನ ಜಾನಪದ ನೆಲೆಗಳು

ಭೂಪಟದಲ್ಲಿ ಚಿತ್ರದುರ್ಗ ಜಿಲ್ಲೆಯ ಈಶಾನ್ಯ ಭಾಗದಲ್ಲಿರುವ ಮೊಳಕಾಲ್ಮೂರು ತಾಲ್ಲೂಕು ಉದ್ದಕ್ಕೆ ಚಾಚಿಕೊಂಡ ಒಂಟೆಯ ಅಥವಾ ಜಿರಾಫೆಯ ಕತ್ತಿನಂತೆ ಕಾಣುತ್ತದೆ ಹಾಗೂ ಜಿಲ್ಲೆಯ ಚಿಕ್ಕ ತಾಲ್ಲೂಕುಗಳಲ್ಲೊಂದಾಗಿದೆ. ಜನಪದ ಸಂಸ್ಕೃತಿಯ ದೃಷ್ಟಿಯಿಂದ ಶ್ರೀಮಂತವಾದ ಈ ಭಾಗ ಅತ್ಯಂತ ಪ್ರಾಚೀನವಾದ ಆದಿಮಾನವನ ನೆಲೆಗಳಲ್ಲೊಂದಾಗಿದೆ. ಸುತ್ತಿನ ಶಿಲಾಮಯವಾದ ಪರ್ವತ ಪ್ರದೇಶದ ನೆಲೆ. ಉರಿಬಿಸಿಲು, ವಿರಳ ಮಳೆಯಿಂದಾಗಿ ವಿಶಿಷ್ಟ ಬಗೆಯ ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣವೂ ಆಗಿದೆ. ಇದರೊಂದಿಗೆ ತಾಲ್ಲೂಕಿನ ಪೂರ್ವ ಭಾಗದುದ್ದಕ್ಕೂ ಅಂಟಿಕೊಂಡಿರುವ ಆಂಧ್ರಪ್ರದೇಶದ ರಾಯದುರ್ಗ ತಾಲ್ಲೂಕು, ಉತ್ತರ ದಿಕ್ಕಿನಲ್ಲಿರುವ ಬಳ್ಳಾರಿ ಜಿಲ್ಲೆ, ಪಶ್ಚಿಮಕ್ಕಿರುವ ದಾವಣಗೆರೆ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಸಾಂಸ್ಕೃತಿಕ ಒತ್ತಡಗಳಿಗೆ ಸಿಲುಕಿದ ಜನಪದ ಸಂಸ್ಕೃತಿ ಅತ್ಯಂತ ಭಿನ್ನವಾಗಿದೆ. ತೆಲುಗುನಾಡಿನಿಂದ ಹರಿದುಬರುವ ಜನಪದ ಕಲೆಗಳಿಗೆ ಮೊಳಕಾಲ್ಮೂರು ಹೆಬ್ಬಾಗಿಲಿನಂತಿದ್ದು, ಅವೆಲ್ಲವನ್ನು ತನ್ನ ಸಂಸ್ಕೃತಿಯಲ್ಲಿ ಅರಗಿಸಿಕೊಂಡು ವಿಶಿಷ್ಟ ಮೆರುಗನ್ನು ಪಡೆದಿದೆ. ಈ ತಾಲ್ಲೂಕಿನ ಸಿಂಹಪಾಲು ಜನಗಳ ಮಾತೃಭಾಷೆ ತೆಲುಗಾದರೂ ಅದು ಹಾಲಿನಲ್ಲಿಯ ಸಕ್ಕರೆಯಂತೆ ಕನ್ನಡ ಸಂಸ್ಕೃತಿಯಲ್ಲಿ ಬೆರೆತುಹೋಗಿದೆ. ಈ ದ್ವಿಭಾಷಾ ಪ್ರದೇಶದಲ್ಲಿ ಭಾಷೆ ಎಂದೂ ಸಂಘರ್ಷಕ್ಕೆ ಇಳಿಯದೆ ಅಪೂರ್ವ ಸಾಮರಸ್ಯ ಹೊಂದಿ ಕನ್ನಡ ಸಂಸ್ಕೃತಿಯ ಮುಖ್ಯವಾಹಿನಿಯೊಂದಿಗೆ ಮಿಳಿತವಾಗಿದೆ. ಈ ಭಾಗದ 'ತೆಲುಗನ್ನಡ' ಭಾಷಾ ವಿಜ್ಞಾನಿಗಳಿಗೊಂದು ಸ್ವಾರಸ್ಯದ ಗಣಿಯೂ ಆಗಬಹುದು. ಇದರೊಂದಿಗೆ ಮರಾಠಿ, ಉರ್ದು ಭಾಷೆಗಳು ಇಣುಕಿ ಹಾಕುವುದರ ವಿಶಿಷ್ಟ ಭಾಷಾಪಾಕವನ್ನು ಇಲ್ಲಿ ಕಾಣಬಹುದು. ಈ ತಾಲ್ಲೂಕಿನಾದ್ಯಂತ ದಟ್ಟವಾಗಿ ನೆಲಸಿರುವ ಮ್ಯಾಸಬೇಡರದು ವಿಶಿಷ್ಟ ಜನಪದ ಸಂಸ್ಕೃತಿಯಾಗಿದ್ದು, ತನ್ನ ಬುಡಕಟ್ಟು ಸಂಸ್ಕೃತಿಯನ್ನು ತನ್ನೆಲ್ಲ ದಟ್ಟತೆ, ವೈವಿಧ್ಯಗಳೊಂದಿಗೆ ಉಳಿಸಿಕೊಂಡಿದ್ದು ಸಂಸ್ಕೃತಿಯ ಜೀವಂತ ಪಳೆಯುಳಿಕೆ (living Fossil) ಯಾಗಿದೆ. ಮೂಲತಃ ಬೇಟೆ ಸಂಸ್ಕೃತಿಗೆ (Hunt Culture) ಸೇರಿದ ಮ್ಯಾಸಬೇಡರ ಒಂದು ಪ್ರಮುಖ ಸಾಂಸ್ಕೃತಿಕ ನೆಲೆ ಇದಾಗಿದ್ದು, 'ಮ್ಯಾಸ ಮಂಡಲ' ಎಂದು ಕರೆಯುವ ಸಿಂಹಪಾಲು ಪ್ರದೇಶ, ಮೊಳಕಾಲ್ಮೂರು ತಾಲ್ಲೂಕಿನ ವ್ಯಾಪ್ತಿಯಲ್ಲೇ ಬರುತ್ತದೆ; ಉಳಿದ ಭಾಗ ಚಳ್ಳಕೆರೆ ತಾಲ್ಲೂಕಿನ ತಳಕು, ನಾಯಕನಹಟ್ಟಿ ಹೋಬಳಿಗಳ ವ್ಯಾಪ್ತಿಯಲ್ಲಿದೆ.

ಕೃಷ್ಣಕಾಯದ, ಬಲಿಷ್ಠ ಮೈಕಟ್ಟಿನ ಈ ಜನ ಮೂಲತಃ ವಲಸೆಗಾರರು. ಆಂಧ್ರದ ಶ್ರೀಶೈಲ ಭಾಗದ ಬೆಟ್ಟಸೀಮೆಯಿಂದ ಬಂದ ಇವರು ತಮ್ಮೊಂದಿಗೆ ತಮ್ಮ ಪಶುಸಂಪತ್ತಿನೊಂದಿಗೆ ತಮ್ಮ ಸಂಸ್ಕೃತಿಯ ಮೂಲದ್ರವ್ಯವಾದ ಹನ್ನೆರಡು ಪೆಟ್ಟಿಗೆ ದೇವರುಗಳನ್ನೂ ಹೊತ್ತು ತಂದವರು. ಈ ತಾಲ್ಲೂಕಿನಲ್ಲಿ ಇವರು 'ಕಂಪಳದೇವರಹಟ್ಟಿ' ಎಂದು ಕರೆಯಲ್ಪಡುವ ಚಿಕ್ಕಕುಮ್ಮಿಯಲ್ಲಿ, ತಮ್ಮ ದೇವರುಗಳೊಂದಿಗೆ ಬೀಡುಬಿಟ್ಟವರು. ನಂತರ ಇದೇ ಅವರ ಸಾಂಸ್ಕೃತಿಕ ನೆಲೆಯಾಗಿ ವಿಕಾಸಗೊಂಡಿರುವುದನ್ನೂ ಇಲ್ಲಿ ಅವರು ತಮ್ಮ ಕಂಪಳದೊಂದಿಗೆ (ಗುಂಪಿನೊಂದಿಗೆ) ತಂದ 'ರಂಗಸ್ವಾಮಿ', 'ಕಂಪಳ ರಂಗ'ನಾಗಿ ಆರಾಧನೆಗೊಳ್ಳುತ್ತಿರುವುದನ್ನು ಕಾಣಬಹುದು.

ಮೂಲತಃ ಶೈವ ಸಂಸ್ಕೃತಿಗೆ ಸೇರಿದ ಮ್ಯಾಸಬೇಡರು ವಿಷ್ಣುವಿನ ಆರಾಧಕರೂ ಆಗಿರುವುದನ್ನು ಗಮನಿಸಿದರೆ, ಈ ಜಿಲ್ಲೆಯ ಇನ್ನೊಂದು ಪ್ರಮುಖ ಬುಡಕಟ್ಟಾದ ಕಾಡುಗೊಲ್ಲರಂತೆಯೇ ಇವರಲ್ಲೂ 'ಶೈವ-ವೈಷ್ಣವ ಸಂಸ್ಕೃತಿ'ಗಳ ದಿವ್ಯಸಂಗಮವನ್ನು ಕಾಣಬಹುದು. ತೆಲುಗು ಮೂಲದ ಮ್ಯಾಸಬೇಡರು, ಕನ್ನಡ ಮೂಲದ ಕಾಡುಗೊಲ್ಲರು ಆಶ್ಚರ್ಯಕರವೆಂಬಂತೆ ಸಮಾನ ಸಂಸ್ಕೃತಿಯುಳ್ಳ ಬುಡಕಟ್ಟುಗಳಾಗಿದ್ದು, ಕುತೂಹಲಕರವಾದ 'ಮಾನವಶಾಸ್ತ್ರ' (Anthropology) ಅಧ್ಯಯನಕ್ಕೆ ವಿಫುಲ ಅವಕಾಶಗಳನ್ನು ಸೃಷ್ಟಿಸಿವೆ.

ಮ್ಯಾಸಬೇಡರದು ಮೂಲತಃ ಬೇಟೆ ಸಂಸ್ಕೃತಿಯಾಗಿದ್ದರೂ, ಕಂಪಳದೇವರ ಜಾತ್ರೆಯ ಸಂದರ್ಭದಲ್ಲಿ ನಡೆಸುವ ಆಚರಣೆಗಳನ್ನು ಗಮನಿಸಿದರೆ ಅವು ಇವರನ್ನು ಪಶುಪಾಲಕ ಸಂಸ್ಕೃತಿಯ ಮೂಲಗಳಿಗೆ ಕೊಂಡೊಯ್ಯುತ್ತವೆ. ಕಂಪಳದೇವರ ಗುಡಿಯ ಎಡ-ಬಲಕ್ಕೆ ಇರುವ ಜಗಲೂರು ಪಾಪನಾಯಕ-ಗಾದ್ರಿ ಪಾಪನಾಯಕರ ಗುಡಿಗಳು ಇವರ ಸಂಸ್ಕೃತಿಯ ಮೂಲವನ್ನು ಅರಹುವಂತಿವೆ. ಈ ಇಬ್ಬರ ಕತೆ ಕಾಡುಗೊಲ್ಲ ಜನಾಂಗದ ಎತ್ತಪ್ಪ-ಜುಂಜಪ್ಪನವರಂತೆ, ಒಂದು ಕಾಲಕ್ಕೆ ಮಾನವರಾಗಿ ಬದುಕಿದ್ದು ಪಶುಪಾಲನೆ ಮಾಡುತ್ತಾ, ಆ ಜನಾಂಗದ ಸಾಂಸ್ಕೃತಿಕ ವೀರರಾಗಿ, ಕೊನೆಗೆ ಮಾನವ ದೈವಗಳಾಗಿ ರೂಪುಗೊಂಡ ಕತೆಯನ್ನೇ ಹೋಲುತ್ತದೆ. ಆದರೆ ಇವರು ಬೇಟೆ ಸಂಸ್ಕೃತಿಯನ್ನು ಬಿಟ್ಟು, ಪಶುಪಾಲಕ ಸಂಸ್ಕೃತಿಗೆ ಯಾವಾಗ ಪರಿವರ್ತನೆಗೊಂಡರು ಎಂಬುದು ಕುತೂಹಲಕರ ಅಧ್ಯಯನಕ್ಕೆ ದಾರಿ ಮಾಡಿಕೊಡುವಂತಿದೆ. ಅಥವಾ ಪಶುಪಾಲನೆಯನ್ನು ಬಿಟ್ಟು ಯಾವಾಗ ಬೇಟೆಗೆ ಹೊರಳಿದರು? ಆದರೆ ಇವರ ಬದುಕಿನ ನಡಾವಳಿಗಳಲ್ಲಿ (ಯುಗಾದಿಯಲ್ಲಿ ಹಂದಿಬೇಟೆಗೆ ಹೋಗುವ ಸಂಪ್ರದಾಯ) ಬೇಟೆ ಸಂಸ್ಕೃತಿಯ ದೃಷ್ಟಾಂತಗಳೇ ದೊರೆಯುತ್ತಿದ್ದು, ಸಾಂಪ್ರದಾಯಿಕ ಆಚರಣೆಗಳಲ್ಲಿ ಮಾತ್ರ ಪಶುಪಾಲಕ ಸಂಸ್ಕೃತಿಯ ಆಚರಣೆಗಳೇ ದಟ್ಟವಾಗಿ ಉಳಿದುಕೊಂಡು ಬಂದಿರುವುದು ಆಶ್ಚರ್ಯ ಹುಟ್ಟಿಸುತ್ತದೆ. ನೂರಕ್ಕೆ ನೂರು ಪಾಲು ಪಶುಪಾಲಕ ಸಂಸ್ಕೃತಿಗೆ ಸೇರಿದ ಕಾಡುಗೊಲ್ಲರಲ್ಲಿ ದೇವರ ಎತ್ತುಗಳನ್ನು ಕಾಯುವ 'ಕಿಲಾರಿ' ಸಂಪ್ರದಾಯ ಈಗಾಗಲೇ ಮರೆಯಾಗಿ ಹೋಗಿದ್ದರೆ, ಮ್ಯಾಸಬೇಡರಲ್ಲಿ ಇನ್ನೂ ಉಳಿದುಕೊಂಡು ಬಂದಿರುವುದು ಮತ್ತೆ ಮೂಲವನ್ನು ಕೆದಕುವ ಕುತೂಹಲವನ್ನು ಹಾಗೆಯೇ ಉಳಿಸುತ್ತದೆ. ಒಂದೇ ಮೂಲಕ್ಕೆ ಸೇರಿದ ಕಾಡುಗೊಲ್ಲರು, ಸೋದರರಾದ ಮ್ಯಾಸಬೇಡರಿಗೆ 'ಕಿಲಾರಿ' ಸಂಪ್ರದಾಯವನ್ನು

ಹಂಚಿಕೊಟ್ಟಿರೇ? ಅಥವಾ ವಹಿಸಿಕೊಟ್ಟಿರೇ? ಅಥವಾ ಈ ಮೂಲಕ ಎರಡೂ ಸಂಸ್ಕೃತಿಗಳು ಅರ್ಥಪೂರ್ಣವಾಗಿ ಬೆಸೆದುಕೊಂಡವೇ? ಈ ಪ್ರಶ್ನೆಗಳು ಏಳುತ್ತವೆ. ಕಂಪಳದೇವರ ಹಟ್ಟಿಯಲ್ಲಿ ಈ ದೇವರಿಗೆ ಸೇರಿದ ನೂರಾರು ಪಶುಗಳು, ಅವುಗಳನ್ನು ಕಮರದ ಕಾವಲುಗಳಲ್ಲಿ ಕಾಯುತ್ತಿರುವ 'ಕಿಲಾರಿ'ಗಳು ಇಂದಿಗೂ ಇದ್ದಾರೆ. ಆದರೆ ಇಂದು ಇವರು ಪಶುಪಾಲಕ ಸಂಸ್ಕೃತಿಗೆ ಸಂಬಂಧವೇ ಇಲ್ಲದವರಂತೆ ಬದುಕುತ್ತಿರುವುದನ್ನು ಕಂಡರೆ ಬಹುಶಃ ಪಾಪನ ಎಯಕ- ಗ್ರಾದಿಪಾಲನಾಯಕರ ಕಾಲಕ್ಕೇ ಈ ಪಶುಪಾಲಕ ಸಂಸ್ಕೃತಿ ಕೊನೆಯಾಯಿತೇ? ಕಂಪಳರಂಗನ ಸಂಪ್ರದಾಯದಲ್ಲಿ ಅಪರೂಪಕ್ಕೆ ಬರ ಬಂದಾಗ ಮಾತ್ರ ಬಳಸುವ ಗಣೆಯೊಂದು. ಇದೆ. ಇದು ಕಳೆದು ಹೋದ ಪಶುಪಾಲಕ ಸಂಸ್ಕೃತಿಯ ಪಳೆಯುಳಿಕೆ ಎಂದು ಪರಿಗಣಿಸಬಹುದೇ? ಹಿಂದಿನ ಕಾಲದಲ್ಲಿದ್ದಂತಹ ಹುಲ್ಲುಗಾವಲುಗಳೂ, ಕಾಡೂ, ಇಲ್ಲವಾಗಿ ಇವರು ಬೇಟೆ, ಕುರಿಸಾಕಾಣಿಕೆಗೆ ಇಳಿದರೇ? ಕಂಪಳ ದೇವರ 'ನೆಲಗುಡ್ಲು' ಗುಡಿಗೆ ಕಂಬಳಿಯ ಹೊದಿಕೆ ಸುತ್ತಿರುವುದನ್ನು ಕಂಡರೆ, ಇದು ಪಶುಪಾಲಕ ಸಂಸ್ಕೃತಿಯೊಂದು 'ಉಣ್ಣೆಯ ಸಂಸ್ಕೃತಿ'ಯೊಂದಿಗೆ ಬೆರೆತಿರುವುದನ್ನು ಸಂಕೇತಿಸುವಂತಿದೆ ಅಥವಾ ಇದು ಪಶುಪಾಲಕ ಸಂಸ್ಕೃತಿಯಿಂದ ಕುರಿಸಾಕಾಣಿಕೆ ಸಂಸ್ಕೃತಿಗೆ ಹೊರಳಿರುವ ಸಾಂಸ್ಕೃತಿಕ ಸಂಗತಿಯನ್ನು ಗರ್ಭೀಕರಿಸಿಕೊಂಡಂತಿದೆಯೇ?

ತೆಲುಗು ಮನೆಮಾತಿನ ಬೇಡರ ಜನಪದ ಸಾಹಿತ್ಯವೆಲ್ಲಾ ಆಶ್ಚರ್ಯಕರವೆಂಬಂತೆ ಕನ್ನಡದಲ್ಲಿದೆ. ಆದರೆ ಕಾಡುಗೊಲ್ಲರಲ್ಲಿಯ ಸಮೃದ್ಧ ಜನಪದ ಸಾಹಿತ್ಯ ಪರಂಪರೆಗೆ ಹೋಲಿಸಿದರೆ ಇವರ ಜನಪದ ಸಾಹಿತ್ಯದ ಸುಗ್ಗಿ ಅತ್ಯಂತ ಕಡಿಮೆಯೆಂದೇ ಹೇಳಬೇಕು. ಕಾಡುಗೊಲ್ಲರು ತಮ್ಮ ಸಾಂಸ್ಕೃತಿಕ ವೀರರ ಬಗ್ಗೆ ಹೊಂದಿರುವ ಜನಪದ ಮಹಾಕಾವ್ಯ ಪರಂಪರೆಗೆ ಸಾಟಿಯಾಗುವ ಯಾವುದೇ ಜನಪದ ಕಾವ್ಯ ಇವರಲ್ಲಿ ಹುಟ್ಟದಿರುವ ಬಗ್ಗೆ ಸಾಂಸ್ಕೃತಿಕ ಶೋಧ ನಡೆಯಬೇಕಾಗಿದೆ. ಆದರೆ ಕಾಡುಗೊಲ್ಲರಲ್ಲಿರುವ ಗಣೆ-ಗಣೆಕಾವ್ಯ ಪರಂಪರೆಯೊಂದು; ಇವರಲ್ಲಿ ಕೇವಲ ಆಚರಣೆಯ ಹಂತದಲ್ಲಿ ಉಳಿದುಕೊಂಡು ಬಂದಿರುವುದು ವಿಸ್ಮಯವನ್ನು ಉಂಟು ಮಾಡುತ್ತದೆ. ಕಂಪಳರಂಗನ ಸಂಪ್ರದಾಯದಲ್ಲಿ ಗಣೆಯೊಂದನ್ನು ಬಳಸುತ್ತಿದ್ದು, ಇದನ್ನು ಮಳೆ ಬಾರದೆ ಬರಗಾಲ ಬಂದಾಗ ಮಾತ್ರ ಹೊರತೆಗೆದು ನುಡಿಸುತ್ತಾ ಹಾಡುವ ಸಂಪ್ರದಾಯವೊಂದಿದ್ದು- ಇದು ಮತ್ತೆ ಇವರನ್ನು ಪಶುಪಾಲಕ ಸಂಸ್ಕೃತಿಯ ಮೂಲಕ್ಕೇ ಕೊಂಡೊಯ್ಯುವಂತಿದ್ದು, ಕುತೂಹಲಕರ ಸಾಂಸ್ಕೃತಿಕ ಅಧ್ಯಯನಕ್ಕೆ ಗ್ರಾಸವೊದಗಿಸುವಂತಿದೆ. ಇದನ್ನು ಹೊರತು ಪಡಿಸಿದರೆ ಇವರಲ್ಲಿ ಕಾಡುಗೊಲ್ಲರಲ್ಲಿಯಂತೆ ಗಣೆಕಾವ್ಯ ಪರಂಪರೆ ಇಲ್ಲವೇ ಇಲ್ಲ. ಆದರೆ ಈ ಸಾಂಸ್ಕೃತಿಕ ಕೊರತೆಯನ್ನು ಕೋಲಾಟ, ಬಯಲಾಟಗಳಲ್ಲಿ ತುಂಬುವಷ್ಟು ಸಮೃದ್ಧಿ ಪಡೆದಿರುವುದು ಗಮನಾರ್ಹ. ಕೋನಸಾಗರದ ಪಾಪಣ್ಣ (ಪಾಪನ ಾಯಕ)ನನ್ನು ಕುರಿತ 'ಕೋಲುಪದ'ವೊಂದು ಈ ಸುತ್ತಿನಲ್ಲಿ ವ್ಯಾಪಕ ಪ್ರಚಾರದಲ್ಲಿರುವುದನ್ನು ನೆನೆಯಬಹುದು.

ನುಂಕೆಮಲೆ ಭೈರವನ ನೆಲೆ ಮ್ಯಾಸಬೇಡರ ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿ ಹೆಣೆದುಕೊಂಡಿರುವುದನ್ನು ಕಾಣಬಹುದು. ನುಂಕೆಮಲೆ (ಗೋರಕ್ಷ)ನಾಥ ಸಂಪ್ರದಾಯಕ್ಕೆ

ಸೇರಿದ ಕರ್ನಾಟಕದ ಅತ್ಯಂತ ಪ್ರಾಚೀನ ನೆಲೆಗಳಲ್ಲೊಂದು. ಈ ಮಠ ಉತ್ತರ ಭಾರತದ ಮೂಲಕ್ಕೆ ಸೇರಿದ ನಾಥ ಪಂಥದ ಬಾಲಬ್ರಹ್ಮಚಾರಿ ಸಂಪ್ರದಾಯಿಗಳ ಹಿಡಿತದಲ್ಲಿರುವುದು ಕುತೂಹಲಕರವಾಗಿದೆ. ಇಲ್ಲಿ ಗೋರಕ್ಷನಾಥನ ದೇವಾಲಯದೊಂದಿಗೆ 'ನುಂಕಪ್ಪ'ನೆಂದು ಹೆಸರಾಗಿರುವ ಭೈರವ, ತುಪ್ಪದಮ್ಮ, ಮಲ್ಲಿಕಾರ್ಜುನ, ಹರಳಯ್ಯರ ಗುಡಿಗಳಿವೆ. ಇಲ್ಲಿ ನಡೆಯುವ ಜಾತ್ರೆಯಲ್ಲಿ ಜಾತ್ಯಾತೀತವಾಗಿ ಎಲ್ಲಾ ಜನಾಂಗಗಳು ಭಾಗವಹಿಸಿದರೂ ಆಚರಣೆಗಳು ಮಾತ್ರ ಆದಿಕರ್ನಾಟಕ ಮತ್ತು ಮ್ಯಾಸಬೇಡ ಜನಾಂಗಗಳು ಪಾಲುಗೊಳ್ಳುವುದರೊಂದಿಗೆ ಪ್ರಾರಂಭವಾಗುತ್ತವೆ. ಇವರಿಲ್ಲದೆ ಯಾವ ಕಾರ್ಯಗಳೂ ನಡೆಯುವುದಿಲ್ಲ. ಹೀಗಾಗಿ ಇಲ್ಲಿಯ ಆಚರಣೆಗಳು ಮ್ಯಾಸಬೇಡರ ಸಂಸ್ಕೃತಿಯ ಕತೆಯನ್ನು ನಿರ್ವಚಿಸುವಂತಿದ್ದು, ಮ್ಯಾಸಬೇಡರೇ 'ಆಟ ಕಟ್ಟುವ'- 'ನುಂಕೆಮಲೆ ಸಿದ್ದೇಶ್ವರ ಮಹಾತ್ಮೆ' ಎಂಬ ನಾಟಕ ಕೂಡ ಇವರ ಸಾಂಸ್ಕೃತಿಕ ಬದುಕಿನ ಅವಿಭಾಜ್ಯ ಅಂಗವಾಗಿದೆ. ಇಲ್ಲಿ ನಡೆಯುವ 'ಸಿದ್ಧುಕ್ತಿ' ಎಂಬ ಭೈರವನನ್ನು ಕುರಿತ ಆಚರಣೆ ವಿಶಿಷ್ಟವಾದುದು. ಒಂದು ರೀತಿಯಲ್ಲಿ ಮ್ಯಾಸಬೇಡರ 'ವಾಸೆ' ಸಂಪ್ರದಾಯವನ್ನು ಹೋಲುವಂತೆ ತೋರುತ್ತದೆ. ಬಹುಶಃ ಭೈರವನ 'ಸಿದ್ಧುಕ್ತಿ' ಸಂಪ್ರದಾಯವೇ, ಬುಡಕಟ್ಟು ಜನಾಂಗವಾದ ಮ್ಯಾಸಬೇಡರಲ್ಲಿ 'ವಾಸೆ'ಯಾಗಿ ರೂಪಾಂತರಗೊಂಡಿರಬಹುದೇ?



ನುಂಕೆಮಲೆಯ ಭೈರವನ ಕೇಂದ್ರ ಕಿನ್ನರಿಜೋಗಿಗಳ ಒಂದು ಸಾಂಸ್ಕೃತಿಕ ಕೇಂದ್ರವೂ ಆಗಿದೆ. ಪ್ರತಿವರ್ಷ ನುಂಕಪ್ಪನ ಜಾತ್ರೆಯಲ್ಲಿ ಭಾರೀ ಪ್ರಮಾಣದ ಕಿನ್ನರಿಜೋಗಿಗಳು ಇಲ್ಲಿ ನೆರೆದು ಭೈರವನಿಗೆ ಕಾಣಿಕೆ ಅರ್ಪಿಸಿ, ತಮ್ಮ 'ಜೋಗಿ' ಬದುಕಿನ ಪರವಾನಗಿಯನ್ನು ನವೀಕರಿಸಿಕೊಳ್ಳುತ್ತಾರೆ. ಭೈರವನ ತಾಂತ್ರಿಕ ಪಂಥದ ನಾಥ ಸಂಪ್ರದಾಯವೇ, ಕಿನ್ನರಿ (ಅರ್ಜುನ) ಜೋಗಿ ಸಂಪ್ರದಾಯವಾಗಿ ಜಾನಪದದಲ್ಲಿ ರೂಪಗೊಂಡಿರಬಹುದೇ ? ನುಂಕೆಮಲೆಯ ಪರಮಾರ್ಥವನ್ನು ಆಧ್ಯಾತ್ಮಿಕ ನೆಲೆಯಲ್ಲಿ ಗುರುತಿಸುವ ಪ್ರಯತ್ನವೊಂದನ್ನು ಬಹಳ ಹಿಂದೆಯೇ (ಕ್ರಿ.ಶ. 1938ರಲ್ಲಿ, 'ನುಂಕೆಮಲೆ ಪರಮಾರ್ಥ' ಕೃತಿಯಲ್ಲಿ) ಮೊಳಕಾಲ್ಮೂರುವಿನ ದಿ. ಎಂ. ರಂಗಪ್ಪನವರು ಮಾಡಿದ್ದಾರೆ. ಆದರೆ ನುಂಕೆಮಲೆಯನ್ನು

ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸುವ ತುರ್ತು ಕೆಲಸ ಇಂದು ಆಗಬೇಕಿದ್ದು, ಈ ಬಗೆಯ ಅಧ್ಯಯನ ಅನೇಕ ಆಚರಣೆಗಳಿಗೆ ಇರುವ ಅಜ್ಞಾತ ಅರ್ಥಗಳನ್ನು ಒಡೆಯಬಲ್ಲದು ಎನಿಸುತ್ತದೆ.

ಈ ಭಾಗದ ಜನಗಳ ಬದುಕಿನೊಂದಿಗೆ, ವಿಶೇಷವಾಗಿ ಮ್ಯಾಸಬೇಡರೊಂದಿಗೆ ಶಕ್ತಿದೇವತೆಯಾದ ಮಾರಿ, ಗೌರಸಂದ್ರ ಮಾರಮ್ಮನಾಗಿ ಜನಪದರಲ್ಲಿ ವಿಶಿಷ್ಟರೂಪದಲ್ಲಿ ಕಾಣಿಸಿಕೊಂಡಿದ್ದಾಳೆ. ಈಕೆಯ ನೂರಾರು ನೆಲೆಗಳು ಈ ಭಾಗದಲ್ಲಿ ವ್ಯಾಪಕವಾಗಿ ಪ್ರಸರಿಸಿವೆ. ಹೀಗಾಗಿ ಮ್ಯಾಸಬೇಡರಲ್ಲಿ ಈಕೆಯನ್ನು ಆರಾಧಿಸಲೋಸುಗ 'ಪ್ರೋತನಾಯಕರು' ಎಂಬ ಗಾವು ಸಿಗಿಯುವ ಒಂದು ವಿಶಿಷ್ಟ ಸಂಪ್ರದಾಯವೇ ಹುಟ್ಟಿಕೊಂಡಿದ್ದರೆ, ಇದೇ ಜನಾಂಗದ ಇನ್ನೂ ಕೆಲವರು 'ಉರಿಮಾರಮ್ಮ'ನೆಂದು ಹೊತ್ತಾಡುವ ಮಾರಮ್ಮನನ್ನು ಮಾಡಿಕೊಂಡಿರುವುದು ಕೂಡ ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಬೇಕಿದೆ.

ರಾಯದುರ್ಗದ ಕಡೆಯಿಂದ ಬಂದ ಅವಧೂತ ತಿಪ್ಪೇರುದ್ರಸ್ವಾಮಿ, 'ತಿಪ್ಪೇಸ್ವಾಮಿ'ಯಾಗಿ ಈ ಭಾಗದ ಎಲ್ಲ ಜನ-ಮನಗಳಲ್ಲಿ ನೆಲಸಿದ್ದಾನೆ. ಕೋನಸಾಗರದಲ್ಲಿ ಈತನ ನೆಲೆಯೊಂದಿದ್ದು, ಇಲ್ಲಿ ದೊಡ್ಡ ಜಾತ್ರೆಯೊಂದು ನಡೆಯುತ್ತದೆ. ನಾಯಕನಹಟ್ಟಿಯ ಹೊರಮಠದಲ್ಲಿರುವ ಈತನ ಜೀವಸಮಾಧಿ ಮ್ಯಾಸಬೇಡರಿಂದಲೇ ಪೂಜಿಸಲ್ಪಡುತ್ತಿದ್ದು, ಮ್ಯಾಸಬೇಡರ ಬದುಕಿನಲ್ಲೊಂದು ಧಾರ್ಮಿಕ ಆವರಣವನ್ನು ಸೃಷ್ಟಿಸಿದೆ. ಮ್ಯಾಸಬೇಡರಿಗೆ ಒಲಿದ ಈತ ಮ್ಯಾಸ ಮೂಲದವನಿರಬಹುದೇ? ಎಂಬ ವಾದವೊಂದು ವಿದ್ವತ್‌ವಲಯದಲ್ಲಿ ನಡೆಯುತ್ತಿದ್ದು ಸಂಶೋಧನೆಯಿಂದ ಇತ್ಯರ್ಥಗೊಳ್ಳಬೇಕಿದೆ.

ಇದೇ ರಾಯದುರ್ಗದ ಕಡೆ 'ಭಂ ಭಂ ಸ್ವಾಮಿ' ಎಂಬ ಅವಧೂತರೊಬ್ಬರು ಖ್ಯಾತರಾಗಿದ್ದು, ಅವರ ಅನೇಕ ಶಿಷ್ಯರು ಕರ್ನಾಟಕದ ಭಾಗದಲ್ಲಿದ್ದು, ಜನಪದರಲ್ಲಿಯ ಅಧ್ಯಾತ್ಮಿಕ ಆಸಕ್ತಿಯ ಚಟುವಟಿಕೆಗೆ ಸಹಾಯಕವಾಗಿದೆ.

ಮೊಳಕಾಲ್ಮೂರು ರೇಷ್ಮೆ ಸೀರೆಯ ಖ್ಯಾತಿಯ ಕುಶಲಿಗಳಾದ ನೇಕಾರ ಜನಾಂಗ ದಲ್ಲಿ, ನಡೆಯುವ 'ಎಲುಕುಲ ಪಂಡುಗ' (ಇಲಿಗಳ ಹಬ್ಬ) ಅವರ ಕುಲಕಸುಬು ನಿರ್ವಿಘ್ನವಾಗಿ ಸಾಗಬೇಕೆಂಬ ಹಾರೈಕೆಯ ಹಿನ್ನೆಲೆಯಲ್ಲಿ ರೂಪುಗೊಂಡಿದೆ. ಈ ನೇಯ್ಗೆಯವರಲ್ಲಿ ಮೂರು ಉಪಜಾತಿಗಳಿದ್ದು, ಕನ್ನಡ ಮೂಲದ ದೇವಾಂಗ ಪಟ್ಟಸಾಲೆಯವರಲ್ಲಿ ಈ ಆಚರಣೆ ಇಲ್ಲ; ತೆಲುಗು ಮೂಲದ ಪದ್ಮಸಾಲೆಯವರಲ್ಲಿ ಮಾತ್ರ ಇರುವುದು ಅತ್ಯಂತ ವಿಚಿತ್ರವಾಗಿದೆ. ತಮ್ಮ ವೃತ್ತಿಯ ಕಚ್ಚಾಸಾಮಗ್ರಿಯಾದ ನೂಲನ್ನು ಇಲಿಗಳು ಕಡಿದು ಹಾಳು ಮಾಡದಿರಲಿ ಎಂಬುದೇ ಈ ಹಬ್ಬದ ಹಿಂದಿರುವ ಆಶಯವಾಗಿರುವಾಗ, ಅದೇ ವರ್ಗದ ಕೆಲವೊಂದು ಉಪಜಾತಿಗಳು ಆಚರಿಸದಿರುವುದೂ ಅಧ್ಯಯನಯೋಗ್ಯವೇ ಆಗಿದೆ.

ಈ ಭಾಗದ ಬಯಲಾಟ ಉತ್ತರ ಕರ್ನಾಟಕದ ದೊಡ್ಡಾಟವನ್ನು ಹೋಲುತ್ತದೆ. ಆದರೆ ಸಾಂಸ್ಕೃತಿಕವಾಗಿ ಯಾವ ಸಂಬಂಧವೂ ಇಲ್ಲದ ಉತ್ತರ ಕರ್ನಾಟಕದ 'ಕಡ್ಲಿಮಟ್ಟಿ ಕಾಶೀಬಾಯಿ ಅಥವಾ ಕಡ್ಲೀಮಟ್ಟಿ ಸ್ಟೇಷನ್ ಮಾಸ್ತರ್' ಎಂಬ ನಾಟಕ, ಉತ್ತರ

ಕರ್ನಾಟಕದಿಂದ ಇಲ್ಲಿಯ ಜನ ಹೈಜಾಕ್ ಮಾಡಿಕೊಂಡು ಬಂದಂತೆ ತಾಲ್ಲೂಕಿನ ನಾಗಸಮುದ್ರ ಭಾಗದಲ್ಲಿ ತಮ್ಮದೇ ಆದ ಬಳ್ಳಾರಿ-ಆಂಧ್ರದ ಭಾಷಿನೊಂದಿಗೆ ಅಭಿನಯಿಸುತ್ತಿರುವ ವಾಡಿಕೆ ಸಾಂಸ್ಕೃತಿಕ ಆಶ್ಚರ್ಯಗಳಲ್ಲೊಂದಾಗಿದೆ.

ವ್ಯವಸಾಯದ ಮೂಲ ಆಗತ್ಯಗಳಲ್ಲೊಂದಾದ ಗಾಡಿ ತಯಾರಿಕೆಗೆ ತಾಲ್ಲೂಕಿನ ಬೊಮ್ಮಗೊಂಡನ ಕೆರೆ (ಬಿ.ಜಿ.ಕೆರೆ) ಹೆಸರಾಗಿದ್ದು, ವಿನ್ಯಾಸ ಗುಣಮಟ್ಟಗಳಿಂದ ಬೇರೆ ಭಾಗದ ಗಾಡಿಗಳಿಗೆ ಮಾದರಿಯಂತಿರುವ ಈ ಜನಪದ ಕಲೆಯ ಶ್ರೇಯಸ್ಸು ಈ ಭಾಗದ ಗ್ರಾಮೀಣ ಜನಪದ ಶಿಲ್ಪಿಗಳಿಗೆ ಸೇರಿದ್ದು.

ಮೊಳಕಾಲ್ಮೂರು ಚಿತ್ರದುರ್ಗದ ಜಿಲ್ಲೆಯಲ್ಲೇ ಅತ್ಯಂತ ಬಡ, ಹಿಂದುಳಿದ ತಾಲ್ಲೂಕು ಎನಿಸಿಕೊಂಡರೂ, ತನ್ನ ಜಾನಪದ ಶ್ರೀಮಂತಿಕೆಯಿಂದ ತನ್ನದೇ ಆದ ರೀತಿಯಲ್ಲಿ ಅನನ್ಯವಾಗಿದೆ.

* ಮೊಳಕಾಲ್ಮೂರಿನಲ್ಲಿ ನಡೆದ 7ನೇ ಚಿತ್ರದುರ್ಗ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ, 1998.

* ಕಾಯಕ, 97-98.



# ಪಶುಪಾಲಕ ಮ್ಯಾಸಬೇಡರು

ಮ್ಯಾಸಬೇಡರು - ಕರ್ನಾಟಕದ ಬಹು ಮುಖ್ಯವಾದ ಪಶುಪಾಲಕ ಬುಡಕಟ್ಟು ಗಳಲ್ಲೊಂದು. ಪಶುಪಾಲಕ ಸಂಸ್ಕೃತಿಯ ದಟ್ಟ ಆಚರಣೆಗಳಿಂದ ಕೂಡಿದ ಇಂತಹ ಬುಡಕಟ್ಟು ಬೇರೊಂದಿರಲಾರದು. ಇದೇ ಪಶುಪಾಲಕ ಸಂಸ್ಕೃತಿಗೆ ಸೇರಿದ, ಮೂಲದಲ್ಲಿ ಮ್ಯಾಸಬೇಡರ ಸಹೋದರರೇ ಆಗಿದ್ದ ಕಾಡುಗೊಲ್ಲರಲ್ಲಿ ಇರುವಂತಹ ಸಾಹಿತ್ಯ ಸಮೃದ್ಧಿ ಬೆರಗುಗೊಳಿಸುವಂಥದು.

ಕರ್ನಾಟಕದ ಬೇಡರಲ್ಲಿ ಪ್ರಧಾನವಾಗಿ ಮೂರು ಬಗೆಗಳು. 1.ಊರು ಬೇಡರು, 2. ಪಾಳೆಯಗಾರರು ಮತ್ತು 3. ಮ್ಯಾಸಬೇಡರು. ಇವರೆಲ್ಲ ಆಂಧ್ರ ಮೂಲದ ವಲಸೆಗಾರರೇ ಆಗಿರುವುದರಿಂದ ಸಹಜವಾಗಿ ಇವರ ಮಾತೃ ಭಾಷೆ ತೆಲುಗು. ಹೀಗಾಗಿ ಇವರನ್ನು ತೆಲುಗಿನಲ್ಲಿ 'ಬೋಯ' ಎನ್ನುತ್ತಾರೆ. ಈ ಮೂರೂ ಪಂಗಡಗಳು ಮೂಲತಃ ಒಂದೇ ಮೂಲಕ್ಕೆ ಸೇರಿದ್ದರೂ ಇವರ ಮಧ್ಯೆ ವೈವಾಹಿಕ ಸಂಬಂಧಗಳಿಲ್ಲ!

1. **ಊರು ಬೇಡರು** : ಹೆಸರೇ ಹೇಳುವಂತೆ ಬುಡಕಟ್ಟಿನ ಶಿಷ್ಟಾಚಾರಗಳನ್ನು ಉಲ್ಲಂಘಿಸಿ ಊರು ಸೇರಿ ಅನ್ಯ ಜಾತಿಯ ಜನಗಳೊಂದಿಗೆ ಬೆರೆತವರು. ಬುಡಕಟ್ಟಿನ ಸಂವಿಧಾನದ ಪಾವಿತ್ರ್ಯಕ್ಕೆ ಧಕ್ಕೆ ತಂದ ಇವರು ಒಂದು ರೀತಿಯಲ್ಲಿ ಬಹಿಷ್ಕಾರಕ್ಕೆ ಒಳಗಾದವರು. ಪಶುಪಾಲನೆಯ ಪವಿತ್ರ ಕಾಯಕ ಮಾಡುವ ವೃತ್ತಿಗೆ ನಿಷಿದ್ಧವಾದ ಕೋಳಿ, ಹೆಂಡವನ್ನು ಸೇವನೆ ಮಾಡಿದ್ದರಿಂದ, ಅನೈತಿಕ ಸಂಪರ್ಕ ಮಾಡಿದ್ದರಿಂದ, 'ಜಾತಿ' (Caste) ಜನಗಳೊಂದಿಗೆ ಬೆರೆತು - ಗೋವು ಕಾಯುವವನಿಗೆ ಇರಬೇಕಾದ ಪರಿಶುದ್ಧತೆಯನ್ನು ಹಾಳು ಮಾಡಿಕೊಂಡಿದ್ದರಿಂದ ಹೊರಗೆ ಹಾಕಲ್ಪಟ್ಟರು ಎಂದು ಐತಿಹ್ಯಗಳು ಹೇಳುತ್ತವೆ.

2. ಪಾಳೆಯಗಾರರು : ಪಾಳೆಯ (ಗುಂಪು)ಗಳನ್ನು ಕಟ್ಟಿಕೊಂಡು ದರ್ಪ, ದೌರ್ಜನ್ಯಗಳಿಂದ ಮೆರೆಯುತ್ತಿದ್ದ ಕೆಲವರಿಗೆ ಇದ್ದಕ್ಕಿದ್ದಂತೆ ವಿಜಯನಗರದ ಅರಸರ ಕಾಲದಲ್ಲಿ ಆಯಾ ಭಾಗಗಳ ಆಡಳಿತ ಸೂತ್ರ ದೊರೆತದ್ದರಿಂದ ಸಾಮಂತರೆನಿಸಿಕೊಂಡರು. ವಿಜಯನಗರ ಪತನಾನಂತರ ತಮ್ಮನ್ನು ತಾವೇ ಸ್ವತಂತ್ರರೆಂದು ಘೋಷಿಸಿಕೊಂಡರು. ಹೀಗೆ ಧಿಡೀರನೇ ದೊರೆತ ಸಾಮಾಜಿಕ ಸ್ಥಾನಮಾನದಿಂದ 'ಪಾಳೆಯಗಾರ' ರೆಂದೂ, 'ಪಾಳೆಯಗಾರ ಅರಸ'ರೆಂದೂ ಕರೆದುಕೊಳ್ಳತೊಡಗಿದರು. ಕ್ರಮೇಣ ಬುಡಕಟ್ಟಿನಿಂದ 'ಜಾತಿ'ಯತ್ತ ಹೊರಳಿದ ಇವರು ತಮ್ಮ ಶ್ರೇಷ್ಠತೆಯನ್ನು ಮೆರೆಯಲು ಬ್ರಾಹ್ಮಣರನ್ನು ಅನುಕರಿಸತೊಡಗಿದರು. ಮದುವೆ,

ಶವ ಸಂಸ್ಕಾರ ಮುಂತಾಗಿ ತಮ್ಮ ಆಚಾರ-ವಿಚಾರಗಳನ್ನು ಬ್ರಾಹ್ಮಣೀಕರಿಸಿಕೊಂಡ ಇವರು ಬ್ರಾಹ್ಮಣರಂತೆ ಜನಿವಾರ ಧಾರಣೆಯನ್ನೂ ಮಾಡಿದರು! ಆದಾಗ್ಯೂ ಮಾಂಸಾಹಾರಿಗಳಾಗೇ ಉಳಿದದ್ದು ಒಂದು ಆಶ್ಚರ್ಯ.

ಚಿತ್ರದುರ್ಗ, ತರೀಕೆರೆ, ಗುಡೇಕೋಟೆ, ಜರಿಮಲೆ ಹಾಗೂ ಮಧ್ಯ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಸುತ್ತಿನ ಬಹುಪಾಲು ಪಾಳೆಯಪಟ್ಟುಗಳು ಬೇಡ ಮೂಲದವುಗಳೇ ಆಗಿವೆ. ಉತ್ತರ ಕರ್ನಾಟಕದ ಕಮ್ಮಟದುರ್ಗ, ಸುರಪುರಗಳೂ ಬೇಡ ಪಾಳೆಯಪಟ್ಟುಗಳೇ. ಕೆಳದಿ, ಹರಪನಹಳ್ಳಿ, ಹೊಸದುರ್ಗದವರು ಮೂಲದಲ್ಲಿ ಬೇಡರೇ ಆಗಿದ್ದು ವೀರಶೈವರಾಗಿ ಮತಾಂತರಗೊಂಡವರು.

3. **ಮ್ಯಾಸಬೇಡರು :** ಇವರು 'ಜಾತಿ ಜನ'ಗಳು ವಾಸಿಸುವ, ನಾಗರೀಕವಾದ ಹಳ್ಳಿ-ಪಟ್ಟಣಗಳಿಂದ ದೂರವಾಗಿ, ಹೊರವಲಯದಲ್ಲಿ ತಮ್ಮದೇ ಜನಗಳಿಂದ ಕೂಡಿದ ಗುಂಪುಗಳಲ್ಲಿ, ಸಾಮಾನ್ಯವಾಗಿ ಹುಲ್ಲಿನ ಗುಡಿಸಲಲ್ಲಿ ವಾಸ ಮಾಡುತ್ತಿದ್ದ ನೆಲೆಗಳನ್ನೇ 'ಹಟ್ಟಿ' ಎಂದು ಕರೆಯುತ್ತಾರೆ.

ದನಗಳನ್ನು ಕಟ್ಟುವ ಜಾಗವನ್ನು 'ಹಟ್ಟಿ' ಎಂದೇ ಕರೆಯುತ್ತಾರೆ. ಪಶುಪಾಲಕ ತನ್ನ ದನಗಳೊಟ್ಟಿಗೇ ಇರುತ್ತಿದ್ದುದರಿಂದ ಆವನಿಗೆ ಮನೆ ಬೇರೆಯಲ್ಲ, ಹಟ್ಟಿ ಬೇರೆಯಲ್ಲ. ಹಟ್ಟಿ ಎಂದರೆ ಮನೆ ಎಂಬ ಅರ್ಥವೂ ಇದೆ.

'ಗೋಸಂಸ್ಕೃತಿ'ಗೆ ಸೇರಿದ ಇವರು ತಮ್ಮ ಪಾವಿತ್ರ್ಯವನ್ನು ಕಾಪಾಡಿಕೊಳ್ಳಲು ಬೇರೆ ಜನಗಳಿಂದ ದೂರವಾಗಿ ಹೀಗೆ ವಾಸ ಮಾಡುತ್ತಿದ್ದರು. ಕಾಡುಗೊಲ್ಲರಂತೆ ಹಟ್ಟಿಯ ಸುತ್ತ ಕಳ್ಳಿ ಬೇಲಿಯಿಂದ 'ಪಾರಿ ಬೇಲಿ' (ಪಹರೆ ಬೇಲಿ)ಯನ್ನು ನಿರ್ಮಿಸಿಕೊಂಡಿರುತ್ತಾರೆ. ಈಗೀಗ ಈ ಸಂಪ್ರದಾಯವೂ ಮರೆಯಾಗುತ್ತಿದ್ದು ಕಾಟಾಚಾರಕ್ಕೆಂಬಂತೆ ಬೇಲಿಯನ್ನು ಹಾಕುತ್ತಾರೆ.

ಪಶುಪಾಲಕ ಸಂಸ್ಕೃತಿ : ಇಲ್ಲಿಯವರೆಗೂ ಮ್ಯಾಸಬೇಡರನ್ನು ಬೇಟೆ ಸಂಸ್ಕೃತಿಗೆ ಸೇರಿದವರೆಂದು ನಂಬಲಾಗಿತ್ತು, ಹಾಗೆಂದೇ ವ್ಯಾಖ್ಯಾನಿಸಲಾಗುತ್ತಿತ್ತು. ಆದರೆ ಇತ್ತೀಚಿನ ಸೂಕ್ಷ್ಮಶೋಧಗಳ ನಂತರ ಈ ಅನಿಸಿಕೆ ಹುಸಿಯಾಗಿದೆ. ಬೇರೆ ಬೇರೆ ಪ್ರಾಂತಗಳಲ್ಲಿರುವ ಬೇಡರು ಬಹುಮುಖಿಯಾದ ಭಿನ್ನ ಭಿನ್ನ ಸಂಸ್ಕೃತಿಗೆ ಸೇರಿರಬಹುದಾದರೂ, ಚಿತ್ರದುರ್ಗ ಪ್ರಾಂತ್ಯದ ಆಸುಪಾಸಿನಲ್ಲಿ ಬದುಕುತ್ತಿರುವ 'ಮ್ಯಾಸ'ರೆಂದು ಕರೆಸಿಕೊಳ್ಳುತ್ತಿರುವ ಬೇಡರಂತೂ ಬೇಟೆ ಸಂಸ್ಕೃತಿಗೆ ಸೇರಿದವರಲ್ಲ.

'ಬೇಡ' ಶಬ್ದದ ಮುಂದೆ ಸೇರಿರುವ 'ಮ್ಯಾಸ' ಎಂಬ ವಿಶೇಷಣ ಪಶುಗಳನ್ನು 'ಮೇಯಿಸುವ' ವೃತ್ತಿಯಿಂದಲೇ ಬಂದಿರಬೇಕೆಂಬದುದನ್ನು ಸೂಚಿಸುತ್ತದೆ. ಪಶುಗಳನ್ನು 'ಮೇಯ್ಸು'ವ ಈ ಶಬ್ದವೇ ಕ್ರಮೇಣ-ಮೇಸು>ಮ್ಯೇಸು>ಮ್ಯಾಸು>ಮ್ಯಾಸ ಎಂದು ರೂಪಾಂತರಗೊಂಡಂತೆ ಕಾಣುತ್ತದೆ. (ಮೈಸೂರು ಸೀಮೆಯಲ್ಲಿ ಇವರನ್ನು 'ನಾಸು ಬೇಡರು' ಎಂದು ಕರೆಯುತ್ತಾರೆ.) ಇದನ್ನು ಸಮರ್ಥಿಸುವಂತೆ ಅವರಲ್ಲಿ ಪಳೆಯುಳಿಕೆಯಂತೆ ಉಳಿದಿರುವ

ಪಶುಪಾಲಕ ಆಚರಣೆಗಳು, ಹಬ್ಬಗಳು ಮತ್ತೆ ಅವರನ್ನು ಪಶುಪಾಲಕ ಸಂಸ್ಕೃತಿಯುವರು ಎಂದೇ ಹೇಳುತ್ತವೆ.

ಇವರು ತಮ್ಮ ತಮ್ಮ ದೇವರುಗಳ ಹೆಸರಿನಲ್ಲಿ ದನಗಳನ್ನು ಬಿಡುತ್ತಾರೆ. ಏಕೆಂದರೆ ತಮ್ಮ ಪೂರ್ವಿಕರು ಸತ್ತ ನಂತರ 'ಎತ್ತು'ಗಳ ರೂಪದಲ್ಲಿ ಬದುಕಿರುತ್ತಾರೆ ಎಂದು ನಂಬುತ್ತಾರೆ. ಹೀಗಾಗಿ ದೇವರ ಹೆಸರಿನಲ್ಲಿ ಬಿಟ್ಟ ಎತ್ತುಗಳನ್ನು 'ಮುತ್ತಯ್ಯಗಳು' ಎಂದೇ ಕರೆಯುತ್ತಾರೆ. ಈ ಮುತ್ತಯ್ಯಗಳ ಆಗಮನವಾಗದೆ ಇವರ ಹಬ್ಬಗಳು ನಡೆಯುವುದೇ ಇಲ್ಲ ! ಈ ದೇವರ ಎತ್ತುಗಳನ್ನು ಕಾಯುವ ಪವಿತ್ರಕಾಯಕ ಮಾಡುವವರನ್ನು 'ಕಿಲಾರಿ'ಗಳೆಂದು ಕರೆಯುತ್ತಾರೆ. ಇವರನ್ನು ಸಾಕ್ಷಾತ್ ದೇವರ ಪ್ರತಿನಿಧಿಯಂತೆ ಕಾಣುತ್ತಾರೆ.



ಈ ಎತ್ತುಗಳನ್ನು ರಾತ್ರಿ ಹೊತ್ತು ಮಲಗಿಸಲು ಮಾಡಿಕೊಂಡಿರುವ ಹಟ್ಟಿಗಳನ್ನು 'ಮುತ್ತಯ್ಯಗಳ ನಿಧಿ' ಎನ್ನುವುದಲ್ಲದೆ - ದನಗಳು ಮಲಗಿ ಏಳುವ ಈ ಹಟ್ಟಿಯನ್ನು ಸಾಕ್ಷಾತ್ ದೇವಸ್ಥಾನವೆಂದೇ ಭಾವಿಸಲಾಗುತ್ತದೆ. ಮೆಟ್ಟುಗಾಲಲ್ಲಿ (ಚಪ್ಪಲಿ ಹಾಕಿ) ಹಟ್ಟಿ ಹೊಗುವಂತಿಲ್ಲ!

ಕಷ್ಟ-ಕಾರ್ಪಣ್ಯ ಇರುವ ಜನ ಬಂದು 'ದೇವ ಗಂಪಳ' (ದೇವರಿಗೆ ಬಿಟ್ಟದನಗಳ ಗುಂಪು) ಎಂದು ಭಾವಿಸುವ ಈ ಮುತ್ತಯ್ಯಗಳ ನಿಧಿಯಲ್ಲಿ, ರಾತ್ರಿ ದೇವರ ಎತ್ತುಗಳೊಂದಿಗೆ ಮಲಗುತ್ತಾರೆ! ಮಲಗಿದಾಗ ದನ-ಕರುಗಳು ತುಳಿದರೆ ಅದೃಷ್ಟ ಎಂದು ಭಾವಿಸುತ್ತಾರೆ. ಗೋವಿನ ಗಂಜನ್ನು ತೀರ್ಥದಂತೆ ಮೈಗೆಲ್ಲಾ ಪ್ರೋಕ್ಷಿಸಿಕೊಳ್ಳುತ್ತಾರೆ. ವಿವಾಹ ಮುಂತಾದ ಶುಭ ಕಾರ್ಯಗಳಲ್ಲಿ ಬಂದು ದೇವರ ಎತ್ತು ಮತ್ತು ಕಿಲಾರಿಗಳಿಂದ ಆಶೀರ್ವಾದ ಪಡೆದು ಹೋಗುತ್ತಾರೆ. ಪ್ರತಿಯೊಂದು ದೇವಸ್ಥಾನದಲ್ಲೂ ಪಶುಪಾಲನೆಯಲ್ಲಿ ಬಳಸುತ್ತಿದ್ದ ಬಿದಿರು ಗಣೆಗಳನ್ನು ಇಟ್ಟು ಪೂಜಿಸುತ್ತಿದ್ದಾರೆ. ಹೀಗಾಗಿ ಮ್ಯಾಸ ಬೇಡರು ನಿರ್ವಿವಾದವಾಗಿ ಪಶುಪಾಲಕ ಸಂಸ್ಕೃತಿಗೆ ಸೇರಿದವರೆಂದು - ಈ ಎಲ್ಲ ಆಚರಣೆಗಳು ಸೂಚಿಸುತ್ತವೆ.

ಮ್ಯಾಸ ಮಂಡಲ : ಮ್ಯಾಸ ಬೇಡರು ವಾಸಿಸುವ ಪ್ರದೇಶವನ್ನು 'ಮ್ಯಾಸ ಮಂಡಲಮು' ಎಂದು ತೆಲುಗಿನಲ್ಲಿ ಕರೆಯುವುದು ವಾಡಿಕೆ. ಪರಿಶಿಷ್ಟರ ಬಳಕೆಯೊಳಕ್ಕೆ 'ಮಂಡಲ' ಎಂಬ ಶಿಷ್ಟಪದ ಬಂದು ಸೇರಿಕೊಂಡಿರುವುದೇ ಒಂದು ಆಶ್ಚರ್ಯ.

ಮ್ಯಾಸಮಂಡಲ - ಚಿತ್ರದುರ್ಗ ಜಿಲ್ಲೆಯೂ ಸೇರಿದಂತೆ ದಾವಣಗೆರೆ ಜಿಲ್ಲೆಯ ಜಗಲೂರು, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ; ಆಂಧ್ರಪ್ರದೇಶದ ರಾಯದುರ್ಗ ತಾಲ್ಲೂಕುಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಆದರೆ ಇದರ ಕೇಂದ್ರಬಿಂದು ಮಾತ್ರ ಚಳ್ಳಕೆರೆಯ ತಾಲ್ಲೂಕಿನಲ್ಲಿ ಇದ್ದಂತೆ ಕಂಡು ಬರುತ್ತದೆ. ಬಹು ಮುಖ್ಯವಾದ ದೈವಸ್ಥಾನದ ಮೂಲ ನೆಲೆಗಳು ಹಾಗೂ ಮೂರರಲ್ಲಿ ಎರಡು ಕಟ್ಟೆ ಮನೆಗಳು- ನಾಯಕನಹಟ್ಟಿ, ನನ್ನಿವಾಳಗಳು ಚಳ್ಳಕೆರೆ ತಾಲ್ಲೂಕಿನಲ್ಲಿವೆ; ಉಳಿದ ಇನ್ನೊಂದು ಕಟ್ಟೆ ಗೋನೂರು- ಚಿತ್ರದುರ್ಗ ತಾಲ್ಲೂಕಿನಲ್ಲಿದೆ. ಆದರೆ ಈ ಬುಡಕಟ್ಟಿನ ಅತಿದಟ್ಟ ಜನಸಾಂದ್ರತೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. 'ಮ್ಯಾಸ ಮಂಡಲ' ವನ್ನು ಆಡಳಿತಾತ್ಮಕವಾದ ಭೌತಿಕ ಗಡಿಗಳನ್ನು ಮೀರಿದ ಒಂದು 'ಸಾಂಸ್ಕೃತಿಕ ಗಡಿ' ಎಂದು ಪರಿಭಾವಿಸಬೇಕಾಗುತ್ತದೆ.

'ಮ್ಯಾಸ ಮಂಡಲ' ಶಬ್ದವನ್ನು ಕೆಲವೊಮ್ಮೆ ಮ್ಯಾಸ ಬೇಡರಲ್ಲಿರುವ ಒಳಪಂಗಡಗಳಿಗೆ (ಇದನ್ನು ಬೆಡಗು, ಕುಲ, ಗೋತ್ರ, ಬಳಿ ಎಂಬ ಪರ್ಯಾಯ ಶಬ್ದಗಳಿಂದಲೂ ಗುರುತಿಸುತ್ತಾರೆ) ಮಾತ್ರ ಅನ್ವಯಿಸಿಯೂ ಬಳಸುತ್ತಾರೆ.

ಮ್ಯಾಸ ಮಂಡಲವೆಂದು ಗುರುತಿಸುವ ಈ ಪ್ರದೇಶ ಭೌಗೋಳಿಕವಾಗಿ ಕುರುಚಲು ಕಾಡು, ಸಣ್ಣ-ಪುಟ್ಟ ಬೆಟ್ಟ-ಗುಡ್ಡ, ಮೊರಡಿಗಳಿಂದ ಕೂಡಿದ್ದು, ಇಲ್ಲಿಯ ಸಮಶೀತೋಷ್ಣ ವಾತಾವರಣ ಪಶುಪಾಲನೆಗೆ ಹೇಳಿ ಮಾಡಿಸಿದ ಜಾಗವಾಗಿದ್ದುದರಿಂದಲೇ ಇಲ್ಲಿ ಮ್ಯಾಸ ಬೇಡ, ಕಾಡುಗೊಲ್ಲರಂತಹ ಪಶುಪಾಲಕ ಬುಡಕಟ್ಟಿನ ಸಂಸ್ಕೃತಿಗಳು ನೆಲೆಯೂರಲು, ಅರಳಲು ಕಾರಣವಾದುದು. ಇದನ್ನು ಮತ್ತಷ್ಟು ಸಮರ್ಥಿಸುವಂತೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕೊಂದರಲ್ಲೇ 21 ಕಾವಲುಗಳಿವೆ. ಹೊಸದುರ್ಗ ಮತ್ತು ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಕ್ರಮವಾಗಿ 6 ಮತ್ತು 13 ಕಾವಲುಗಳಿವೆ. ಈ ಭಾಗದ ಅನೇಕ ಹಳ್ಳಿಯ ಹೆಸರುಗಳೂ ಪಶುಪಾಲನೆಯ ಮೂಲದಿಂದಲೇ ಹುಟ್ಟಿದವುಗಳಾಗಿವೆ. ಚಳ್ಳಕೆರೆ ತಾಲ್ಲೂಕಿನಲ್ಲೇ ಅನೇಕ 'ಎತ್ತಿನ ಹಟ್ಟಿ' ಹೆಸರಿನ ಹಳ್ಳಿಗಳಿವೆ. 'ಪೇಲೂರ ಹಟ್ಟಿ' ಎಂಬುದು ಹಸುವಿನ ಮಂದೆಯಲ್ಲಿರುವ ಕರುಗಳನ್ನು ಸಾಕುವವರನ್ನು (ಇವರನ್ನು ತೆಲುಗಿನಲ್ಲಿ 'ಪೇಲೋಳ್ಳು' ಎನ್ನುತ್ತಾರೆ) ನಿರ್ದೇಶಿಸುತ್ತದೆ.

ಪಶುಪಾಲಕ ಪಾಳೆಯಪಟ್ಟು : ಆಂಧ್ರಪ್ರದೇಶ ಸೇರಿದಂತೆ ತುಂಗಭದ್ರಾ ನದಿಯ ಆಚೆಗಿನ ಶ್ರೀಶೈಲದ ಬಳಿಯ ಕರೇಮಲೆ, ಬಿಳಿಮಲೆ, ಜಡೆಮಲೆ ಮುಂತಾದ ಭಾಗಗಳಿಂದ ಹುಲ್ಲು-ನೀರು ಹುಡುಕುತ್ತಾ ಈ ಪ್ರದೇಶದತ್ತ ವಲಸೆ ಬಂದ ಅಲೆಮಾರಿ ಪಶುಪಾಲಕ ಬುಡಕಟ್ಟುಗಳು ಶಾಶ್ವತವಾಗಿ ನೆಲೆ ನಿಲ್ಲಲು ಹಾಗೂ ಪಾಳೆಯ ಪಟ್ಟುಗಳನ್ನು ಸ್ಥಾಪಿಸಲು ಕಾರಣವಾದ ಈ ಪ್ರದೇಶವನ್ನು ಪಶುಪಾಲಕ ಸಂಸ್ಕೃತಿಗಳ ತೂಗುತೊಟ್ಟಿಲು ಎನ್ನಬಹುದು.

ಮೂಲತಃ ಪಶುಪಾಲಕರಾಗೇ ಈ ಪ್ರದೇಶಕ್ಕೆ ಬಂದವರು, ನಂತರ ನಾಯಕನಹಟ್ಟಿ ಪಾಳೆಯಪಟ್ಟನ್ನು ಸ್ಥಾಪಿಸಿದ್ದು ಈಗ ಇತಿಹಾಸ. ಈ ಪಾಳೆಯ ಪಟ್ಟಿನ ಇತಿಹಾಸವನ್ನು ತಿಳಿಸುವ ವಂಶಾವಳಿಯಲ್ಲಿ ಇವರು ದನ-ಕರುಗಳನ್ನು ಕಾಯುವ, ಮೇಯಿಸುವ 500 ಜನ

'ಮೇಸರ್ರು' ಜೊತೆಗೆ ಬಂದುದನ್ನೂ ತಿಳಿಸುತ್ತದೆ; ಇವರೇ ಆ 'ಮ್ಯಾಸ ಬೇಡರು', ಇವರ ನಾಯಕನಾದ ಶುಕ್ಲಮಲ್ಲನಾಯಕನ (ಅಂದರೆ ಶುಕ್ಲಗಿರಿ ಇಂದಿನ ನನ್ನಿವಾಳದ ಬೆಟ್ಟ ಪ್ರಾಂತ್ಯವನ್ನೇ ಸೂಚಿಸುತ್ತಿದ್ದು, ಇದೇ ಪರಿಸರದಲ್ಲಿ ಅವರು ಪಶುಪಾಲನೆ ಮಾಡುತ್ತಿದ್ದರು) ಸಂತತಿಯಲ್ಲಿ ಬಂದ ಕಾಕಳುನಾಯಕ (ಕುಮಾರ) ತಾನು ಪಶುಪಾಲನೆ ಮಾಡುತ್ತಿದ್ದ ಜಾಗದಲ್ಲೇ ಕಟ್ಟಿದ ಪಾಳೆಯಪಟ್ಟು 'ನಾಯಕನ ಹಟ್ಟಿ'ಯಾಯಿತು. ಇವನ ವಂಶದ ಹಿರಿಯನಾದ ಮಲ್ಲನ ನಾಯಕನ ಹೆಸರಿನಲ್ಲಿ 'ಮಲ್ಲನಾಯಕನೋರು' ಎಂಬ ಪ್ರಧಾನವಾದ ಮ್ಯಾಸಬೇಡ ಶಾಖೆಯೇ ಹುಟ್ಟಿಕೊಂಡಿತು. ಇದನ್ನು 'ಮಲ್ಲನಾಯಕನ ಸೂತ್ರ' ಎಂದೂ ಕರೆಯುತ್ತಾರೆ. ಏಕೆಂದರೆ ಇದರೊಳಗೆ ಅನೇಕ ಒಳಬೆಡಗುಗಳು ಇವೆ. ಈ ಗುಂಪು ಮೂಲತಃ ಶೈವ ಪರಂಪರೆಗೆ ಸೇರಿದ್ದರೂ ಕ್ವಚಿತ್ತಾಗಿ ವಿಷ್ಣುವನ್ನೂ ಪೂಜಿಸುತ್ತದೆ. ಹೀಗಾಗಿ ಇವರು ಪಾಲಿಸುವ ದನಗಳನ್ನು 'ಶಿವಕಂಪಳ' ಎನ್ನುತ್ತಾರೆ.

ಚಿತ್ರದುರ್ಗದ ಪಾಳೆಯಗಾರರು ಮ್ಯಾಸಬೇಡ ಮೂಲಕ್ಕೆ ಸೇರಿದವರಾದರೂ ಅವರ ಮೂಲ ಪುರುಷರು ಪಶುಪಾಲಕರಾಗಿ ಬಂದು ನೆಲಸಿ ರಾಜ್ಯ ಕಟ್ಟಿದ ಬಗ್ಗೆ ಹೆಚ್ಚಿನ ಮಾಹಿತಿಗಳು ದೊರೆಯುವುದಿಲ್ಲ. ಆದರೆ ರಾಜಕೀಯವಾಗಿ ನಾಯಕನಹಟ್ಟಿ ಪಾಳೆಯಗಾರರಿಗಿಂತ ದೊಡ್ಡ ರಾಜಕೀಯ ಶಕ್ತಿಯಾಗಿ ಬೆಳೆದವರು.

ಮಂದ ಸೂತ್ರ : ಇದು ಮ್ಯಾಸಬೇಡರ ಮತ್ತೊಂದು ಪ್ರಧಾನ ಶಾಖೆ, ಇದರೊಳಗೂ ಅನೇಕ ಒಳ ಗೋತ್ರಗಳು ಇವೆ. ಅದಕ್ಕೇ ಹೇಳುತ್ತಾರೆ - 'ಸೂತ್ರ ಒಂದೇ, ಗೋತ್ರ ಹಲವು' ಎಂದು. ಇದನ್ನು 'ಮಂದಲೋರು' ಎಂಬ ಹೆಸರಿನಿಂದ ಕರೆಯುತ್ತಾರೆ. ತಮ್ಮನ್ನು ಶ್ರೀಕೃಷ್ಣನಿಂದ ಬಂದ ಮೂಗನಾಯಕನ ಸಂತತಿಯವರು ಎಂದು ಹೇಳಿಕೊಳ್ಳುತ್ತಾರೆ. ಹೀಗಾಗಿ ಸಹಜವಾಗಿ ಇವರು ವೈಷ್ಣವ ಸಂಪ್ರದಾಯಕ್ಕೆ ಸೇರಿದವರು, ಆದಾಗ್ಯೂ ಶಿವನನ್ನು ಪೂಜಿಸುತ್ತಾರೆ. ದ್ರಾವಿಡ ಮೂಲದ 'ಮಂದಲೋರು' (ಈ ಶಬ್ದ ತೆಲುಗಿನಲ್ಲಿ 'ಮಂದ' ಆದರೆ, ಕನ್ನಡದಲ್ಲಿ 'ಮಂದೆ' -ಅರ್ಥ ಮಾತ್ರ ಒಂದೇ. ಪಶುಪಾಲನೆಯನ್ನೇ ಸೂಚಿಸುವ ಶಬ್ದವಾಗಿದ್ದು ಪಶುಗಳ ಸಮೂಹ (ಹಿಂಡು) ವನ್ನು, ಅದನ್ನು ಕಾಯುವ ಗುಂಪನ್ನು ಸೂಚಿಸುತ್ತದೆ. ಹೀಗಾಗಿ ಇವರೂ ಕೂಡ ಪಶುಪಾಲಕರೇ ಆಗಿದ್ದಾರೆ, ಹೀಗಾಗಿ ಇವರು ಕಾಯುವ ಪಶುಗಳನ್ನು 'ವಿಷ್ಣು ಕಂಪಳ' ಎನ್ನುತ್ತಾರೆ.)

ಈ 'ಮಂದಲೋರು' ಪ್ರಧಾನ ಶಾಖೆಯೊಳಗೇ ಮತ್ತೊಂದು ಒಳ ಬೆಡಗನ್ನು ಮಾಡಿಕೊಂಡಿದ್ದಾರೆ -'ಮುಂದದಲ್ಲಿ ಮಂದ - ತಿರುಗ ಮಂದ' ಎಂದು. ಇವರನ್ನೇ 'ಮಳೆಲೋರು' ಎಂದು ಕರೆಯುತ್ತಾರೆ. ವೈವಾಹಿಕ ಸಂಬಂಧಕ್ಕೆ ಹೆಣ್ಣುಗಳ ಕೊರತೆಯುಂಟಾದಾಗ, ತಮ್ಮಲ್ಲೇ ಕೆಲವು ಗುಂಪನ್ನು ವರ್ಗೀಕರಿಸಿ ನೆಂಟರನ್ನಾಗಿ ಮಾಡಿಕೊಂಡರು. ಹೀಗಾಗಿ ಹೊಸದಾಗಿ ಸೃಷ್ಟಿಯಾದ 'ಮಳೆಲೋರು' ವರ್ಗಕ್ಕೆ, ಎರಡು ಪ್ರಧಾನ ಶಾಖೆ (ಸೂತ್ರ)ಗಳಾದ 'ಮಲ್ಲನ ನಾಯಕನೋರು' ಸಹಜ ಬೀಗರಾದರೆ, ಒಂದು ಕಾಲಕ್ಕೆ ಸಹೋದರರೇ ಆಗಿದ್ದ 'ಮಂದಲೋರು' ಕೂಡ ಬೀಗರಾದರು. ಹೀಗಾಗಿ ಇವರನ್ನು 'ಏಳು ಮನೆ ಬೀಗರು' ಎಂದು ಕರೆಯುತ್ತಾರೆ, ಅಂದರೆ ಎಲ್ಲರಿಗೂ ನಂಟರು. ಇವರನ್ನು 'ತಲ್ಲಿಕಿ ಮಾಮ, ಪಿಲ್ಲಕಿ ಮಾಮ' (ತಾಯಿಗೂ

ಮಾವ, ಮಗಳಿಗೂ ಮಾವ) ಎಂದು ಕರೆಯುವ ನಾಣ್ಣುಡಿಯೇ ಹುಟ್ಟಿಕೊಂಡಿತು. ಅಂತೂ ಸಮಾಜ ತನ್ನ ಅವಶ್ಯಕತೆಗಳಿಗೆ ತಕ್ಕಂತೆ ಅನೇಕ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾ ತನ್ನ ಸಮತೋಲನವನ್ನು ಕಾಯ್ದುಕೊಳ್ಳುತ್ತದೆ.

**ಬೇಟೆ ಸಂಸ್ಕೃತಿ? :** ಅಪರೂಪಕ್ಕೆಂಬಂತೆ ಬೇಡರಲ್ಲಿ ಕೆಲವು ಬೇಟೆಯ ಆಚರಣೆಗಳು ಇಂದಿಗೂ ಉಳಿದಿವೆ. ಯುಗಾದಿ ಹಬ್ಬದಲ್ಲಿ ನಡೆಯುವ ಹಂದಿ ಬೇಟೆ ಬೇಡರಿಗೆ ಮಾತ್ರ ಸೀಮಿತವಾದುದಲ್ಲ. ಇದರಲ್ಲಿ ಊರಿನ ಎಲ್ಲ ಜಾತಿಯ ಜನ ಭಾಗವಹಿಸುತ್ತಾರೆ. ಹೀಗಾಗಿ ಬೇಟೆ ಎಂಬುದು ಮನುಷ್ಯನ ಮೂಲ ಪ್ರವೃತ್ತಿ. ಜೊತೆಗೆ ವರ್ಷಕ್ಕೊಮ್ಮೆ ಹಂದಿಯ ಬೇಟೆಯಲ್ಲಿ ಭಾಗವಹಿಸುವುದು, ಅದನ್ನು ಕೊಂದು ನೆಲದಲ್ಲಿ ಹೂಳುವುದು (ಕೆಲವರು ಮಾಂಸವನ್ನು ಹಂಚಿಕೊಂಡು ತಿನ್ನುತ್ತಾರೆ.) ಫಲಸಮೃದ್ಧಿಗೆ ಸಂಬಂಧಿಸಿದ 'ಹುಲುಸು' ಆಚರಣೆಯೇ ಆಗಿದೆ.

ಗುಗ್ಗರಿ ಹಬ್ಬದ ಸಂದರ್ಭದಲ್ಲಿ ಮೊಲದ ಬೇಟೆಗೆ ಹೋಗುವ ಪ್ರಕ್ರಿಯೆಯೂ ಇದನ್ನೇ ಧ್ವನಿಸುತ್ತದೆ. ಸಸ್ಯಮೂಲದ ಧಾನ್ಯವೊಂದರ ನೈವೇದ್ಯವೇ ಮುಖ್ಯವಾಗಿರುವ ಈ ಆಚರಣೆಯೂ 'ಕೃಷಿ ಸಂಸ್ಕೃತಿ'ಯನ್ನು ಸಂಕೇತಿಸುವ ಸಂಪ್ರದಾಯವೆಂದೇ ಪರಿಗಣಿಸಬೇಕಾಗುತ್ತದೆ?

ಕೃಷಿ ಮತ್ತು ಪಶುಪಾಲಕ ಸಂಸ್ಕೃತಿಗಳು ಬೆರತಂತೆ ಕಾಣುವ ಅವರ ಬದುಕು ಮತ್ತು ಆಚರಣೆಗಳ ಹಿನ್ನೆಲೆಯಲ್ಲಿ ಅವರನ್ನು 'ಪಶುಪಾಲಕ ಮ್ಯಾಸಬೇಡರು' ಎಂದು ಕರೆಯುವುದೇ ಅತ್ಯಂತ ಸೂಕ್ತ. ಇನ್ನು ಗಮನಿಸಲಿರುವ ಅವರ ಜೀವನ ವಿವರಗಳೂ ಇದನ್ನೇ ಸಮರ್ಥಿಸುತ್ತದೆ ಎಂಬುದು ಗಮನಾರ್ಹ.

**ಕಿಲಾರಿ :** ದೇವರ ಎತ್ತುಗಳನ್ನು ಕಾಯುವ ಇವನು 'ಸೆಳ್ಳ' (ಮೊಣಕಾಲಿನವರೆಗೂ ಇರುವ ಬಿಗಿಯಾದ ನಿಕ್ಕರ್) ಧರಿಸಿರುತ್ತಾನೆ. ತಲೆಗೆ ಬಿಳಿಯ ಪೇಟ ಸುತ್ತಿರುತ್ತಾನೆ. ಸೊಂಟಕ್ಕೆ ಪಟ್ಟೆದಟ್ಟಿಯನ್ನು ಕಟ್ಟಿರುತ್ತಾನೆ. ಬರಿಮೈಯಲ್ಲಿ ಇರುತ್ತಾನೆ. ಹೆಗಲ ಮೇಲೆ ಕರಿಯ ಕಂಬಳಿ ಇರುತ್ತದೆ. ಕೈಗೆ ಬಿಳಿ ಕಡಗ, ಕಿವಿಗೆ ಮುರ ಧರಿಸಿರುತ್ತಾನೆ. ಕೈಯಲ್ಲಿ ಕಟ್ಟಿಗೆ 'ದಂಡ'ವನ್ನು ಹಿಡಿದಿರುತ್ತಾನೆ. ಹಗಲು-ರಾತ್ರಿ, ಬಿಸಿಲು-ಚಳಿ, ಮಳೆ-ಗಾಳಿ ಎನ್ನದೆ ಸದಾ ದೇವರ ಎತ್ತುಗಳ ಗೂಡಿನಲ್ಲೇ ಇರುತ್ತಾನೆ. ಇವನೇನು ಸನ್ಯಾಸಿಯಲ್ಲ, ಸಂಸಾರಿ. ಊರಿನ ಹಟ್ಟಿಯೊಳಗಿರುವ ತನ್ನ ಸಂಸಾರದ ಸದಸ್ಯರನ್ನು ಆಗಾಗ್ಗೆ ಹೋಗಿ ಭೇಟಿಯಾಗಿ ಬರುತ್ತಾನೆ. ಒಕ್ಕಲು (ಭಕ್ತಾದಿಗಳು) ಮೇಲೆ ಹೋಗಿ ತನ್ನ ಸಂಸಾರಕ್ಕೆ ಬೇಕಾದ ಇಟ್ಟು-ಬಟ್ಟೆ-ಭರಣಿ-ಹಣ-ಸಂಗ್ರಹಿಸಿಕೊಂಡು ಬಂದು ಕೊಡುತ್ತಾನೆ. ಆದರೆ ಕಿಲಾರಿ ಮನೆಯ ಹೆಣ್ಣು ಮಕ್ಕಳು 'ವಾರದ ದಿನ' (ಸಾಮಾನ್ಯವಾಗಿ ಭಾನುವಾರ) ಬಿಟ್ಟು ಬೇರೆ 'ಬಿಡಿದಿನ'ಗಳಲ್ಲಿ 'ಮುತ್ತೈಗಳ ನಿಧಿ' ಯ ಬಳಿ ಹೋಗುವಂತಿಲ್ಲ!

ಈ ಆಧುನಿಕ ಯುಗದಲ್ಲೂ ಇವರು ಕಂಚು, ಸಿಲವರ, ಸ್ಟೀಲು ಪಾತ್ರೆಗಳನ್ನು ಬಳಸುವಂತಿಲ್ಲ, ಏನಿದ್ದರೂ ಮಡಿಕೆ, ಕುಡಿಕೆ, ಮುಗಿ, ಗಡಿಗೆ-ಹೀಗೆ ಮಣ್ಣಲ್ಲಿ ತಯಾರಿಸಿದ ಪಾತ್ರೆಗಳನ್ನೇ ಬಳಸಬೇಕು.

ಬೊಮ್ಮದೇವರು, ಗಾದಿರಿ ದೇವರು, ಜಗಲೂರಜ್ಜ, ಕಾಟಯ್ಯ, ಚಿತ್ರಯ್ಯ - ಆಯಾಯ ದೇವರ ಎತ್ತುಗಳನ್ನು ಕಾಯುವ ಕಿಲಾರಿಗಳು ಬೇರೆ ಬೇರೆಯೇ ಇರುತ್ತಾರೆ. ಆಯಾ ದೇವರ ಎತ್ತುಗಳ ಹಟ್ಟಿಗಳೂ ಬೇರೆಯೇ ಇರುತ್ತವೆ.

ದೇವರಿಗೆ ಬಿಟ್ಟ ಕೆಲವು ಬಸವಗಳು, ಕಾಡುಗೊಲ್ಲರ 'ಜಂಜಪ್ಪನ ಬಸವ'ಗಳಂತೆ ಅಲೆಮಾರಿಗಳಾಗಿ ಹಟ್ಟಿಗಳಲ್ಲೇ ನೆಲೆ ನಿಂತು ಬಿಡುವುದುಂಟು. ಆಗ ಹಟ್ಟಿಯ ಜನವೇ ಹಿಟ್ಟು, ಮುದ್ದೆ ಕೊಟ್ಟು ಸಾಕುತ್ತಾರೆ.

ಹಟ್ಟಿಯಲ್ಲಿ ಮಲಗಲು ಬಂದವರು (ಕೆಲವರು ವಾರಗಟ್ಟಲೇ ದೇವರ ಎತ್ತುಗಳ 'ಹಕ್ಕಿ' ಯಲ್ಲೇ ಮಲಗುತ್ತಾರೆ.) ಬೆಳಿಗ್ಗೆ ಎದ್ದು ಕಂಬಳಿ ಗದ್ದಿಗೆ ಮಾಡಿ 'ಕಾಸು-ಮೀಸಲು' ಒಪ್ಪಿಸುತ್ತಾರೆ. ಭಕ್ತರು ತಂದ 'ಬತ್ತೇವು' ನಿಂದ ಕಿಲಾರಿಗಳೇ ಅಡಿಗೆ ಮಾಡಿ ಬಡಿಸುತ್ತಾರೆ. ಹಸುಗಳಿಂದ ಕರೆದ ಹಾಲು-ಮೊಸರನ್ನು ಮುದ್ದೆಯೊಂದಿಗೆ ಬಡಿಸುತ್ತಾರೆ. ಅಗತ್ಯಕ್ಕಿಂತ ಹೆಚ್ಚಿನ ಹಾಲನ್ನು ಕರೆಯುವುದಿಲ್ಲ. ಯಾಕೆಂದರೆ ಹಾಲನ್ನು ಮಾರುವಂತಿಲ್ಲ ಮತ್ತು ಹಟ್ಟಿಯಿಂದ ಹೊರ ಜನಕ್ಕಾಗಲಿ ಅಥವಾ ತಮ್ಮ ಮನೆಗಾಗಲಿ ಕೊಡುವಂತಿಲ್ಲ ! ಹೆಚ್ಚುವರಿ ಹಾಲನ್ನು ಕರುಗಳಿಗೆ ಉಂಡುಕೊಳ್ಳಲು ಬಿಡುತ್ತಾರೆ.

ದೇವರಿಗೆ ಬಿಡುವ ಎತ್ತು-ಹಸು ಮತ್ತು ಹಟ್ಟಿಯಲ್ಲೇ ಹೊಸದಾಗಿ ಹುಟ್ಟುವ ಕರುಗಳಿಗೆ ಗಂಡಾದರೆ -ಬಾಲದ ಅಕ್ಕ-ಪಕ್ಕದ ಎರಡೂ ಕುಂಡೆ ಪಿರ್ರೆಗಳಿಗೆ ಒಂದು ಕಡೆ ಚಂದ್ರ ಮತ್ತೊಂದು ಕಡೆ ಸೂರ್ಯ, ಇಲ್ಲದಿದ್ದರೆ ತ್ರಿಶೂಲ-ಸೂರ್ಯರ ಮುದ್ರೆಯನ್ನು ಹಾಕುತ್ತಾರೆ. ಕಬ್ಬಿಣದ ಮುದ್ರೆಗಳನ್ನು ಕಾಯಿಸಿ ಹಾಕಿದಾಗ ಗಾಯವಾದರೂ, ಗಾಯ ಮಾದ ಮೇಲೆ ಮುದ್ರೆಗಳು ಎದ್ದು ಕಾಣುತ್ತದೆ. ಹೆಣ್ಣಾದಲ್ಲಿ ಬಲ ಕಿವಿಯನ್ನು ನಾಲ್ಕು ಸೀಳುಗಳು ಆಗುವಂತೆ ಸೀಳುತ್ತಾರೆ.

ಈ ದೇವರ ಎತ್ತುಗಳ ಸಗಣಿ ಗೊಬ್ಬರವನ್ನು ಈ ಹಿಂದೆ ಬಳಸುತ್ತಿರಲಿಲ್ಲ ! ರಾಶಿ ಬಿದ್ದ ಬಳಿಯೇ ಪುಡಿಯಾಗಿ, ಮಣ್ಣಾಗಿ ಹೋಗುತ್ತಿತ್ತು. ಏಕೆಂದರೆ ಅದನ್ನು ಭಸ್ಮದಂತೆ, ವಿಭೂತಿಯಂತೆ ಬಳಸುವ ಕಾರಣ, ವ್ಯವಸಾಯದ ಭೂಮಿಗೆ ಚೆಲ್ಲಿದಾಗ ಮೆಟ್ಟುಗಾಲಲ್ಲಿ ತುಳಿಯುವುದರಿಂದ ಒಳ್ಳೆಯದಾಗುವುದಿಲ್ಲ; ಇಂಥ ಗೊಬ್ಬರ ಹಾಕಿದ ಹೊಲದಲ್ಲಿ ಬೆಳೆಯೂ ಆಗುವುದಿಲ್ಲ ಎಂಬ ನಂಬಿಕೆ ಇತ್ತು. ಸುತ್ತಿನ ಮ್ಯಾಸಬೇಡರ್‍ಯಾರೂ ಇದನ್ನು ಬಳಸುವುದಿಲ್ಲ ದೂರದ 'ಹೊರಜನ' ಇತ್ತೀಚಿನ ದಿನಗಳಲ್ಲಿ ಈ ಗೊಬ್ಬರವನ್ನು ಖರೀದಿಸುತ್ತಿದ್ದಾರೆ. 'ಮೀಸಲು' ಹರಕೆ ಮಾಡಿಕೊಂಡು 'ಬ್ಯಾಟೆ' (ಬಲಿಗಾಗಿ ಮೀಸಲಾದ ಕುರಿ, ಮೇಕೆ) ಕೊಟ್ಟು ಹೋಗುತ್ತಾರೆ.

'ಮುತ್ತೈಗಳ ನಿಧಿ'ಯನ್ನು ದೇವಸ್ಥಾನವೆಂದೇ ಭಾವಿಸುವುದರಿಂದ ಕೆಲವರು ತಮ್ಮ ಮಕ್ಕಳ 'ಜವಳ' (ತಲೆ ಕೂದಲು) ಕೂಡ ಇಲ್ಲಿಯೇ ತೆಗೆಸುತ್ತಾರೆ.

ಉದಿ-ಪದಿ : ಸುತ್ತೂ ಒಕ್ಕಲಿನ ಹಬ್ಬ, ಜಾತ್ರೆ, ಪೂಜಾರಿ ಪಟ್ಟದಂತಹ ಕಾರ್ಯಕ್ರಮಗಳಿಗೆ ಆಹ್ವಾನದ ಮೇಲೆ ದೇವರ ಎತ್ತುಗಳೊಂದಿಗೆ ಕಿಲಾರಿಗಳು ಹೋಗುತ್ತಾರೆ. ಮ್ಯಾಸಬೇಡರನ್ನು ಸೋದರರೆಂದೇ ಭಾವಿಸುವ ಕಾಡುಗೊಲ್ಲರೂ ಕೂಡ ಪೂಜಾರಿ ಪಟ್ಟದಂತಹ ಬಹು ಮುಖ್ಯ ಸಂದರ್ಭದಲ್ಲಿ ದೇವರ ಎತ್ತುಗಳನ್ನು ಕರೆದುಕೊಂಡು ಹೋಗುತ್ತಾರೆ. ಮ್ಯಾಸಬೇಡರ ಆಚರಣೆಗಳೆಲ್ಲ ದೇವರ ಎತ್ತುಗಳ ಸನ್ನಿಧಿಯಲ್ಲೇ ನಡೆಯಬೇಕು. ತಮ್ಮ ಎಲ್ಲ ಚಟುವಟಿಕೆಗಳನ್ನು ಮುತ್ತಯ್ಯಗಳು ಈ ದೇವರ ಎತ್ತುಗಳ ಮೂಲಕ ವೀಕ್ಷಿಸುತ್ತಿದ್ದಾರೆ, ಹಾಗೂ ಅವರ ಸಾಕ್ಷಿ-ಸಮಕ್ಷಮದಲ್ಲಿ ಇದೆಲ್ಲ ನಡೆಯುತ್ತಿದೆ ಎಂಬುದನ್ನು ಮನವರಿಕೆ ಮಾಡಿಕೊಡುವಂತೆ ಕಾರ್ಯಕ್ರಮಗಳು ನಡೆಯುತ್ತವೆ.

ದೇವತಾ ಕಾರ್ಯಕ್ಕೆ ಹೋದ ಕಿಲಾರಿ, ದೇವರ ಎತ್ತುಗಳು ಹಾಗೂ ಕಟ್ಟೆ ಮನೆ 'ದೊರೆ' (ಯಜಮಾನ) ಯನ್ನು 'ಸೆಳೆ ಮಿಂಚು' (ಹಾದಿಯುದ್ದಕ್ಕೂ ನೀರು ಸುರಿದು) ಕೊಟ್ಟು, 'ತಡಿ-ಮಡಿ' (ಅಗಸ ಮಡಿ ಬಟ್ಟೆ ಹಾಸಿ) ಯಲ್ಲಿ ಕರೆದುಕೊಂಡು ಹೋಗಿ 'ಹಸಿರು ಗದ್ದಿಗೆ' (ಹಸಿ ಸೊಪ್ಪಿನ ಹಾಸಿಗೆ) ಯಲ್ಲಿ ಕೂರಿಸುವುದಲ್ಲದೆ, ಅವರ ವಸತಿಗಾಗಿ ಹಸಿರು ಸೊಪ್ಪಿನ 'ಬೆರಗು' (ಗುಡ್ಲು) ಹಾಕಿಕೊಡುತ್ತಾರೆ.

ಕಾರ್ಯಕ್ಕಾಗಿ ನೆರೆದಿರುವ ದೇವರುಗಳನ್ನು ಊರ ಹೊರಗೆ ಕರೆದುಕೊಂಡು ಒಂದು ಒಂದು ಕಡೆ ನಿಲ್ಲಿಸುತ್ತಾರೆ. ಅಲ್ಲಿಗೆ ಕಿಲಾರಿ ದೇವರ ಎತ್ತುಗಳನ್ನು ತಂದು ಕಲೆಸುತ್ತಾನೆ. ನೆರೆದಿರುವ ದೇವರುಗಳನ್ನು 'ಉದಿ-ಪದಿ' ಎಂದು ಕರೆಯುತ್ತಾರೆ. ದೀವಣಿಗೆಯಲ್ಲಿ (ದೀಪಾವಳಿ) ಇದೇ ಪ್ರಕ್ರಿಯೆಯಲ್ಲಿ ದನಗಳನ್ನು'ಕಿಚ್ಚು' (ಬೆಂಕಿ) ಹಾಯಿಸುವುದರ ಮೂಲಕ ನೆರವೇರಿಸಲಾಗುತ್ತದೆ.

ಜೆನಿಗೆ ಆಕಳು : ದೇವರಿಗೆ ಅರ್ಪಿಸುವ 'ಮೀಸಲು ತುಪ್ಪ' ತಯಾರಿಸಲು ಬೇಕಾಗುವ ಹಾಲಿಗಾಗಿ, ದೇವರ ಎತ್ತುಗಳೊಳಗೆ ಆರಿಸಿದ ಆಕಳು (ಹಸು) ಬಿಡುತ್ತಿದ್ದರು. ಅದೇ 'ಜೆನಿಗೆ ಆಕಳು' ಕಾಡುಗೊಲ್ಲರ ಎತ್ತಪ್ಪ-ಜುಂಜಪ್ಪನವರ ಕಾಲದಲ್ಲಿ ಜೆನಿಗೆಗೆ ಆಳಕನ್ನೇ ಬಿಡುತ್ತಿದ್ದರು. ಆದರೆ ಗೋವಿನ 'ನೇಮ' ನಡೆಯುವುದು ಕಷ್ಟವೆಂದು ಗೊಲ್ಲರು ಕುರಿಯನ್ನು ಜೆನಿಗೆಗೆ ಬಳಸಲು ತೊಡಗಿದ್ದರೆ, ಮ್ಯಾಸಬೇಡರು ಮಾತ್ರ ಜೆನಿಗಾಗಿ ಆಕಳನ್ನೇ ಉಳಿಸಿಕೊಂಡಿರುವುದು ಅಚ್ಚರಿಯೇ ಸರಿ.

ಕಲ್ಲು ಬಣವೆ : ದೇವರ ಎತ್ತುಗಳು ಸತ್ತಾಗ ಅವುಗಳನ್ನು ಮಣ್ಣಲ್ಲಿ ಹೂಣಿ ಹಾಕುತ್ತಾರೆ ಇಲ್ಲವೆ 'ಕಲ್ಲುಬಣವೆ' ಎಂಬ ಅತ್ಯಂತ ಪ್ರಾಚೀನ ಪದ್ಧತಿಯ ಮೂಲಕ ಅಂತ್ಯ ಕಾಣಿಸುತ್ತಾರೆ. ಅಂದರೆ ಸತ್ತ ಪ್ರಾಣಿಯನ್ನು ಕಾಣದಂತೆ ಕಲ್ಲುಗಳಿಂದ ಮುಚ್ಚುವುದೇ-ಕಲ್ಲು ಬಣವೆಯ ಪದ್ಧತಿ.

ಅತ್ಯಂತ ಭವ್ಯ ಪಶುಪಾಲಕ ಪರಂಪರೆಯನ್ನು ಹೊಂದಿರುವ ಭಾರತದಲ್ಲಿ ಪಶುಗಳ ರಕ್ಷಣೆಗಾಗಿ ಪ್ರಾಣವನ್ನೇ ಪಣವಾಗಿಟ್ಟು ಹೋರಾಡಿದ ವೀರರ ಸ್ಮರಣೆಗಾಗಿ 'ತುರುಗೋಳ್' ಕಲ್ಲುಗಳನ್ನು ಸ್ಥಾಪಿಸಿ, ಶಾಸನಗಳನ್ನು ಬರೆಯಿಸಿರುವುದನ್ನು ಕಾಣಬಹುದು. ಶಿಷ್ಟ ಕಾವ್ಯಗಳು

ಇಂತಹ ಸಾಹಸಿಗಳನ್ನು ಕೊಂಡಾಡಿವೆ. 'ಶಿಷ್ಟ ಸಂಸ್ಕೃತಿ'ಯೇ ಪಶುಪಾಲನೆಯನ್ನು ಒಂದು ಉನ್ನತ ಮೌಲ್ಯವೆಂದು ಪರಿಗಣಿಸಿತ್ತು. 'ಜನಪದ ಸಂಸ್ಕೃತಿ' ಕೂಡ ತನ್ನದೇ ಆದ ರೀತಿಯಲ್ಲಿ 'ಪಶುಪಾಲಕ ಸಂಸ್ಕೃತಿ'ಗೆ ಸ್ಪಂದಿಸಿರುವುದನ್ನು ಕಾಣಬಹುದು.

ನನ್ನಿವಾಳದ ವೈಶಿಷ್ಟ : ಇಲ್ಲಿ ನಡೆಯುವ ಹಬ್ಬಗಳು ಇಡೀ ಮ್ಯಾಸಬೇಡರ ಸಂಸ್ಕೃತಿಯನ್ನು ನಿರ್ವಚಿಸುವಂತೆ ಇರುವುದರಿಂದ, ಇದು ಅತ್ಯಂತ ಕುತೂಹಲದ ಸಾಂಸ್ಕೃತಿಕ ಕೇಂದ್ರವೂ ಆಗಿದೆ.

ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ 10 ಕಿ.ಮೀ. ದೂರದಲ್ಲಿರುವ ನನ್ನಿವಾಳ-ಮ್ಯಾಸಬೇಡರ 'ಕಟ್ಟೆಮನೆ', ಸದ್ಯಕ್ಕೆ ಇದೊಂದು ಕಟ್ಟೆಮನೆ ಮಾತ್ರ ಕ್ರಿಯಾಶೀಲವಾಗಿದೆ, ನಾಯಕನಹಟ್ಟಿ ಮತ್ತು ಗೋನೂರುಗಳು ನಿಷ್ಕ್ರಿಯವಾಗಿವೆ. ನಾಯಕನಹಟ್ಟಿ ಪಾಳೆಯಪಟ್ಟಿನ ಅವನತಿಯೊಂದಿಗೆ ಅದರ ಕಟ್ಟೆಮನೆಯೂ ತನ್ನ ಪ್ರಾಮುಖ್ಯ ಕಳೆದುಕೊಂಡಿತು. ಗೋನೂರಿನಲ್ಲೂ ಬಯ್ಯಪ್ಪರಾಜನ ಅಂತ್ಯದೊಂದಿಗೆ ಅದೂ ಮೂಲೆಗುಂಪಾಯಿತು. ಅಲ್ಲಿಯವರೆಗೂ ಅಲ್ಲಿ 'ಸತ್ಯದ ಕಟ್ಟೆ' ಮತ್ತು 'ಪಾಪದ ಕಟ್ಟೆ' ಎಂದು ಎರಡು ಕಟ್ಟೆಗಳಿದ್ದವು, ಅವು ಅಗ್ನಿ ಪರೀಕ್ಷೆಯ ಕೇಂದ್ರಗಳಾಗಿದ್ದವು. ಈಗ ಅಲ್ಲಿ ನಾಯಕನಹಟ್ಟಿಯಲ್ಲಿ ಸಮಾಧಿಯಾಗಿರುವ ಅವಧೂತ ತಿಪ್ಪೇರುದ್ರಸ್ವಾಮಿಯ ಗದ್ದುಗೆ, ದೇವಸ್ಥಾನಗಳಿವೆ. ಅಲ್ಲಿ ಪ್ರತಿ ವರ್ಷ ಜಾತ್ರೆ, ಉತ್ಸವ, ತೇರುಗಳು ಜರುಗುತ್ತವೆ.

ನನ್ನಿವಾಳ ಗ್ರಾಮಕ್ಕೆ ಹೊಂದಿಕೊಂಡೇ ನೂರಾರು ಅಡಿಗಳ ಎತ್ತರವಿರುವ ಗುಡ್ಡವಿದೆ. ದೂರಕ್ಕೆ ಉದ್ಭವ ಲಿಂಗದಂತೆ, ಇನ್ನೊಂದು ಕೋನದಿಂದ ನೋಡಿದರೆ ಗಣಪತಿಯಂತೆ, ಮಗದೊಂದು ಕಡೆಯಿಂದ ತಲೆ ನೆಲಕ್ಕಿಟ್ಟು ಸೊಂಡಿಲು ಚಾಚಿದ ಆನೆಯಂತೆ ಕಾಣುತ್ತದೆ.

ಈ ಗ್ರಾಮಕ್ಕೆ ನನ್ನಿವಾಳವೆಂಬ ಹೆಸರು ಬರಲು ಸ್ವಾರಸ್ಯಕರ ಕತೆಯೂ ಇದೆ. ಈ ಮುಂಚೆ ಇದನ್ನು 'ನಂದಿವಾಳ' ಎಂದು ಕರೆಯುತ್ತಿದ್ದರು. ಅಂದರೆ ಊರಿಗೆ ಅಂಟಿಕೊಂಡಂತೆ ಇರುವ ಬೆಟ್ಟ ನಂದಿ (ಎತ್ತು)ಯ ಭುಜದ 'ಹಿಣಿಲ' ನಂತೆ ಕಾಣುವುದರಿಂದ ಸಹಜವಾಗಿ 'ನಂದಿವಾಳ' ಎಂಬ ಹೆಸರು ಬಂದಿರಬೇಕು. ಆದರೆ ಅಲ್ಲಿದ್ದ ದೊರೆ 'ನನ್ನೆಮ್ಮ' ಎಂಬ ಮುಸ್ಲಿಂ ಹೆಂಗಸಿನೊಂದಿಗೆ ಸಂಪರ್ಕವಿಟ್ಟುಕೊಂಡಿದ್ದ. ಆಕೆ ತನ್ನ ಪ್ರಿಯಕರನ ಮನವೊಲಿಸಿ 'ನನ್ನ ಹೆಸರು ಮತ್ತು ನಮ್ಮ ಮುಸ್ಲಿಂ ಸಂಪ್ರದಾಯ ಶಾಶ್ವತವಾಗಿ ಇರುವಂತೆ ಮಾಡುವುದೇ ನೀನು ನನಗೆ ಕೊಡುವ ಕಾಣಿಕೆ' ಎಂದು ಒಪ್ಪಿಸಿದಳು. ದೊರೆ 'ನಂದಿವಾಳ'ವನ್ನು 'ನನ್ನಿವಾಳ'ವೆಂದು ಕರೆಯಬೇಕು ಹಾಗೂ ಈ ಕಟ್ಟೆಮನೆಗೆ ಸೇರಿದ ಮ್ಯಾಸನಾಯಕರು ಮುಸ್ಲಿಂರಂತೆ 'ಮುಂಜಿ' (ಸುಂತಿ) ಮಾಡಿಸಿಕೊಳ್ಳಬೇಕೆಂಬ ಆಜ್ಞೆ ಮಾಡಿದನೆಂದು ಐತಿಹ್ಯಗಳು ಹೇಳುತ್ತವೆ. ಈ ಸಂಪ್ರದಾಯವನ್ನು ಪಾಲಿಸಿದ್ದರಿಂದ ಇವರನ್ನು 'ಮುಂಜಿ ನಾಯಕರು' ಎಂದೂ ಕರೆಯುತ್ತಾರೆ.

ಈ ಊರಿನ ಇನ್ನೊಂದು ವೈಶಿಷ್ಟ್ಯವೆಂದರೆ ಈ ಊರಿನ 'ವಲಮಾರೆ' (ಹೊಲ-ಮೇರೆ) ಯೊಳಗೆ ಒಂದೇ ಒಂದು ಕಾಗೆಯೂ ಪ್ರವೇಶಿಸುವುದಿಲ್ಲ ಎಂಬ ಪ್ರತೀತಿ ಇದೆ. ಈ ಹಿಂದೆ ಯಾರೋ ಮಾಂತ್ರಿಕರು 'ಕಟ್ಟು' ಮಾಡಿದ್ದಾರೆ ಎಂಬ ಹೇಳಿಕೆಯೂ ಇದೆ.

ನನ್ನಿವಾಳದ ಸುತ್ತ ಎರಡು ಮೂರು ಕಿಲೋಮೀಟರ್ ಫಾಸಲೆಯೊಳಗೆ ಬರೀ ಮ್ಯಾಸನಾಯಕರಿಂದ ಕೂಡಿದ ಹನ್ನೆರಡು ಹಟ್ಟಿಗಳು ಇವೆ. ಗುಗ್ಗರಿ ಹಬ್ಬಕ್ಕೆ ಇವರೆಲ್ಲರೂ ತಮ್ಮ ದೇವರುಗಳೊಂದಿಗೆ ನನ್ನಿವಾಳದಲ್ಲಿ ನೆರೆಯುತ್ತಾರೆ.

ಗುಗ್ಗರಿ ಹಬ್ಬ : ಮ್ಯಾಸಮಂಡಲಕ್ಕೆ ಸೇರಿದ ಎಲ್ಲರೂ ತಮ್ಮ ತಮ್ಮ ದೈವಸ್ಥಾನಗಳ ಬಳಿ, ಹನ್ನೆರಡು ಪೆಟ್ಟಿಗೆ ದೇವರುಗಳ ಹೆಸರಿನಲ್ಲಿ ನಡೆಸುವ ಹಬ್ಬ. ತಾವು ಬೆಳೆದ ಹುರುಳಿ, ಅಲಸಂದೆ, ಎಸರು-ಹೀಗೆ ಗುಗ್ಗರಿಗೆ ಬಳಸಬಹುದಾದ ದ್ವಿದಳ ಧಾನ್ಯಗಳನ್ನು ತಮ್ಮ ತಮ್ಮ ದೇವರುಗಳಿಗೆ ಗುಗ್ಗರಿಯು 'ಎಡೆ' ಮಾಡಿ ನೈವೇದ್ಯ ಮಾಡುವವರೆಗೆ ಬಳಸುವಂತಿಲ್ಲ! ಇದನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಾರೆ. ಗುಗ್ಗರಿಗೆ ಬಳಸುವ 'ಕಾಳು' (ಧಾನ್ಯ) ಕೇಂದ್ರಿತ ಹಬ್ಬ ಇದಾಗಿರುವುದರಿಂದ ಇದನ್ನು 'ಕಾಳ ಹಬ್ಬ' ಎಂದೂ ಕರೆಯುತ್ತಾರೆ. ಈ ಹಬ್ಬದಲ್ಲಿ ಸರ್ವೇಸಾಮಾನ್ಯವಾಗಿ ಬಳಸುವ ಧಾನ್ಯ-ಹುರುಳಿ. (ಮೂಲದಲ್ಲಿ ಅಣ್ಣ-ತಮ್ಮಂದಿರು ಎಂದು ಹೇಳಿಕೊಳ್ಳುವ ಕಾಡುಗೊಲ್ಲರಿಗೆ ಮತ್ತು ಅವರ ದೈವಗಳಿಗೆ ಹುರುಳಿ-ನಿಷಿದ್ಧ ಧಾನ್ಯ. ಅವರು ಇದನ್ನು 'ಹುರುಳಿ ಬತ' ಎನ್ನುತ್ತಾರೆ. ಆದರೆ 'ನವಣೆ' ಧಾನ್ಯವನ್ನು ಬಳಸುತ್ತಾರೆ.ಆದರೆ ಮ್ಯಾಸಬೇಡರಿಗೆ ಈ ನವಣೆ ನಿಷೇಧಿತ ಧಾನ್ಯ. ಇದನ್ನು ಅವರು 'ನವಣೆ ಬತ' ಎನ್ನುತ್ತಾರೆ. ಮ್ಯಾಸಬೇಡರ ದೇವರುಗಳಿಗೂ ನವಣೆ ಆಗದಿರುವುದರಿಂದ ಇದನ್ನು 'ಎಡೆ'ಗೆ ಬಳಸುವುದಿಲ್ಲ! ಹೀಗಾಗಿ ಕಾಡುಗೊಲ್ಲ-ಮ್ಯಾಸಬೇಡರು ತಮ್ಮ ದನಕರುಗಳನ್ನು ದೇವರ ಎತ್ತುಗಳನ್ನು ಹಾಗೂ ತಮ್ಮ ದೈವಗಳನ್ನು ಹುರುಳಿ-ನವಣೆ ಹೊಲಗಳ ಮೇಲೆ ಹಾಯಿಸುವುದಿಲ್ಲ.)

ಈ ಹಬ್ಬಕ್ಕೂ ದೇವರ ಎತ್ತುಗಳು ಬರಲೇಬೇಕು, 'ಉದಿ-ಪದಿ' ಆಗಲೇಬೇಕು. ಅವಿಲ್ಲದೆ ಮ್ಯಾಸಬೇಡರ ಯಾವ ಕಾರ್ಯಗಳೂ ನಡೆಯುವುದಿಲ್ಲ. ಕಟ್ಟೆಮನೆ ದೊರೆ, ಅಧಿಕಾರಿಗಳು, ಏಳು ಮಂದಿ ಹಿರಿಯರು ಮತ್ತು ಕುಲಸಾವಿರದವರು ಸೇರಿ ನಡೆಸುವ ಹಬ್ಬ ಇದು.

* * *

ದಡ್ಲ ಸೂರನಾಯಕ : ಮ್ಯಾಸಮಂಡಲದಲ್ಲಿ ಎಲ್ಲೇ ಗುಗ್ಗರಿ ಹಬ್ಬ ಆದರೂ ಅದು ಚಳ್ಳಕೆರೆ ತಾಲ್ಲೂಕಿನ ಹಿರೇಹಳ್ಳಿಯ ದಡ್ಲ ಸೂರನಾಯಕನ ಗುಗ್ಗರಿ ಹಬ್ಬ ಆದ ನಂತರವೇ ಆಗುವುದು. ಮೊದಲ ಗುಗ್ಗರಿ ಹಬ್ಬದ ಗೌರವ ಹಿರಿಯನೂ, ಸಾಂಸ್ಕೃತಿಕ ವೀರನೂ ಆದ ಆತನಿಗೆ ಸಲ್ಲುವ ಗೌರವ ಎಂದು ಭಾವಿಸಲಾಗುತ್ತದೆ. ಸಾಮಾನ್ಯವಾಗಿ ಪುಷ್ಯಮಾಸದಲ್ಲಿ ಇಲ್ಲಿ ಹಬ್ಬ ಪ್ರಾರಂಭವಾಗುತ್ತದೆ. ನಂತರದ ಒಂದೆರಡು ವಾರಗಳಲ್ಲಿ ಬೇರೆ ಬೇರೆ ಕಡೆ ಹಬ್ಬ ಆಚರಿಸುತ್ತಾರೆ.

ದಡ್ಲ ಅಂದರೆ (ದನಗಳ) 'ದೊಡ್ಡಿ' ಎಂದು ಅರ್ಥ. ಇವನೂ ದೇವರ ಎತ್ತುಗಳನ್ನು ಕಾಯುವ ಕಿಲಾರಿ ಆಗಿದ್ದವನು. ಸೂರ್ಯರಾಜ ಎಂದು ಖ್ಯಾತನಾದ ರೆಪ್ಪಲಸೂರಿ

(ಕಣ್ಣರೆಪ್ಪಗಳೊಳಗೆ ಸೂರ್ಯನನ್ನು ಇಟ್ಟುಕೊಂಡವನ) ಮಗನೇ ಸೂರನಾಯಕ. ಇವನ ತಂದೆ ರೆಪ್ಪಲಸೂರಿ ಒಂದು ಹೆಣ್ಣಿನ ಅನೈತಿಕ ಸಂಬಂಧದಿಂದ ಬುಡಕಟ್ಟಿನ ಬಹಿಷ್ಕಾರಕ್ಕೆ ಗುರಿಯಾಗುತ್ತಾನೆ. ಆದರೆ ಪ್ರತಿದಿನ ದೇವರ ಎತ್ತುಗಳಿಗೆ ಕೈಮುಗಿಯದೆ ಊಟ ಮಾಡುತ್ತಿರಲಿಲ್ಲ. ಆದರೆ ಬಹಿಷ್ಕಾರಕ್ಕೆ ಗುರಿಯಾದ ಇವನು ದೇವರ ಎತ್ತುಗಳ ಬಳಿಗೆ ಬರುವಂತಿರಲಿಲ್ಲ. ತಂದೆಯ ದುಸ್ಥಿತಿಗೆ ಕನಿಕರಿಸಿದ ಸೂರನಾಯಕ 'ಕಲ್ಲು ನೀರು ಕರಗೋ ಹೊತ್ತಿನಲ್ಲಿ' ಕೆಲವು ದೇವರ ಎತ್ತುಗಳನ್ನು ಹೊಡೆದುಕೊಂಡು ಹೋಗಿ 'ಮೊಕ್ಕು' (ನಮಸ್ಕಾರ) ತೀರಿಸಿ ಹಿಂತಿರುಗುತ್ತಿದ್ದ. ಈ ವಿಷಯ ತಿಳಿದ ಮ್ಯಾಸ ಮಂಡಲಿ ರೊಚ್ಚಿಗೆದ್ದು ದಡ್ಡ ಸೂರನಾಯಕನಿಗೂ, ನೋಮು (ವ್ರತ) ತೀರಿಸಲು ಹೋಗುತ್ತಿದ್ದ ದೇವರ ಎತ್ತುಗಳಿಗೂ ಬುಡಕಟ್ಟಿನಿಂದ ಬಹಿಷ್ಕಾರ ಹಾಕಿದರು. ಆಗ ಇವನು ದುಃಖಿ ಮಾಡುತ್ತಾ ತನ್ನ ಬಹಿಷ್ಕೃತ ಕಂಪಳದೊಂದಿಗೆ - 'ಹಿರಿಯ'ನಾದವನು ಬಂದು ನೆಲಸಿದ್ದರಿಂದ 'ಹಿರೇಹಳ್ಳಿ'ಯಾಯಿತು. ಅವನ ಕೊನೆಯ ದಿನಗಳನ್ನೂ ಇಲ್ಲಿಯೇ ಕಳೆದು ಅವಿವಾಹಿತನಾಗಿ ತೀರಿಕೊಂಡ. ಅವನ ಹಿಂಬಾಲಕರು ಅವನಿಗೊಂದು ಗುಡಿ ಕಟ್ಟಿ 'ದೇವರು' ಮಾಡಿಕೊಂಡರು.

ಆದರೆ ದೇವರಾದ ದಡ್ಡ ಸೂರನಾಯಕನನ್ನು ಯಾರೂ ನೋಡಿಲ್ಲ! ಸ್ವಯಂ ಪೂಜಾರಿಯೇ ಕಣ್ಣಿಗೆ ಬಟ್ಟೆಕಟ್ಟಿಕೊಂಡೇ ಪೂಜೆ ಮಾಡುತ್ತಾನೆ! ಸೂರನಾಯಕ ಅಂದರೆ ಅವನು 'ಸೂರ್ಯ' ಆಗಿರುವುದರಿಂದ ನೋಡಿದರೆ ಕಣ್ಣು ಹೋಗುತ್ತವೆ ಎಂಬ ನಂಬಿಕೆ ಇದೆ. ಹೀಗಾಗಿ ದೇವಸ್ಥಾನದ ಬಾಗಿಲೇ ತೆಗೆಯುವುದಿಲ್ಲ! ವರ್ಷಕ್ಕೆ ಮೂರು ಬಾರಿ-ಗುಗ್ಗರಿ ಹಬ್ಬ, ನಾಗರ ಪಂಚಮಿ, ದೀಪಾವಳಿಗೆ ಬಾಗಿಲು ತೆಗೆಯುವ ಶಾಸ್ತ್ರ ಮಾಡಿದರೂ; ಬಾಗಿಲು ಹಾಕಿಕೊಂಡೇ, ಕಣ್ಣು ಕಟ್ಟಿಕೊಂಡೇ ಪೂಜೆ ಮಾಡಬೇಕು. ಈ ಗುಡಿಗೆ ಕಲಶವನ್ನೂ ಇಡುವುದಿಲ್ಲ, ಇಟ್ಟರೆ ಪೂಜಾರಿಗೆ ಪಟ್ಟ ಆಗುವಾಗ ಮಾತ್ರ ಕೆಲದಿನ ಇಡುತ್ತಾರೆ. ಈ ದೇವರಿಗೆ ಬಲಿ ನಿಷಿದ್ಧ. ಆಶ್ಚರ್ಯಕರವೆಂಬಂತೆ ಪೂಜಾರಿ ಕಾವಿ, ರುದ್ರಾಕ್ಷಿ ಹಾಕಿರುತ್ತಾನೆ. ದೇವಸ್ಥಾನದೊಳಗೆ ಹೋಗುವಾಗಲಂತೂ ಕಾವಿ ಕಡ್ಡಾಯ. ಈ ದೇವರ ಗುಡಿಯ ಪ್ರವೇಶದ್ವಾರವಂತೂ ಒಬ್ಬ ಮನುಷ್ಯ ಕಷ್ಟಪಟ್ಟು ತೂರುವಂತಿದೆ.

* * *

ಗುಗ್ಗರಿ ಹಬ್ಬದ ಶೃಂಗ ಘಟನೆಯೆಂದರೆ ದೇವರ ಎತ್ತುಗಳನ್ನು ಓಡಿಸುವ ಸ್ಪರ್ಧೆ. ಕಿಲಾರಿಗಳೂ ದೇವರ ಎತ್ತುಗಳ ಜೊತೆಯಲ್ಲೇ ಓಡಬೇಕು. ಇದೊಂದು ರೋಮಾಂಚಕ ದೃಶ್ಯ. ದೊರೆ ಈ ಎಲ್ಲ ಆಚರಣೆಗಳನ್ನು ಗಮನಿಸುತ್ತಾನೆ. ಇದೇ ಸಂದರ್ಭದಲ್ಲಿ ನೆರೆದ ಭಕ್ತಾದಿಗಳು ಮಣ್ಣಿನ ಮೇಲೆ ಹಾಕಿರುವ 'ಪ್ರಸಾದ' ತಿನ್ನುವ 'ಮಣೇವು' ಸ್ಪರ್ಧೆಯೂ ನಡೆಯುತ್ತದೆ. ಎಲ್ಲ ಕಡೆಯೂ ಇದೇ ಮಾದರಿಯಲ್ಲಿ ಗುಗ್ಗರಿ ಹಬ್ಬವನ್ನು ಆಚರಿಸುತ್ತಾರೆ.

ಆದರೆ ನನ್ನಿವಾಳದಲ್ಲಿ ಈ ಗುಗ್ಗರಿ ಹಬ್ಬದ ಜೊತೆ ಜೊತೆಗೆ 'ಥಿಕ್ಕಿ ಹಬ್ಬ' ವನ್ನೂ ಆಚರಿಸುವುದರಿಂದ ಇಲ್ಲಿಯ ಗುಗ್ಗರಿ ಹಬ್ಬ ಬೇರೆಲ್ಲ ಕಡೆಗಿಂತ ಭಿನ್ನವಾಗಿರುತ್ತದೆ.

ಅತ್ತೆ-ಸೊಸೆಯರು ಒಬ್ಬರಿಗೊಬ್ಬರು ತಲೆ-ತಲೆ ಘಟ್ಟಿಸಿಕೊಳ್ಳುವ ಈ ಆಚರಣೆಯ ಹಿಂದೆ ಸಾಂಸ್ಕೃತಿಕ ವೀರನೊಬ್ಬನ ಕತೆ ತಳಕು ಹಾಕಿಕೊಂಡಿರುವುದರಿಂದ ಮೊದಲು ಅದರ ಹಿನ್ನೆಲೆಯನ್ನು ತಿಳಿದುಕೊಳ್ಳೋಣ.

ಗಾದಿರಿ ಪಾಲನಾಯಕ : ನಾಯಕನಹಟ್ಟಿ ಪಾಳೆಯ ಪಟ್ಟಿನ ವಂಶಾವಳಿಯಲ್ಲಿ ಕಾಣಿಸಿಕೊಳ್ಳುವ ಇವನೂ ಕೂಡ ಪಶುಪಾಲಕ ವೀರನೇ ಆಗಿದ್ದಾನೆ. ಆದರೆ ನಾಯಕನಹಟ್ಟಿ ಪಾಳೆಯಪಟ್ಟು ಅಸ್ತಿತ್ವಕ್ಕೆ ಬರುವ ಮುನ್ನವೇ ಬದುಕಿದ್ದವನು. ಆಗ ಇವರು ನನ್ನಿವಾಳದ ಸುತ್ತಿನಲ್ಲಿ ಪಶುಪಾಲನೆ ಮಾಡಿಕೊಂಡಿದ್ದರು. ಪಾಲನಾಯಕ 'ಜೀವರಾಶಿ' ಯೊಂದಿಗೆ ಮೊಡಲಿನಲ್ಲಿ, ವೇದಾವತಿ ನದಿ ಪಕ್ಕದ ಗೋಸಿಕೆರೆಯಲ್ಲಿ ಕಾವಲು ಹಾಕಿಕೊಂಡಿದ್ದ. ಅಲ್ಲೇ ಇದ್ದ ಗುಹೆಯೊಂದರಲ್ಲಿ ಗಂಡು-ಹೆಣ್ಣು ಹುಲಿಗಳು ಮರಿ ಮಾಡಿಕೊಂಡು ಇದ್ದವು. ಆ ಪರಿಸರದಲ್ಲೇ ಇದ್ದ ಪಾಲನಾಯಕನಿಗೂ, ಹುಲಿಗಳಿಗೂ ಅನೇಕ ಬಾರಿ ಮುಖಾಮುಖಿಯಾಯಿತು. ಹುಲಿ-ಅಸಾಧ್ಯನೆಂದು ಗ್ರಹಿಸಿದ ಪಾಲನಾಯಕನೊಂದಿಗೆ ಒಂದು ಒಪ್ಪಂದಕ್ಕೆ ಬಂತು- 'ನನ್ನ ಹುಲಿ ಮರಿಗಳ ತಂಟೆಗೆ ನೀನು ಬರದಿದ್ದರೆ, ನಿನ್ನ ಜೀವರಾಶಿಯ ತಂಟೆಗೆ ನಾನು ಬರುವುದಿಲ್ಲ' ಎಂದು. ಇಬ್ಬರೂ ಸ್ನೇಹ ಭಾವದಿಂದ ಇದ್ದರು.

ಈ ಒಪ್ಪಂದದಿಂದ ಹುಲಿಗಳಿಗೆ ಮೇವಿನ ಕೊರತೆ ಉಂಟಾಯಿತು. ಹುಲಿ ತನ್ನ ಮರಿಗಳನ್ನು ಪಾಲನಾಯಕನ ಸುಪರ್ಧಿಗೆ ಒಪ್ಪಿಸಿ ಕರಿಮಲೆ, ಬಿಳಿಮಲೆ ಕಡೆ ಹೋದವು. ಪಾಲನಾಯಕ ಹುಲಿಮರಿಗಳನ್ನು ತಂದು ಕರುವಿನ ಗೂಡಿನೊಳಗೆ ಬಿಟ್ಟ. ಅವು ಚೆನ್ನಾಗಿ ಆಡಿಕೊಂಡು ಇದ್ದವು.

ಒಪ್ಪಂದಕ್ಕೆ ಮುನ್ನ ಹಟ್ಟಿಗೆ (ಮನೆಗೆ) ಹೋಗಿದ್ದ ಕಿಲಾರಿಗಳು ಬಹಳ ದಿನಗಳ ನಂತರ ಹಿಂತಿರುಗಿದರು. ಪಾಲನಾಯಕ ದನಗಳ ಹಿಂದೆ ಹೋಗಿದ್ದ, ಅವನು ಹುಲಿಗಳೊಂದಿಗೆ ಮಾಡಿಕೊಂಡ ಒಪ್ಪಂದದ ಅರಿವಿಲ್ಲದ ಕಿಲಾರಿಗಳು, ಕರುವಿನ ಗೂಡಿನಲ್ಲಿದ್ದ ಹುಲಿ ಮರಿಗಳನ್ನು ನೋಡಿ ಗಾಭರಿಯಾದರು. ತಕ್ಷಣವೆ ಕೊಡಲಿಯಿಂದ ಅವುಗಳನ್ನು ಕತ್ತರಿಸಿ ಹಾಕಿದರು.

ಪಾಲನಾಯಕ ಗೂಡಿಗೆ ಬಂದಾಗ ವಿಷಯ ತಿಳಿದು ತತ್ತರಿಸಿಹೋದ. 'ಮಾತು' ಉಳಿಸಿಕೊಳ್ಳಲಾಗದುದಕ್ಕೆ ವ್ಯಥೆಪಟ್ಟ. ಹುಲಿಗಳಿಗೆ ಮುಂಗನಸು ಬಿತ್ತು, ತಮ್ಮ ಕಂದಮ್ಮಗಳಿಗೆ ಏನೋ ಅನಾಹುತವಾಗಿದೆಯೆಂದು ಓಡೋಡಿ ಬಂದವು. ರುಂಡ ಚೆಂಡಾಡಿದ್ದ ತಮ್ಮ ಕರುಳಿನ ಕುಡಿಗಳನ್ನು ನೋಡಿ ಅಬ್ಬರಿಸಿದವು.

ಇನ್ನು ತಾಯಿ ಹುಲಿ ಬಂದರೆ ನಮಗೆ ಉಳಿಗಾಲವಿಲ್ಲ ಎಂದು ತನ್ನ ಕಂಪಳದೊಂದಿಗೆ ತೊರೆದಾಟುತ್ತಿದ್ದ ಪಾಲನಾಯಕನನ್ನು ಹುಡುಕುತ್ತಾ ಬಂದವು, ತೊರೆ ದಾಟುತ್ತಿದ್ದವನನ್ನು ಕಂಡು ಹಾರಿ ಹಾರಿ ಬಿದ್ದವು. ಆ ದಡದಲ್ಲಿದ್ದ ಪಾಲನಾಯಕ 'ತೊರೆ ಏಳು ದಿನ ತುಂಬಿ ಹರಿಯಲಿ' ಎಂದು ಹರಸಿಕೊಂಡ. ಗಂಗೆ ತುಂಬಿ ಹರಿದಳು. (ಅದಕ್ಕಾಗಿ ಥಿಕ್ಕ-ಹಬ್ಬಕ್ಕೆ ಮುನ್ನ ಗೋಸಿಕೆರೆಗೆ ಗಂಗಾಪೂಜೆಗಾಗಿ ಬರುವ ಸಂಪ್ರದಾಯ ಇಂದಿಗೂ ಇದೆ.) ತೊರೆ ಇಳಿಯುವವರೆಗೂ ಆಹಾರ, ನೀರು ಬಿಟ್ಟು ಹಾಗೇ ಕೂತಿದ್ದ ಹುಲಿಗಳು ಅಬ್ಬರಿಸುತ್ತಿದ್ದವು.

ಶತ್ರು ಸಂಹಾರ ಮಾಡುವವರೆಗೂ ಒಂದು ತೊಟ್ಟು ನೀರೂ ಕುಡಿಯಕೂಡದೆಂದು ನಿರ್ಧರಿಸಿದ್ದವು. ಪಾಲನಾಯಕ ಹೋದ ದಾರಿಯ ವಾಸನೆ ಹಿಡಿದು ಹಿಂಬಾಲು ಹತ್ತಿ ನನ್ನಿವಾಳಕ್ಕೆ ಬಂದವು. ಹಸಿವು, ನೀರಡಿಕೆಯಿಂದ ಕಂಗೆಟ್ಟ ಗಂಡು ಹುಲಿ ಬಂಡೆಯ ಮೇಲೆ ನಿಂತಿದ್ದ ನೀರು ಕುಡಿದು, ವಿಲವಿಲ ಒದ್ದಾಡಿ ಸತ್ತುಹೋಯಿತು. (ಅದರ ಸಮಾಧಿ ನನ್ನಿವಾಳದ ಬಳಿ ಇದೆ.)

ಹೆಣ್ಣು ಹುಲಿ ತಾನೊಬ್ಬಳಾದರೂ ಸೇಡು ತೀರಿಸಿಕೊಳ್ಳಬೇಕೆಂದು ಪಾಲನಾಯಕನ ಜಾಡು ಹಿಡಿದು ಗಾದಿರಿಗುಡ್ಡ ಸೇರಿತು. ಪಾಲನಾಯಕ ತನ್ನ ತಮ್ಮ ಚಿನ್ನ (ಸಣ್ಣ) ಪಾಲನಾಯಕನೊಂದಿಗೆ ಗಾದಿರಿ ಗುಡ್ಡದ ಕೆಳಗಿನ ಮಿಂಚೇರಿ ಅರಣ್ಯದಲ್ಲಿ ಕಂಪಳದೊಂದಿಗೆ ಬೀಡು ಬಿಟ್ಟಿದ್ದ.

ಮೈಯೆಲ್ಲಾ ಕಣ್ಣಾಗಿದ್ದ ಹುಲಿ, ಎಚ್ಚರಿಕೆಯಿಂದ ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತಾ ಹೋಗಿ, ಪಾಲನಾಯಕನ ಪ್ರೀತಿಯ ಚೆನಿಗೆ ಹಸುವನ್ನು ಹಿಡಿದು ಸಾಯಿಸಿತು. ಮೇಲಿನ ಗಾಳಿಯಲ್ಲಿದ್ದ ಪಾಲನಾಯಕನಿಗೆ ಗೊತ್ತಾಗಲಿಲ್ಲ. ಕಾಡಿಗೆ ಸೌದೆಗೆ ಬಂದಿದ್ದ ಪಾಲಜ್ಜಿ ಎಂಬ ಮುದುಕಿ ಹುಲಿ ಗುಡುಗುಟ್ಟುವ ಶಬ್ದ ಕೇಳಿ ಗಾಬರಿಯಾಗಿ ಓಡಿ ಬರುತ್ತಿರುವಾಗ ಹುಲಿ ಮೇಲೆ ಬಿದ್ದು ಸೀರೆ ಹರಿದು ಕಿತ್ತುಹೋಯಿತು. ನಿರ್ವಾಣದಲ್ಲೇ ಹೋಗಿ ಪಾಲನಾಯಕನಿಗೆ ಸುದ್ದಿ ಮುಟ್ಟಿಸಿದಳು. ಪಾಲನಾಯಕ ಬಿಲ್ಲು-ಬಾಣ, ಚಿನ್ನಪಾಲ ನಾಯಕ ಕೊಡಲಿ ತಕ್ಕೊಂಡು ಬಂದು ಹುಡುಕಿದರೆ ಹುಲಿಯೇ ಪತ್ತೆ ಇಲ್ಲ! ಜನಿಗೆ ಆಕಳ ಮಾತ್ರ ಸತ್ತು ಬಿದ್ದಿದೆ. ಅದನ್ನು ಅಲ್ಲೇ 'ಕಲ್ಲುಬಣವೆ' ಮಾಡಿದರು.

ಗಾದಿರಿ ಪಾಲನಾಯಕ - 'ಅದು ನಿಮ್ಮ ಕಣ್ಣಿಗೆ ಕಾಣೋಲ್ಲ. ಅದು ಕಾದಿರೋದು ನನಗೆ' ಎಂದು ಅವನೊಬ್ಬನೇ ಹೋದಾಗ ಹುಲಿ ಕಾಣಿಸಿಕೊಂಡಿತು. ಮೇಲೆ ಬಿತ್ತು, ದೊಡ್ಡ ಹೋರಾಟ ನಡೆಯಿತು. ಹುಲಿಯೂ ಸಾಯವಲ್ಲದು, ಪಾಲನಾಯಕನೂ ಸಾಯುವಲ್ಲ. ಆದರೆ ಇಬ್ಬರೂ ಸುಸ್ತಾಗಿದ್ದರು.

ಚಿನ್ನಪಾಲನಾಯಕನಿಗೆ ಸುದ್ದಿ ಗೊತ್ತಾಗಿ ಕೊಡಲಿ ತಂದು ಹುಲಿ ಕಾಲು ಕತ್ತರಿಸಿದ. ಕತ್ತರಿಸಿದ ಹಾಗೆಲ್ಲ ಮತ್ತೆ ಮತ್ತೆ ಕೂಡಿಕೊಳ್ಳುತ್ತಿದ್ದವು.! ಅರೆಜೀವವಾಗಿ ತೇಲುಗಣ್ಣು ಬಿಡುತ್ತಿದ್ದ ಪಾಲನಾಯಕ 'ನಾನು ಸಾಯುವವರೆಗೂ ಅದು ಸಾಯಲ್ಲ. ಸುಮ್ನೆ ಯಾಕೆ ಅದರ ಕಾಲು ಕೊಚ್ಚುತ್ತೀರಾ? ಗೊಂಡೆ ಮಣಕ (ಗೊಡ್ಡ ಆಕಳು)ದ ಗೋಗಂಜು ತಂದು ನನ್ನ ಬಾಯಲ್ಲಿ, ಅದರ ಬಾಯಲ್ಲಿ ಬಿಡಿ. ಇಬ್ಬರೂ ಪ್ರಾಣ ಬಿಡ್ತೀವಿ' ಎಂದ. ಗೋಗಂಜು ಬಿಡುತ್ತಲೇ ಪಾಲನಾಯಕ ಪ್ರಾಣಬಿಟ್ಟ, ನಂತರವೇ ಹುಲಿ ಉಗುಳುನುಂಗಿ ಪ್ರಾಣ ಬಿಟ್ಟಿತು; ಇಬ್ಬರನ್ನೂ 'ಕಲ್ಲುಬಣವೆ' ಮಾಡಿದರು. (ಈಗಲೂ ಇವನ್ನು ನೋಡಬಹುದು.)

ಗಂಜಿಗಟ್ಟಿಗೆ ಹಾಲು ಮಾರಲು ಹೋಗಿದ್ದ ಪಾಲನಾಯಕನ ಹೆಂಡತಿಯರಾದ ಕಂಚವ್ವ-ಕಾಮವ್ವ, ಊರ ಮುಂದಿನ ಹೊಂಡಕ್ಕೆ ಹಾರಿ ಸತ್ತರು. (ಅವರ ಸ್ಮರಣೆಗಾಗಿ ಮಾಸ್ತಿಕಲ್ಲು ನಿಲ್ಲಿಸಿ, ಗುಡಿ ಕಟ್ಟಿದ್ದಾರೆ. ವರ್ಷಕ್ಕೊಮ್ಮೆ ಇಲ್ಲಿ ಗಾದಿರಿ ಪಾಲನಾಯಕನ

ಜಾತ್ರೆಯಾದಾಗ ವ್ಯಕ್ತಿಯೊಬ್ಬ ಹುಲಿವೇಷ ಹಾಕಿಕೊಂಡು ಪೂಜಾರಿಯೊಂದಿಗೆ ಹೋರಾಡುವ ದೃಶ್ಯ - ಇತಿಹಾಸವನ್ನು ಪುನರಭಿನಯಿಸುವಂತೆ ಇದೆ.)

(ಪಾಲನಾಯಕ ಗಾದಿರಿ ಗುಡ್ಡದ ಸಮೀಪದಲ್ಲೇ ಮಡಿದದ್ದರಿಂದ, ಅವನ ಹೆಸರಿಗೆ 'ಗಾದಿರಿ'ಸೇರಿಸಿಕೊಂಡು 'ಗಾದಿರಿಪಾಲನಾಯಕ'ನೆಂದು ಹೆಸರಾದ). ಚಿನ್ನಪಾಲ ನಾಯಕ ಕಂಪಳ ತೆಗೆದುಕೊಂಡು ನನ್ನಿವಾಳಕ್ಕೆ ಬಂದ. ಯಾಕೋ ದನಗಳಿಗೆ ಕೇಡಾಗೋಕೆ ಷುರುವಾದಾಗ 'ಹೊತ್ತಿಗೆ' ಪಂಚಾಂಗ ತೆಗೆಸಿದರು. 'ಬಂಗಾರದ ಹುಲಿ ಮೂರ್ತಿಯನ್ನು ಮಾಡಿಸಿ ಪೂಜಿಸಿದರೆ, ಹುಲಿ, ಹುಲಿಮರಿಗಳನ್ನು ಕೊಂದ ದೋಷ ಹರಿಯುತ್ತೆ, ಹುಲಿಯ ಶಾಪ ಕಳೆಯುತ್ತೆ' ಎಂದು ತಿಳಿಸಿದಾಗ ಎತ್ತಿನ ಕಿಲಾರಿಗಳು- 'ಹಸಿರು ಮರ ಒಣಗಿ ಮತ್ತೆ ಚಿಗುರಿದರೆ, ದೇವರು ಮಾಡ್ತೀವಿ' ಎಂದು ಹರಸಿಕೊಂಡರು; ಹಾಗೆಯೇ ಆಯಿತು. 'ಎತ್ತಿನ ಹಬ್ಬ, ದೀವಣಗೆ, ಗುಗ್ಗರಿ ಹಬ್ಬ, ಥಿಕ್ಕಿ-ಹಬ್ಬ ಮಾಡಿದರೆ ನಿಮಗೆ ಒಲಿಯುತ್ತೇನೆ' ಎಂದು ಬಂಗಾರ ದೇವರು (ಹುಲಿಯ ಬಂಗಾರದ ಮೂರ್ತಿಯನ್ನೇ ಬಂಗಾರ ದೇವರು ಎನ್ನುತ್ತಾರೆ) ಹೇಳಿತು.

ಆಗಿನಿಂದ ಮಾಘದಲ್ಲಿ ಗುಗ್ಗರಿ ಹಬ್ಬ, ಥಿಕ್ಕಿ-ಹಬ್ಬ; ಜ್ಯೇಷ್ಠದಲ್ಲಿ - ಎತ್ತಿನಹಬ್ಬ, ಕಾರ್ತಿಕದಲ್ಲಿ-ದೀವಣಿಗೆ ಹಬ್ಬ ಮಾಡುವ ಕ್ರಮ ಪ್ರಾರಂಭವಾಯಿತು. ಗಾದಿರಿ ಪಾಲನಾಯಕ ನನ್ನು 'ದೇವರು' ಮಾಡಿಕೊಂಡು ಪೂಜಿಸತೊಡಗಿದರು.

ಗಾದಿರಿ ಪಾಲನಾಯಕನಿಗೆ ನವಣೆ ಧಾನ್ಯ ಸೇರದಿದ್ದರಿಂದ - ಇಡೀ ಮ್ಯಾಸಮಂಡಲವೇ ನವಣೆ 'ಎಡೆ' ಬಹಿಷ್ಕರಿಸಿ 'ನವಣೆ ಬತ' (ನವಣೆ ವ್ರತ)ಕ್ಕೆ ನಿಂತಿತು.

ನನ್ನಿವಾಳದ ಒಕ್ಕಲಿನವರು 50-60 ವರ್ಷಕ್ಕೊಮ್ಮೆ ಮಿಂಚೇರಿ ಅರಣ್ಯದಲ್ಲಿರುವ ಗಾದಿರಿ ಪಾಲನಾಯಕ ಮತ್ತು ಹುಲಿ-ಗುಡ್ಡೆ (ಸಮಾಧಿ) ಗಳಿಗೆ ಹೋಗುತ್ತಾರೆ. ಗಾದಿರಿ ಗುಡ್ಡಕ್ಕೆ ಹೋಗಿ ಬಂದರೆ 'ದೊರೆ' ಮತ್ತು 'ಪೂಜಾರಿ' ಸಾಯುತ್ತಾರೆ ಎಂಬ ನಂಬಿಕೆ ಇದೆ. ಆದ್ದರಿಂದ ದೊರೆ ಇನ್ನು 5-6 ವರ್ಷಕ್ಕೆ ಸಾಯಬಹುದು ಎನ್ನುವಾಗ ಗಾದಿರಿ ಗುಡ್ಡಕ್ಕೆ ಹೋಗುತ್ತಾರೆ. ಆದರೆ ಬಚ್ಚಬೋರನ ಹಟ್ಟಿಯವರು ಗಾದಿರಿ ಪಾಲನಾಯಕನ 'ಬಿಲ್ಲ ದೇವರು' ತೆಗೆದುಕೊಂಡು ಪ್ರತಿ ವರ್ಷ ಗಾದಿರಿ ಗುಡ್ಡಕ್ಕೆ ಹೋಗಿ 'ಪರುವು' ಮಾಡಿಕೊಂಡು ಬರುತ್ತಾರೆ.

* *

ಗಾದಿರಿ ಪಾಲನಾಯಕನ ಕತೆ ಸತ್ಯ-ಅಹಿಂಸೆಗಳ ಮುಖಾಮುಖಿಯಂತೆ ಕಾಣುತ್ತದೆ. ಗೋವಿನ ಕತೆಯಲ್ಲೂ ಇಂಥದ್ದೇ ಒಪ್ಪಂದ ಹುಲಿಯ ಸಾವಿಗೆ ಕಾರಣವಾಗುತ್ತದೆ. ಆದರಿಲ್ಲಿ ಹಿಂಸೆಗೆ ಪ್ರತಿ ಹಿಂಸೆ ಎಂಬಂತೆ ಇಬ್ಬರ ದುರಂತದಲ್ಲಿ ಅಂತ್ಯವಾಗುತ್ತದೆ. ವಿಶಿಷ್ಟವಾದ ಪಶುಪಾಲಕ ಸಂಸ್ಕೃತಿಯಲ್ಲಿ ಕಾಡುವ ವ್ಯಾಘ್ರವೇ ದೈವವಾಗಿ ಸೌಮ್ಯತೆಯನ್ನು ಪಡೆಯುತ್ತದೆ, ಅದನ್ನು ಕೆಣಕಿದವನೂ ದೇವರಾಗಿ ರೂಪುಗೊಳ್ಳುವ ಪರಿ ಸಾಂಸ್ಕೃತಿಕ ರೋಮಾಂಚನ ಗಳಲ್ಲೊಂದು.

ಥಿಕ್ಕಿ-ಹಬ್ಬ : ಈ ಹಬ್ಬ ಬಂಗಾರ ದೇವರ ಪ್ರೀತ್ಯರ್ಥವಾಗಿ ನಡೆಯುವಂಥದ್ದು. ಏಕೆಂದರೆ ಈ ದೇವರಿಗೆ ತೆಂಗಿನಕಾಯಿ ಸೇರುವುದಿಲ್ಲ! ಹೀಗಾಗಿ ತೆಂಗಿನಕಾಯಿ ಒಡೆಯುವಂತಿಲ್ಲ. ಗಂಡು ಹುಲಿ ನೀರು ಕುಡಿದು ಸತ್ತರೇ, ಹೆಣ್ಣು ಹುಲಿ ನೀರು ಕುಡಿಯದೇ ಸತ್ತಿದ್ದರಿಂದ, ನೀರುಳ್ಳ ತೆಂಗಿನಕಾಯಿ ಅದಕ್ಕೆ ಆಗುವುದಿಲ್ಲ! ತೆಂಗಿನಕಾಯಿಗಳ ರೀತಿಯಲ್ಲಿರುವ ತಲೆಗಳನ್ನು ಘಟ್ಟಿಸಿಕೊಳ್ಳುವ ಮೂಲಕ ಸಾಂಕೇತಿಕವಾಗಿ ತೆಂಗಿನಕಾಯಿ ಒಡೆಯುವ ಪ್ರಕ್ರಿಯೆಯನ್ನು ನೆರವೇರಿಸಲಾಗುತ್ತದೆ.

ಈ ದೇವರು ಇರುವ ನನ್ನಿವಾಳಕ್ಕೆ ಸಮೀಪದ ಹಟ್ಟಿಯನ್ನು ಬಂಗಾರ ದೇವರಹಟ್ಟಿ ಎಂದು ಕರೆಯುತ್ತಾರೆ. ಇದರ ಗುಡಿ ಕೂಡ ಗುಡಿಸಲಿನದು. ಸುತ್ತ ಲಕ್ಕಲಿ ಸೊಪ್ಪಿನ ಪೌಳಿ ಇದೆ. ಹುಲಿ ಪ್ರತಿಮೆಯನ್ನು ಗುಡಿಯಲ್ಲಿ ಕಾಣುವಂತೆ ಇಟ್ಟಿಲ್ಲ. ಮೂಲ ಮೂರ್ತಿಯಾದ ಆ ಹುಲಿಯನ್ನು ಪೂಜಾರಿ ನೆಲದೊಳಗೆ ಬಚ್ಚಿಟ್ಟಿರುತ್ತಾನೆ. ಆ ನೆಲೆ ಅವನಿಗೆ ಮಾತ್ರ ಗೊತ್ತು. ವಿಶೇಷ ಸಂದರ್ಭಗಳಲ್ಲಿ ಮಾತ್ರ ಹೊರಗೆ ತೆಗೆದು, ಪೂಜೆ ಸಲ್ಲಿಸಿ ಮತ್ತೆ ಹೂತುಬಿಡುತ್ತಾನೆ. ಹೀಗಾಗಿ ಮೂಲದೇವರ ಹೆಸರಿನಲ್ಲಿ ಒಂದು ಪೆಟ್ಟಿಗೆ ದೇವರು ಮತ್ತು ಅಲಗು ಮಾಡಿಕೊಂಡಿದ್ದಾರೆ. ಹೊರಗಡೆ ಹೊರಟಾಗ ಇವು ಉತ್ಸವ ಮೂರ್ತಿಗಳಾಗಿ ಹೋಗುತ್ತವೆ. ಹಟ್ಟಿಯೊಳಗೆ ಹೆಣ್ಣು ಮಕ್ಕಳ 'ರಜಸ್ಸು' (ಪುಷ್ಪವತಿ) ಆದಾಗ ಹನ್ನೊಂದು ದಿನಗಳ ತನಕ ಈ ದೇವರ ಗುಡಿಯ ಬಾಗಿಲು ತೆಗೆಯುವುದಿಲ್ಲ.

ಥಿಕ್ಕಿ ಹಬ್ಬಕ್ಕಾಗಿ ಬಂಗಾರ ದೇವರು ನನ್ನಿವಾಳಕ್ಕೆ ಬರುತ್ತದೆ. ಅದಕ್ಕೆ ಲಕ್ಕಲಿ ಸೊಪ್ಪಿನ ಪೌಳಿ ಇರುವ ಗುಡಿಸಲು ಗುಡಿಯನ್ನು ಬಂಗಾರ ದೇವರ ಹಟ್ಟಿಯಲ್ಲಿರುವ ಮಾದರಿಯಂತಹುದನ್ನೇ ಇಲ್ಲಿ ನಿರ್ಮಿಸಿರುತ್ತಾರೆ. ಗುಗ್ಗರಿ ಹಬ್ಬಕ್ಕಾಗಿ ಆಗಮಿಸಿದ ಜಗಲೂರು ಪಾಪಯ್ಯ ಮತ್ತು ಬೊಮ್ಮದೇವರುಗಳಿಗೆ ಕೇವಲ ಗುಡಿಸಲು ಗುಡಿ ಕಟ್ಟಿರುತ್ತಾರೆ.

ಥಿಕ್ಕಿ ಹಬ್ಬದಲ್ಲಿ ಭಾಗವಹಿಸುವ ಮಹಿಳೆಯರಲ್ಲಿ ಕಟ್ಟೆಮನೆ 'ದೊರೆ' ಮತ್ತು ಬಂಗಾರ ದೇವರ ಪೂಜಾರಿಗಳ ಕುಟುಂಬ ವರ್ಗದವರು, ಬಂಧುಗಳು ಇರುತ್ತಾರೆ. ಅತ್ತೆ-ಸೊಸೆಯರು ಎದುರು-ಬದರು ಸಾಲುಗಳಲ್ಲಿ ಕುಳಿತಿರುತ್ತಾರೆ. ಹಳೆಯ ಕಾಲದ ವಯಸ್ಸಾದ ಮಹಿಳೆಯರು ಬಿಳಿ ಪತ್ತಲ (ಸೀರೆ) ಉಟ್ಟಿರೆ. ಈ ಕಾಲದ ಕಿರಿಯ ವಯಸ್ಸಿನವರು ಮಾಮೂಲು ಬಟ್ಟೆಗಳನ್ನೇ ಧರಿಸಿರುತ್ತಾರೆ. ಇವರೆಲ್ಲ ಪೂಜಾರಿಯ ಕಾಲಿಗೆ ಬಿದ್ದು ಆಶೀರ್ವಾದ ಪಡೆಯುತ್ತಾರೆ. ಸಮೀಪದಲ್ಲೇ ದೇವರ ಎತ್ತುಗಳು, ಕಿಲಾರಿಗಳು ಇರುತ್ತಾರೆ.

ಪೂಜಾರಿ ಥಿಕ್ಕಿ ನಡೆಯುವ ಆವರಣದಲ್ಲಿ ಸಣ್ಣ 'ಈಡು' (ಬೆಂಕಿ) ಹಚ್ಚಿ, ಅದು ಸುಟ್ಟ ನಂತರ ಸ್ಪರ್ಧಿಗಳ ಮೇಲೆ ಗೋಗಂಜು ಚೆಲ್ಲಿ ಅನುಮತಿ ನೀಡುತ್ತಾನೆ. ಅತ್ತೆ-ಸೊಸೆಯರು ಉನ್ಮತ್ತರಾದವರಂತೆ ಒಬ್ಬರ ತಲೆಗಳನ್ನು ಒಬ್ಬರು ಹಿಡಿದು ಘಟ್ಟಿಸಿಕೊಳ್ಳುತ್ತಾರೆ. ಇದು ಕೆಲವೇ ಕ್ಷಣಗಳು ನಡೆಯುವ ಘಟನೆ. ಸ್ವಲ್ಪ ಹೊತ್ತು ಬಿಡುವು ಕೊಟ್ಟು ಮತ್ತೆ, ಹೀಗೆ ಮತ್ತೆ ಕೊನೆಯ ಮೂರನೆಯ ಸಲವೂ ಥಿಕ್ಕಿ ನಡೆಯುತ್ತದೆ. ಕೆಲವು ಅತ್ತೆ-ಸೊಸೆಯರು ಜುಟ್ಟು (ಕೂದಲು) ಹಿಡಿದುಕೊಡು ಕುಸ್ತಿಗೆ ಇಳಿದು ಬಿಡುತ್ತಾರೆ. ಸುತ್ತಲೂ ಆಡ್ಡಾಡುತ್ತಿರುವ 'ಬೆತ್ತದ ಕೋಲಿನವರು' ಸಮಾಧಾನ ಮಾಡುತ್ತಾರೆ. ಇದು ಒಂದು ರೀತಿಯಲ್ಲಿ ಪಾರಂಪರಿಕ

ವೈರಿಗಳಾದ ಅತ್ತೆ-ಸೊಸೆಯರು, ತಮ್ಮ ಆಕ್ರೋಶಗಳನ್ನು ಥಿಕ್ಕಿಯಲ್ಲಿ ಹೊರಕ್ಕೆ ಹಾಕಿ ಒಂದು ರೀತಿಯ ಮಾನಸಿಕ ಬಿಡುಗಡೆ ಪಡೆಯುವ ಪ್ರಕ್ರಿಯೆಯೂ ಆಗಿದೆ ಅಥವಾ ಹುಲಿ-ಪಾಲನ ಾಯಕರ ಹೋರಾಟದ ಮುಖಾಮುಖಿಯ ಅನುಕರಣೆಯೇ? ಈ ಹಬ್ಬ ಹೀಗೆ ಅನೇಕ ಒಗಟುಗಳನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡಿದೆ.

ಪೋತನಾಯಕರು : ಅಲೆಮಾರಿ ಪಶುಪಾಲಕರ ದೇವತೆ - ಮಾರಮ್ಮ. ಹನ್ನೆರಡು ಪೆಟ್ಟಿಗೆ ದೇವರುಗಳಲ್ಲೊಂದಾದ 'ದಡ್ಲ ಮಾರಮ್ಮ' ದನಗಳ ದೊಡ್ಡಿಯಲ್ಲಿ, ಅದೂ ದೇವರ ಎತ್ತುಗಳ ಕಾಲ ಗೊರಸಿನಲ್ಲಿ ಹುಟ್ಟಿದವಳು. ಪಶುಪಾಲಕ ಮಾರಿಯರ ಸಂಬಂಧಗಳನ್ನು ಇದು ಸ್ಪಷ್ಟವಾಗಿ ಹೇಳುತ್ತದೆ. ಅಂದರೆ ಮಾರಿಗೆ ಪಶುಪಾಲಕರು ತವರು ಮನೆಯವರು ಇದ್ದ ಹಾಗೆ ಎಂದಂತಾಯಿತು. ಇಂಥ ಮಾರಿ ತನ್ನ ಗಂಡನಿಂದ ಅನ್ಯಾಯ ವಾಯಿತೆಂದು ಉರಿದೆದ್ದಾಗ ಅವಳ ಸಹಾಯಕ್ಕೆ ನಿಂತವರು ತವರು ಸಂಬಂಧದ ಈ ಮ್ಯಾಸಬೇಡರೇ. ಹೀಗಾಗಿ ಬೇಡರಲ್ಲಿ ಮಾರಿಗೆ ಬೆಂಗಾವಲ ಪಡೆಯಂತೆ ರೂಪುಗೊಂಡ ಜನವರ್ಗವೇ-ಪೋತನ ಾಯಕರು. ಮಾರಿಹಬ್ಬದ ಸಂದರ್ಭದಲ್ಲಿ ಇವರ ಪ್ರಧಾನವಾದ ಕೆಲಸವೆಂದರೆ 'ಗಾವು ಸಿಗಿಯುವುದು? 'ಗಾವುಮರಿ' ಅಚ್ಚ ಕಪ್ಪು ಅಥವಾ ಬಿಳಿಯ ಬಣ್ಣದ 'ಹೋತ ಮರಿ' (ಗಂಡು ಆಡುಮರಿ). ಇದರ ಗಂಟಲನ್ನು ಹಲ್ಲುಗಳಿಂದಲೇ ಕಚ್ಚಿ-ಕಚ್ಚಿ ಅದರ ರಕ್ತ-ಮಾಂಸಗಳನ್ನು ಕುಡಿದು-ತಿನ್ನುವ ಭೀಕರವಾದ ಪ್ರಕ್ರಿಯೆಯೇ -'ಗಾವು ಸಿಗಿಯುವುದು'. ಈ ಸಂದಂರ್ಭದಲ್ಲಿ ಹೋತದ ರೀತಿಯಲ್ಲಿ ಮುಖವನ್ನು ಅಲಂಕರಿಸಿಕೊಂಡು, ಹೋತವನ್ನೇ ಸಿಗಿಯುವುದರಿಂದ ಇವರಿಗೆ ಪೋತನಾಯಕರು ಎಂಬ ಹೆಸರು ಬಂದಿರಬೇಕು. ಹಿಂದಿನ ಕಾಲದಲ್ಲಿ ಆನೆ, ಒಂಟೆ, ಕೋಣ, ಹಂದಿಗಳನ್ನೇ 'ಗಾವು ಮರಿ' ಯಾಗಿ ಬಳಸುತಿದ್ದರಂತೆ. ಮಾರಿಹಬ್ಬದ ಉಳಿದ 'ಬಲಿ' ಪ್ರಕ್ರಿಯೆಗಳನ್ನು ಪೂರೈಸುವವನು ಮ್ಯಾಸಬೇಡ ಮೂಲದ ತಳವಾರ ನಾಯಕ. ಆದರೆ ಈ ಬಲಿ ಪ್ರಕ್ರಿಯೆಗಳೆಲ್ಲ ಕೃಷಿಯ ಫಲವತ್ತತೆಗಾಗಿ, ಪಶುಸಂಪತ್ತಿನ ಅಭಿವೃದ್ಧಿಗಾಗಿ ನಡೆಸುವ ಆಚರಣೆಗಳಂತೆ ಕಾಣುತ್ತದೆ. ಬಲಿಯ ನಂತರ ಚೆಲ್ಲುವ 'ಸರಗ' (ಚರಗ)ದ ರಕ್ತಬೆರೆತ ಅನ್ನ ಕೃಷಿಮಾತೆ ಭೂತಾಯಿಯ ತಣಿವಿಗೇ ನಡೆಸಿದ ಆಚರಣೆಯಂತೆ ಕಾಣುತ್ತದೆ. ಭೂ ಶಾಂತಿಯ ಈ ಪ್ರಕ್ರಿಯೆ ಬಹಶಃ ಪಶುಪಾಲಕರು ಕೃಷಿಯತ್ತ ಹೊರಳಿದಾಗ ರೂಪುಗೊಂಡಿರಬೇಕು. ಈ ಬಗೆಯ ಪೋತನಾಯಕ ರನ್ನು ಇನ್ನೊಂದು ಪಶುಪಾಲಕ ಬುಡಕಟ್ಟಾದ ಕಾಡುಗೊಲ್ಲರಲ್ಲೂ ಕಾಣಬಹುದು. ಮಾರಿಯ ಆರಾಧನೆಗೇ ತಮ್ಮನ್ನು ತೆತ್ತುಕೊಂಡ ಉಪ್ಪಾರ (ಮೇಲುಸಕ್ಕರೆಯವರು)ರಲ್ಲೂ ಇದು ಕಂಡು ಬರುತ್ತದೆ.

ಗಾವುಗಳಲ್ಲಿ ಎರಡು ಬಗೆ - ನೆಲಗಾವು (ಅಂದರೆ ಗಾವು ಮರಿಯನ್ನು ನೆಲದ ಮೇಲೆ ಅಂಗಾತ ಮಲಗಿಸಿ ಚೂರಿಯಿಂದ ಕತ್ತು ಕೊಯ್ಯುವುದು - ಈ ಬಗೆಯ ಬಲಿ ಅಪರೂಪ, ಇದು ವಾಸೆಯನ್ನು ಹೋಲುತ್ತದೆ), ಎದ್ದಗಾವು - ಅಂದರೆ ಈ ಬಲಿಕ್ರಿಯೆಯನ್ನು ನಿಂತುಕೊಂಡೇ ತನ್ನ ಹಲ್ಲುಗಳಿಂದ ಗಾವು ಮರಿಯ ಗಂಟಲು ಸಿಗಿಯಬೇಕು. ಇದನ್ನು 'ನಿಂತ ಗಾವು' ಎಂದೂ ಕರೆಯುತ್ತಾರೆ.



ಪೋತರಾಜರು 'ಒಂದೊತ್ತು' (ಕೇವಲ ಹಣ್ಣಿನ ಫಲಾಹಾರ ಮಾಡಿಕೊಂಡು) ಇದ್ದು, ಹೊಳೆಗೆ ಹೋಗಿ ಗಂಗಾಪೂಜೆ ಮಾಡಿ ಅಲ್ಲಿಯೇ ಪೋತರಾಜರ ವೇಷ ಧರಿಸಿಕೊಳ್ಳುತ್ತಾರೆ. ಒಂಭತ್ತು ಸಂಖ್ಯೆಯಲ್ಲಿರುವ ರುದ್ರಾಕ್ಷಿ ಸರ ಕೊರಳನ್ನು ಅಲಂಕರಿಸಿರುತ್ತದೆ. ಕಾಲಿಗೆ ಸೆಲಿಗೆ, ಗಗ್ರಹಾಕಿ, ಕಪ್ಪು ಬಣ್ಣದ ಕಾಸಿ ದಟ್ಟಿಯನ್ನು ಸೊಂಟದ ಮುಂಭಾಗಕ್ಕೆ ಇಳಿಬೀಳುವಂತೆ ಧರಿಸಿ, ಸೊಂಟಕ್ಕೆ ಗಂಟೆಯ ಸರದ ಚರ್ಮಪಟ್ಟಿಯನ್ನು ಕಟ್ಟಿ, ಮೈತುಂಬಾ ಅರಿಶಿನವನ್ನು ಪೂಸಿಕೊಂಡು, ಮುಖಕ್ಕೆ ಮಾತ್ರ ಹೋತನ ಆಕಾರ ಕಾಣುವ ರೀತಿಯಲ್ಲಿ ಅರಿಶಿನ-ಕುಂಕುಮವನ್ನು ಬಳಿದುಕೊಳ್ಳುತ್ತಾರೆ. 'ಗಿರಿಜಾ ಕೂದಲು' ಬೆನ್ನಿನವರೆಗೂ ಸಿಂಹದ ಅಯಾಲಿನಂತೆ ಇಳಿಬಿದ್ದಾಗ 'ಗಿರಿಜಾ ಮೀಸೆ' ತಿರುವುತ್ತಿದ್ದರೆ ಪೋತರಾಜನ ಕಳೆ ವಿಜೃಂಭಿಸುತ್ತದೆ.

ಉರುಮೆ (ಅರೆ) ವಾದ್ಯದವರೊಂದಿಗೆ ಅಲ್ಲಿಂದಲೇ ಕುಣಿಯುತ್ತಾ, ಕೇಕೆ ಹಾಕುತ್ತಾ, ವೀರನಾಟ್ಯ ಮಾಡುತ್ತಾ, ಎರಡೂ ಕೈಯಲ್ಲಿರುವ ಚಾವಟಿಗಳನ್ನು ಝಳಪಿಸುತ್ತಾ, ಮತ್ತೇರಿದವರಂತೆ ಅರ್ಭಟಿಸುತ್ತಾ ಮಾರಿಗುಡಿಯ ಮುಂಭಾಗಕ್ಕೆ ಬಂದು 'ಗಾವು ಸಭೆ' ನಡೆಸುತ್ತಾರೆ. 20-30 ಸಂಖ್ಯೆಯಲ್ಲಿರುವ ಪೋತನಾಯಕರ ಮುಖಂಡ 'ಪೋತರಾಜ' ನಾಗಿ ಕುಳಿತು, ಗಾವು ಸಿಗಿಯಲು ನೆರೆದ ಜನಗಳ ಅಪ್ಪಣೆ ಕೇಳುತ್ತಾನೆ. ಇವನ ಹಿಂದಿರುವ ಪೋತನಾಯಕರ ಪಡೆ ಬೇಗ ಅನುಮತಿಕೊಡುವಂತೆ ಬೊಬ್ಬೆ ಹಾಕತೊಡಗುತ್ತದೆ.

ಜನ ಒಪ್ಪಿಗೆ ಕೊಟ್ಟ ನಂತರ ಮಾರಿಗುಡಿಯ ಮುಂದೆ 'ಗಾವಿನ ಗುಂಡಿ' ತೆಗಿಸಿ, ಅದಕ್ಕೆ ಶಾಸ್ತ್ರೋಕ್ತವಾದ ರೀತಿಯಲ್ಲಿ ಪೂಜೆ ಮಾಡುತ್ತಾರೆ.

ಮರಿಹೋತವನ್ನು ಗಾವಿನ ಗುಂಡಿಯ ಬಳಿ ತಂದು ಮಂತ್ರ ಹಾಕುತ್ತಾರೆ. ಅದು ಸತ್ತ ಹಾಗೆ ನಿಶ್ಚೇತನವಾಗುತ್ತಿದ್ದಂತೆ, ಜನರ ಸಿಳ್ಳು-ಕೇಕೆ ಮುಗಿಲು ಮುಟ್ಟುತ್ತದೆ. ಪೋತರಾಜ

ಗಾವಿನ ಮರಿಯನ್ನು ಎದೆಗೆ ಅವಚಿಕೊಂಡು ಗಾವು ಸಿಗಿಯಲು ಸಿದ್ಧನಾಗುತ್ತಾನೆ. ಇನ್ನಿಬ್ಬರು ಸಹಾಯಕ ಪೋತನಾಯಕರು ಆವನ ಅಕ್ಕ-ಪಕ್ಕ ನಿಂತಿರುತ್ತಾರೆ. ಉಳಿದ ಪೋತನಾಯಕರು ವೀರ ನಾಟ್ಯ ಮಾಡುತ್ತಾ ಅಬ್ಬರಿಸುತ್ತಿರುವಂತೆ, ಗಾವು ಸಿಗಿದು ಅದರ ರಕ್ತ-ಮಾಂಸಗಳನ್ನು ಗಾವಿನ ಗುಂಡಿಗೆ ಉಗಿಯುತ್ತಾನೆ. ರಕ್ತಸಿಕ್ತವಾದ ಪೋತರಾಜನ ಮೋರೆ ಭಯಾನಕವಾಗಿರುತ್ತದೆ.

ಕೊನೆಗೆ ಸತ್ತ ಗಾವಿನ ಮರಿಯ ತಲೆ ಕತ್ತರಿಸಿ ಗಾವಿನ ಗುಂಡಿಗೆ ಹಾಕುತ್ತಾರೆ. ಗಾವು ಮರಿಯ ದೇಹವನ್ನು ಉರುಮೆ ಬಡಿಯುವ ಹೊಲೆಯರಿಗೆ ಪೋತರಾಜರೇ ಕೊಟ್ಟು ಬಿಡುತ್ತಾರೆ. ತಮ್ಮ ಮೈಗೆ ಮೆತ್ತಿಕೊಂಡ ಅರಶಿನ-ಕುಂಕುಮ ತೊಳೆದ ನೀರನ್ನು ಗಾವಿನ ಗುಂಡಿಗೆ ಹರಿಸಿ ಗುಂಡಿ ಮುಚ್ಚಿ ಅನ್ನ-ಮೊಸರಿನ ಎಡೆ ಹಾಕಿ ಶಾಂತಿ ಮಾಡುತ್ತಾರೆ. ನಂತರ 'ತುಂಬು ಉಡಗೊರೆ' ಪಡೆದು ಹೊರಡುತ್ತಾರೆ.

ಪೋತರಾಜರ ಮೂಲನೆಲೆ ದಾವಣಗೆರೆ ಜಿಲ್ಲೆಯ ಜಗಲೂರು ತಾಲ್ಲೂಕಿನ ಆಕನೂರಿನಲ್ಲಿದೆ. ಇಲ್ಲಿರುವ ಪೋತಲಿಂಗೇಶ್ವರ ದೇವಸ್ಥಾನದಲ್ಲಿ ಪೋತರಾಜರಾಗುವವರಿಗೆ ದೀಕ್ಷೆಯನ್ನು ನೀಡಲಾಗುತ್ತದೆ. ಇದು ವಂಶಪಾರಂಪರ್ಯವಾಗಿ ಬರುವ ವೃತ್ತಿಯಾಗಿದ್ದು, ಹಿರಿಯರು ವಯಸ್ಸು ಕಳೆಯುತ್ತಲೇ ತಮ್ಮ ಮಕ್ಕಳನ್ನು ಈ ಕಲೆಯಲ್ಲಿ ತಯಾರು ಮಾಡುತ್ತಾರೆ. ಅವರ ಮದುವೆಗೆ ಮುನ್ನ ಈ ದೀಕ್ಷೆಯನ್ನು ಕೊಡಿಸುತ್ತಾರೆ. ಮದುವೆಯ ನಂತರ ಈ ದೀಕ್ಷೆಯನ್ನು ಕೊಡುವುದಿಲ್ಲ. ಈ ದೀಕ್ಷೆಯನ್ನು ನೀಡುವವರು ಆಶ್ಚರ್ಯಕರವೆಂಬಂತೆ- 'ಐನೋರು'. ತಲೆಯ ಮೇಲೆ ಉಕ್ಕಿನ ಚಾವಟಿ ಇಟ್ಟು ಅದರಿಂದಲೇ ಬೆನ್ನಿಗೆ ಮೂರು ಏಟು ಮುಟ್ಟಿಸುತ್ತಲೇ 'ಮುದ್ರೆ'ಯಾಯಿತು ಎನ್ನುತ್ತಾರೆ. ಕೈಗೆ 'ಮುದ್ರೆ ಸೆಲಿಗೆ' ತೊಡಿಸುತ್ತಾರೆ. ಇದನ್ನು ತೆಗೆಯುವಂತಿಲ್ಲ, ಅದು ದೀಕ್ಷೆಯಾದವರಿಗೆ (ಹೆಣ್ಣಿಗೆ) ತಾಳಿ ಇದ್ದಂತೆ. ಈ ದೀಕ್ಷೆಯಾಗುವಾಗ ಇವರು 'ನಿರ್ವಾಣ' ದಲ್ಲಿದ್ದು, ಸೊಂಟಕ್ಕೆ ಅರಶಿನ ಬಟ್ಟೆ ಮಾತ್ರ ಧರಿಸಿರುತ್ತಾರೆ. ಇವರು ಕಾಲಿಗೆ 'ಸುತ್ತು' (ಮಿಂಚು) ಧರಿಸುವುದಿಲ್ಲ. ಹೆಣ್ಣು ಮಕ್ಕಳು ಪೋತರಾಜನ ಪೋಷಾಕನ್ನು ಮುಟ್ಟುವಂತಿಲ್ಲ. ಇವರೇ ಮುಟ್ಟಿದರೂ ಕೈ-ಕಾಲು ಮುಖ ತೊಳೆದೇ ಮುಟ್ಟಬೇಕು. ಪೋತರಾಜನ ದೀಕ್ಷೆ ಕೊಟ್ಟ ದಿನವೇ ಇವರಿಗೆ 'ಜೋಳಿಗೆ' ಯನ್ನು ಹಾಕುತ್ತಾರೆ, ಅದೇ ದಿನ 'ಪೋತಲಿಂಗನ ಭಿಕ್ಷೆ' ಎಂದು ಭಿಕ್ಷೆ ಎತ್ತಿ ತಂದು ಗುಂಡಿಯ ಮುಂದೆ ಸುರಿಯಬೇಕು. ಈ ಜೋಳಿಗೆ ಹಾಕಿ ಭಿಕ್ಷೆ ಎತ್ತಿ ಜೀವನವನ್ನು ಮಾಡಬಹುದು. ಹಾಗೆ ಮಾಡುವವರು ವರ್ಷಕ್ಕೆ ಒಮ್ಮೆಯಾದರೂ (ಯುಗಾದಿಯ ದಿನ) ಭಿಕ್ಷಾಟನೆ ಮಾಡಲೇಬೇಕು.

ಸಾಂಸ್ಕೃತಿಕ ವೀರರು : ಈಗಾಗಲೇ ಗುಗ್ಗರಿ ಹಬ್ಬದ ಸಂದರ್ಭದಲ್ಲಿ ಪ್ರಸ್ತಾಪಿತವಾದ ದಡ್ಡ ಸೂರನಾಯಕ, ದಿಕ್ಕಿ ಹಬ್ಬದ ಸಂದರ್ಭದಲ್ಲಿ ಪ್ರಸ್ತಾಪಿತವಾದ ಗಾದಿರಿ ಪಾಲನಾಯಕರ ಸಾಂಸ್ಕೃತಿಕ ಬದುಕನ್ನು ಗಮನಿಸಿದ್ದೇವೆ. ಮ್ಯಾಸಮಂಡಲಕ್ಕೊಂದು ಧಾರ್ಮಿಕ ಸ್ವರೂಪವನ್ನು

ಕೊಟ್ಟು, ಬುಡಕಟ್ಟಿನ ನಡೆ-ನುಡಿಗಳನ್ನು ನಿರ್ಧರಿಸಿದ ಮತ್ತಿಬ್ಬರು ಸಾಂಸ್ಕೃತಿಕ ವೀರರನ್ನು ಇಲ್ಲಿ ಗಮನಿಸೋಣ.

**ಕೋರಿ ಯರ್ರಮಂಚನಾಯಕ** : 'ಕೋರಿ' ಎಂದರೆ ಪಶುಪಾಲಕರು ಬಳಸುತ್ತಿದ್ದ ಕಂಬಳಿ. ಇದು ಸದಾ ಇವನ ಹೆಗಲಮೇಲೆ ಇರುತ್ತಿತ್ತು, ಹೀಗಾಗಿ ಅವನ ಹೆಸರಿನ ಹಿಂದೆ 'ಕೋರಿ' ಸೇರಿಕೊಂಡಿವೆ. ಇವನು ಕೂಡ ನಾಯಕನ ಹಟ್ಟಿ ಪಾಳೆಗಾರರ ವಂಶಕ್ಕೆ ಸೇರಿದವನು. ಹಟ್ಟಿ ಪಾಳೆಯಪಟ್ಟನ್ನು ಕಟ್ಟಿದ ಕಾಕಳನಾಯಕನಿಗಿಂತಲೂ ಹಿರಿಯ. ಈ ಹಿರಿತನದ ಕಾರಣದಿಂದಲೇ ಅವನಿಗೆ ಮನೆದೈವವಾದ ಕಾಡ್ಲಕುಂಟೆ (ಇಂದಿನ ಖುದಾಪುರ) ಭೈರವನಿಗೆ (ಬೋರೆ ದೇವರು) ಮೊದಲು 'ವಾಸೆ ಕೊಯ್ಯುವ' ಹಕ್ಕು ಪ್ರಾಪ್ತವಾಗಿತ್ತು. 'ವಾಸೆ' ಎಂದರೆ ಅಚ್ಚ ಕೆಂಪು ಇಲ್ಲವೇ ಕಪ್ಪು ಬಣ್ಣದ 'ಪೋತರಾಜ' ನೆಂದು ಕರೆಸಿಕೊಳ್ಳುವ ಪೋತವನ್ನು 'ಬಾಯಿಬತ'ದಲ್ಲಿ (ಬಾಯಿಗೆ ಬಟ್ಟೆ ಕಟ್ಟಿಕೊಂಡು) ಸೂರ್ಯೋದಯಕ್ಕೆ ಮುನ್ನವೇ ಅಂಗಾತ ಮಲಗಿಸಿ (ಮುಸ್ಲಿಮರು 'ಹಲಾಲು' ಮಾಡುವ ರೀತಿಯಲ್ಲಿ) ಚೂರಿಯಿಂದ ಕತ್ತು ಕುಯ್ಯುತ್ತಾರೆ. ಇದು ಒಂದು ರೀತಿಯಲ್ಲಿ 'ನೆಲಗಾವು' ಪ್ರಕ್ರಿಯೆಯನ್ನೇ ಹೋಲುತ್ತದೆ. ಹೆಣ್ಣು ದೇವತೆಗಳಿಗೆ ನಡೆಯುವ ಬಲಿಯನ್ನು 'ಗಾವು' ಎಂದು ಕರೆದರೆ, ಗಂಡು ದೇವರುಗಳಿಗೆ ಬಲಿ ನೀಡುವ ವಿಧಾನವನ್ನು 'ವಾಸೆ' ಎಂದು ಕರೆದಿದ್ದಾರೆ. ವಾಸೆ ಪ್ರಾಣಿಯ ಮಾಂಸವನ್ನು ಅಣ್ಣ-ತಮ್ಮಂದಿರಿಗೆ ಬಿಟ್ಟರೆ ಬೇರೆ ಯಾರಿಗೂ ಒಂದು ತುಂಡು ಕೊಡುವುದಿಲ್ಲ, ಇದನ್ನು 'ಬಂಗಾರದ ತುಂಡು' ಎನ್ನುತ್ತಾರೆ. ಊಟವಾದ ನಂತರ ಮೂಳೆಗಳನ್ನು ಬಿಸಾಡುವುದಿಲ್ಲ, ನಾಯಿ-ನರಿಗಳು ಮುಟ್ಟಿ ಅಪವಿತ್ರಗೊಳ್ಳಬಾರದೆಂದು ಒಂದು ಗುಂಡಿಯನ್ನು ತೆಗೆದು ಅದರಲ್ಲಿ ಹೂತು ಬಿಡುತ್ತಾರೆ. ಮ್ಯಾಸರಲ್ಲಿ ಇದೊಂದು ಪವಿತ್ರ ಸಂಪ್ರದಾಯ ಎಂಬ ನಂಬಿಕೆ ಇದೆ.

ಭೈರವನನ್ನು 'ಉದ್ಭವ ದೇವರು' ಎಂದು ಕರೆಯುತ್ತಾರೆ. ನೆಲದಿಂದ ಮೇಲಕ್ಕೆ ಒರಟೊರಟಾದ ಕಲ್ಲೊಂದು ಎದ್ದಿದ್ದು, ಅದು ಲಿಂಗಾಕಾರವನ್ನು ಹೋಲುತ್ತದೆ. ಪಶುಪಾಲಕರು ತಮ್ಮ ದನಗಳನ್ನು ಇಲ್ಲಿ ಮಲಗಿಸಿದಾಗ, ದನಗಾಹಿಗಳು ಎತ್ತುಗಳಿಗೆ ಪತ್ತುತ್ತದೆ ಎಂದು ಕಲ್ಲುಚಿಪ್ಪು ಎಗರಿಸಿದರು. ಆಗ ಕನಸಿನಲ್ಲಿ ಭೈರವ ಬಂದು ನಾನಿಲ್ಲಿ ಒಡಮೂಡಿದ್ದೇನೆ ಎಂದು ಹೇಳಿದಾಗ ದೇವರು ಮಾಡಿಕೊಂಡರು.

ಈ ದೇವರಿಗೆ ವಾಸೆ ಕೊಯ್ಯಲು ಯರ್ರಮಂಚನಾಯಕ ಸ್ವಲ್ಪ ತಡವಾಗಿ ಬಂದ. ಅಷ್ಟರಲ್ಲಿ ಕಾಕಳುನಾಯಕ, ಯರ್ರಮಂಚನಾಯಕನ ಕೆಂಪು ಹೋತವನ್ನು ಹಿಂದಿಕ್ಕಿ (ಯರ್ರಮಂಚನಾಯಕ ಕೆಂಪು ಹೋತವನ್ನು ವಾಸೆಗೆ ಬಳಸುತ್ತಿದ್ದುದರಿಂದ ಅವನ ಹೆಸರಿಗೆ 'ಯರ್ರ' ಸೇರಿಕೊಂಡಿದೆ. ತೆಲುಗಿನಲ್ಲಿ ಯರ್ರ ಎಂದರೆ ಕೆಂಪು ಎಂಬ ಅರ್ಥ ಇದೆ) ತನ್ನ ಕಪ್ಪು ಹೋತವನ್ನು ವಾಸೆ ಕೊಯ್ದು ಯರ್ರಮಂಚನಾಯಕನ ಪ್ರಥಮ ಹಕ್ಕನ್ನು ಉಲ್ಲಂಘಿಸಿದ. ಇದಕ್ಕೆ ಒಂದು ಕಾರಣವೂ ಇತ್ತು.



ಯರ್ರಮಂಚನಾಯಕನಿಗೆ ಕೊಳಗಲು ಬೊಮ್ಮ ಎಂಬ ಭಾವಮೈದುನನಿದ್ದ. ಅವನು ದರ್ಪ-ದೌರ್ಜನ್ಯಗಳಿಂದ ಮೆರೆಯುತ್ತಿದ್ದ ಮ್ಯಾಸ ಮಂಡಲದಲ್ಲಿ 'ರಜಸ್ಸು' ಆದ ಪ್ರತಿ ಕನ್ಯೆಯನ್ನು, ಈದ ಪ್ರತಿ ಹಸುವಿನ ಗಿಣ್ಣವನ್ನು, ಮದುವೆಯಾಗುವವರು ಬೆಳ್ಳಿ ರೂಪಾಯಿಯನ್ನು ಅವನಿಗೆ ಅರ್ಪಿಸಬೇಕಿತ್ತು. ಜೊತೆಗೆ ತಮ್ಮ ಪಶುಗಳೊಂದಿಗೆ ತಂದ 12 ಪೆಟ್ಟಿಗೆ ದೇವರುಗಳನ್ನು ತೆಗೆದುಕೊಂಡು ಹೋಗಿ (ಮನುಷ್ಯನ ಮಲ) ನರಕದ ಕೋಟೆಯೊಳಗೆ ಇಟ್ಟು ಅವುಗಳಿಗೆ ಪೂಜೆ ಇಲ್ಲದಂತೆ ಮಾಡಿದ್ದ. ಇವನ ಕಾಟದಿಂದ ಇಡೀ ಮ್ಯಾಸಮಂಡಲವೇ ಬೇಸತ್ತು ಹೋಗಿತ್ತು. ಯರ್ರಮಂಚನಾಯಕನು ಇವನನ್ನು ನಿಯಂತ್ರಿಸಲಿಲ್ಲ, ಸಡಿಲಬಿಟ್ಟಿದ್ದ. ಇದರಿಂದ ಒಳಗೊಳಗೆ ಕುದಿಯುತ್ತಿದ್ದ ಮ್ಯಾಸರ ಹಿರಿಯರು ಕಾಕಳುನಾಯಕನಿಗೆ ಕುಮ್ಮಕ್ಕು ಕೊಟ್ಟು ಯರ್ರಮಂಚನಾಯಕನ ಪ್ರಥಮ ವಾಸೆ ಹಕ್ಕನ್ನು ಉಲ್ಲಂಘಿಸುವಂತೆ ಮಾಡಿದ್ದರು.

ನಂತರ ಬಂದ ಯರ್ರಮಂಚನಾಯಕ ವಾಸೆ ಆಗಿಹೋಗಿರುವುದನ್ನು ನೋಡಿ ತನಗೆ ಅವಮಾನವಾಯಿತು ಎಂದು ನೊಂದ. ನಂತರ ಒಂದೇ ಕಾಯಿ-ಒಂದೇ ಕೆಂಪು ಹೋತ - ಒಬ್ಬನೇ ಹುಡುಗನನ್ನು ಬಳಸಿ ಏಳು ಬಾರಿ ವಾಸೆ ಕುಯ್ದು. ಪ್ರತಿಸಾರಿ ವಾಸೆ ಕುಯ್ದಾಗಲೂ ಹೋತಬದುಕಿ ಬರುತ್ತಿತ್ತು, ಒಡೆದ ಕಾಯಿ ಕೂಡಿಕೊಳ್ಳುತ್ತಿತ್ತು, ಸತ್ತ ಹುಡುಗ ಬದುಕುತ್ತಿದ್ದ! ಹೀಗೆ ಪವಾಡ ಮೆರೆದು ತನ್ನ ಸತ್ಯ ತೋರಿಸಿದ.

ಅಷ್ಟರಲ್ಲಿ ಇಡೀ ಮ್ಯಾಸಮಂಡಲ ಕೊಳಗಲ ಬೊಮ್ಮನ ನಿಗ್ರಹಕ್ಕೆ ಬೋರೇದೇವರ ಮೊರೆ ಬಿತ್ತು. ಬೋಸೆರಂಗನ ಒಕ್ಕಲಿನವನೊಬ್ಬನು ಬೊಮ್ಮನ ನರಕದ ಕೋಟೆ ಹೊಕ್ಕು 12 ಪೆಟ್ಟಿಗೆ ದೇವರುಗಳನ್ನು ಬೋರೆ ದೇವರ ಸನ್ನಿಧಿಗೆ ತಂದ. ಹಿಂದೆಯೇ ಬೊಮ್ಮನ ಸಾವಿನ ಸುದ್ದಿಯೂ ಬಂತು.

ವಾಸೆಯಲ್ಲಿ ಉಂಟಾದ ಅವಮಾನದಿಂದ ಒಳಗೊಳಗೆ ಕುದಿಯುತ್ತಿದ್ದ ಯರ್ರಮಂಚನಾಯಕ ಇನ್ನು ಈ ಮ್ಯಾಸಮಂಡಲದಲ್ಲಿ ಇರಬಾರದೆಂದು 12 ಪೆಟ್ಟಿಗೆ ದೇವರುಗಳಲ್ಲಿ ಒಂದಾದ 'ಪೆದ್ದ ತಿರುಮಲ ದೇವರ'ರನ್ನು ತೆಗೆದುಕೊಂಡು ವೇದಾವತಿ ನದಿಯತ್ತ ಹೊರಟ. ಈ ಸುದ್ದಿ ತಿಳಿದ ಆ ಭಾಗದ ಮ್ಯಾಸಮಂಡಲದವರು, ಯರ್ರಮಂಚನಾಯಕ ಊರು ನಾಯಕರೊಳಗೆ ಸೇರಿ ಬಿಡುತ್ತಾನೆ ಎಂದು ಹೆದರಿ ಅವನನ್ನೇ ನಾಯಕನನ್ನಾಗಿ ಸ್ವೀಕರಿಸುವುದಾಗಿ

ಹೇಳಿದರು. ಗೌರಸಮುದ್ರ (ಐವೋಜಿ ಮಠ), ಬೇಡರಡ್ಡಿಹಳ್ಳಿ, ಬುಕ್ಕಾಂಬೂದಿ ಮುಂತಾಗಿ ಈ ಭಾಗದಲ್ಲಿದ್ದ ಮ್ಯಾಸರಿಗೂ, ಕಾಕಾಳನಾಯಕನ ನಾಯಕತ್ವದ ಅಧೀನದಲ್ಲಿದ್ದ ಮ್ಯಾಸರಿಗೂ ಅಂದಿನಿಂದ 'ತರಿಮರ' (ಸಂಬಂಧ ಕತ್ತರಿಸು) ಕಡಿಯಿತು.

ಯರ್‍ರಮಂಚನಾಯಕ ತಂದ ದೇವರು ಬೇಡರೆಡ್ಡಿ ಹಳ್ಳಿಯಲ್ಲಿ ನೆಲೆಸಿತು. ವಿಭೂತಿ ಪುರುಷನಾಗಿದ್ದ ಶರಣ ಯರ್‍ರಮಂಚನಾಯಕ - 'ಒಂದೇ ನೀತಿಗೆ ಕುಲಗೋತ್ರ ಭೇದವಿಲ್ಲದೆ ಎಲ್ಲರನ್ನು ಒಂದೇ 'ಮೊಕ್ಕು' (ನಮಸ್ಕಾರ) ಮುಗಿಸ್ತಿನಿ' ಎಂದು ಪ್ರತಿಜ್ಞೆಮಾಡಿ ಗೌರಸಂದ್ರ ತುಮ್ಮಲಿನಲ್ಲಿರುವ ಹುತ್ತದ ರೂಪದ ಮಾರಿದೇವತೆಗೆ ಪೌಳಿ ಕಟ್ಟಿಸಿ ದೀಪಸ್ತಂಭ ನೆಡಿಸಿ, ಮಾರಿ ಜಾತ್ರೆ ಮಾಡಿಸಿ 'ಜ್ಯೋತಿ' ಹೊತ್ತಿಸಿ ಎಲ್ಲರೂ ಕೈಮುಗಿಯುವಂತೆ ಮಾಡಿ ಮಹಿಮೆ ಮೆರೆದ. ವಾಸೆ ಕೊಯ್ದಾಗ ಮಾಡುವ 'ಸೂರ್‍ಕನ ಮೊಕ್ಕು' ಆಚರಣೆಯ ಮೂಲಕ ಮ್ಯಾಸರು ಯರ್‍ರಮಂಚನಾಯಕನಿಗೆ ಗೌರವ ತೋರಿಸಿದರು. ಗೌರಸಂದ್ರ ಗಡ್ಡೆ (ಪ್ರದೇಶ)ಯನ್ನು 'ಯರ್‍ರಮಂಚನಾಯಕನ ಗಡ್ಡೆ' ಎನ್ನುತ್ತಾರೆ.

ಯರ್‍ರಮಂಚನಾಯಕ ಮತ್ತು ಅವನ ತಮ್ಮ ಯರ್‍ರಗೊಡ್ಲಯ್ಯ ಅವರು ಚಳ್ಳಕೆರೆ ತಾಲ್ಲೂಕಿನ ಓಬನಹಳ್ಳಿಯಲ್ಲಿ ಸಮಾಧಿ ಹೊಕ್ಕರು ಎಂದು ಹೇಳುತ್ತಾರೆ. ಈಗ ಇಲ್ಲಿ ಇರುವ ಗುಡಿಯಲ್ಲಿ ಬಾಗಿಲು ಹಾಕಿಕೊಂಡೇ ಪೂಜೆ ಮಾಡುತ್ತಾರೆ. ಈ ಪ್ರದೇಶದಲ್ಲಿರುವ ಯರ್‍ರಮಂಚನ ಾಯಕನ ಒಕ್ಕಲಿನವರು ತಮ್ಮ ಮದುವೆಗಳಲ್ಲಿ ಕಳಸ ಹಿಡಿಯುವುದಿಲ್ಲ, ತಾಳಿ ಕಟ್ಟುವುದಿಲ್ಲ-ಮಣಿ ಮಾತ್ರ ಕಟ್ಟುತ್ತಾರೆ, ಕಾಲ ಬೆರಳಿಗೆ 'ಮಿಂಚು' ಹಾಕುವುದಿಲ್ಲ! ಕಾಕಳನಾಯಕನ ಒಕ್ಕಲಿನವರು ಇವರಿಗೆ ಸಹೋದರ ಸಂಬಂಧಿಗಳೇ ಆದರೂ 'ತರಿಮರ' ಕಡಿದದ್ದರಿಂದ ಬೇರೆ ಸಂಪ್ರದಾಯವನ್ನೇ ಹಿಡಿದರು. ಅಣ್ಣ-ತಮ್ಮಂದಿರ ಜಗಳ ಹೀಗೆ ಬುಡಕಟ್ಟಿನ ಒಡಕಿಗೆ ಕಾರಣವಾಗಬಲ್ಲದೆಂಬುದಕ್ಕೆ ಇದು ಒಳ್ಳೆಯ ನಿದರ್ಶನ.

**ಜಗಲೂರು ಪಾಪನಾಯಕ** : ಇವನೂ ಕಡೂಡ ನಾಯಕನಹಟ್ಟಿ ಪಾಳೆಯಪಟ್ಟಿಗೆ ಸೇರಿದವನು. ಗಾದಿರಿ ಪಾಲನಾಯಕ ಇವನಿಗೆ ಚಿಕ್ಕಪ್ಪನಾಗಬೇಕು. ಇವನು ಹುಟ್ಟಿದ ಸ್ಥಳವು ನನ್ನಿವಾಳದ ಬಳಿಯೇ ಇದೆ. ಅಲ್ಲಿ ಒಂದು ಕಲ್ಲುಬೆನವನನ್ನು ಮಾಡಿ ಪೂಜಿಸುತ್ತಾರೆ. ಇವನು ಸಮಾಧಿಯಾದ ಜಗಲೂರು, ಅವನು ಹೆಸರಿನೊಂದಿಗೆ ಸೇರಿಕೊಂಡಿದೆ. ದನಗಾಹಿಯಾಗಿ ಬೆಳೆದವನು. 'ದುಗ್ಗಾಣಿ' (ನಾಣ್ಯ)ಯಿಂದಲೇ ತಿರುಪತಿಗೆ ಹೋಗಿ ವೆಂಕಟರಮಣನ ದರ್ಶನ ಮಾಡಿ, ಅಲ್ಲಿಯೂ ಪವಾಡಗಳನ್ನು ಮೆರೆದು ಬಂದವನು. ಅವಿವಾಹಿತನಾಗಿ ಶರಣ ಜೀವನವನ್ನು ನಡೆಸಿದವನು. ಮ್ಯಾಸಬೇಡರ ಅನೇಕ ದೇವರ ಗದ್ದುಗೆಗಳನ್ನು ಸ್ಥಾಪಿಸಿದವನು. ಬೋಸೆದೇವರ ಹಟ್ಟಿಯಲ್ಲಿ ಬೋಸೆರಂಗನನ್ನು, ಚಿಕ್ಕಕುಮ್ಮಿಯಲ್ಲಿ ಕಂಪಳರಂಗನ ಗದ್ದುಗೆಗಳನ್ನು ಸ್ಥಾಪಿಸಿದವನು.

ಹಿಂದೆ 12 ಪೆಟ್ಟಿಗೆ ದೇವರುಗಳೊಂದಿಗೆ ಮುಕ್ಕಣ್ಣನ ಕಠಾರಿ, ಸೂರ್ಯನಂದನ ಕಠಾರಿ, ಸಿಡಿಲು ಮಿಂಚಿನ ಕಠಾರಿ - ಎಂಬ ಮೂರು ಕಠಾರಿಗಳು ಬಂದಿರುತ್ತವೆ. ಆದರೆ ಅವು ಎಲ್ಲೆಲ್ಲೋ ಚೆದುರಿ ಯಾರ್‍ಯಾರದೋ ಪಾಲಾಗಿರುತ್ತವೆ. ಈ ಕಠಾರಿಗಳನ್ನು ಭೂಸ್ಥಾಪನೆ

ಮಾಡುವವರೆಗೂ ನಮ್ಮ ಮ್ಯಾಸಮಂಡಲಕ್ಕೆ ಏಳಿಗೆ ಇಲ್ಲ, ದನಕರುಗಳು ಅಭಿವೃದ್ಧಿ ಯಾಗೋಲ್ಲ ಎಂದು ಕನಸಿನಲ್ಲಿ ಹೇಳಿದಂತಾಗುತ್ತದೆ. ಆ ಕಠಾರಿಗಳನ್ನು ಹುಡುಕುತ್ತಾ, ಬುಡಕಟ್ಟನ್ನು ಸಂಘಟಿಸುತ್ತಾ, ಅವರಿಗೊಂದು ಬುಡಕಟ್ಟು ಸಂವಿಧಾನವನ್ನು ಭೋದಿಸುತ್ತಾ ಇಡೀ ಮ್ಯಾಸಮಂಡಲವನ್ನು ತನ್ನ ಪಶುಗಳೊಂದಿಗೆ ಸುತ್ತುತ್ತಾನೆ.

ಸೂರ್ಯನಂದನ ಕಠಾರಿಯನ್ನು ತಂದು, ಅಲ್ಲಿರುವ ರಾಕ್ಷಸಿಯನ್ನು ಸಂಹರಿಸಿ ಚಳ್ಳಕೆರೆ ಸಮೀಪದ ಗೊರ್ಲಕಟ್ಟೆಯ ಕೆರೆಯ ಹಿಂದುಗಡೆ ಸ್ಥಾಪಿಸುತ್ತಾನೆ. ಈಗ ಅದೊಂದು ಜಗಲೂರಜ್ಜನ ಗದ್ದಿಗೆ ಆಗಿದೆ. ಮುಕ್ಕಣ್ಣನ ಕಠಾರಿಯನ್ನು ತೆಗೆದುಕೊಂಡು ಹೋಗಿ ಕಂಪಳರಂಗನ ಗುಡಿ ಬಳಿ ಗದ್ದಿಗೆ ಮಾಡಿ ಸ್ಥಾಪಿಸುತ್ತಾನೆ. ಸಿಡಿಲು ಮಿಂಚಿನ ಕಠಾರಿ-ಜಗಲೂರು ಪಾಳೆಯಗಾರ ಜಗಪತಿರಾಜನಲ್ಲಿ ಸೇರಿರುತ್ತದೆ. ಅದನ್ನು ಪಡೆಯಲು ತನ್ನ ಪ್ರಾಣವನ್ನೇ ಪಣವಾಗಿಟ್ಟು ಹೋರಾಡಿ, ಅನೇಕ ಪವಾಡಗಳನ್ನು ಮೆರೆದು, ಕಠಾರಿಯೊಂದಿಗೆ ಭೂಮಿಯಲ್ಲಿ ಐಕ್ಯನಾಗುತ್ತಾನೆ. ಮ್ಯಾಸಮಂಡಲದ ಉದ್ಧಾರಕ್ಕೋಸ್ಕರ ದುಡಿದ ಧರ್ಮವೀರ ನಾಗುತ್ತಾನೆ.

ಸಾಂಸ್ಕೃತಿಕ ವೀರರನ್ನು ಸ್ಮರಿಸುವಂತೆ, ಮ್ಯಾಸಮಂಡಲದಲ್ಲಿ ಅನೇಕ ಜನ-ಸೂರನ ನಾಯಕ, ಪಾಲನಾಯಕ, ಪಾಪನಾಯಕ, ಯರಮಂಚನಾಯಕರ ಹೆಸರುಗಳನ್ನು ಇಟ್ಟುಕೊಂಡು ಭಕ್ತಿಗೌರವಗಳನ್ನು ತೋರುವುದು ಕಾಣಬಹುದು.

ಹನ್ನೆರಡು ಪೆಟ್ಟಿಗೆ ದೇವರುಗಳು : ಹುಲ್ಲು-ನೀರು ಹುಡುಕುತ್ತಾ ಅಲೆಮಾರಿಗಳಾಗಿದ್ದ ಮ್ಯಾಸಬೇಡರು, ಸಂಚಾರ-ಸಾಗಾಣಿಕೆಗೆ ಅನುಕೂಲವಾಗಲೆಂದು ಬಿದಿರ ಪೆಟ್ಟಿಗೆಗಳಲ್ಲಿ ಇಟ್ಟ ದೈವಗಳೇ -ಪೆಟ್ಟಿಗೆ ದೇವರುಗಳು. ಇವುಗಳ ಸಂಖ್ಯೆ 'ಹನ್ನೆರಡು' ಇದ್ದುದರಿಂದ ಹನ್ನೆರಡು ಪೆಟ್ಟಿಗೆ ದೇವರುಗಳೆಂದು ಹೆಸರಾಗಿವೆ. ಈ ಮೂಲ ದೈವಗಳಿಂದ ಅದೇ ಹೆಸರಿನ ಅನೇಕ ದೈವಗಳನ್ನು ಮಾಡಿಕೊಂಡಿದ್ದಾರೆ.

ಪಶುಪಾಲಕರು ಹಿಂದೆ ವಲಸೆ ಬಂದಾಗ ತಮ್ಮ ಜೊತೆಯಲ್ಲೇ ತಂದ ಈ ದೇವರುಗಳಲ್ಲಿ ಶೈವ-ವೈಷ್ಣವ ದೈವಗಳೂ ಸಮಸಂಖ್ಯೆಯಲ್ಲಿ ಇರುವುದನ್ನು ನೋಡಿದರೆ ಶೈವ-ವೈಷ್ಣವಗಳ ದಿವ್ಯಸಂಗಮವನ್ನು ಕಾಣಬಹುದು. ಈ ದೈವಗಳು ಚೆದುರಿದಂತೆ ನೆಲಸಿರುವ ವಿವರಗಳು ಹೀಗಿವೆ.

ವೈಷ್ಣವ ದೈವಗಳು : ಕಂಚೋಬಳಿದೇವರು (ಮಾಕನಡುಕು, ಕೂಡ್ಲಿಗಿ ತಾ.), ಅಲಿಕಿ ಓಬಳಿ ದೇವರು (ಹುಣಸೇಕಟ್ಟೆ, ಚಿತ್ರದುರ್ಗ ತಾ.), ಚಳ್ಳಕೆರೆ ತಾಲ್ಲೂಕಿನಲ್ಲಿ-ನಲ್ಲಜರವು ಓಬಳದೇವರು (ರುದ್ರಮ್ಮನಹಳ್ಳಿ), ಬೋಸೆ ರಂಗಸ್ವಾಮಿ (ಬೋಸೆದೇವರಹಟ್ಟಿ), ಪೆದ್ದ ತಿರುಮಲದೇವರು (ಬೇಡರೆಡ್ಡಿಹಳ್ಳಿ).

ಶೈವ ದೈವಗಳು: ಚಿತ್ರಲಿಂಗೇಶ್ವರ (ಉಡೇಗೊಳ, ರಾಯದುರ್ಗ ತಾ., ಅನಂತಪುರ ಜಿ. ಆಂಧ್ರಪ್ರದೇಶ), ಜಗಲೂರು ತಾಲ್ಲೂಕಿನಲ್ಲಿ, ಸೂರಲಿಂಗೇಶ್ವರ (ಕಾಮಗೇತಲಹಳ್ಳಿ), ಪೋತಲಿಂಗೇಶ್ವರ (ಆಕನೂರು), ಚಳ್ಳಕೆರೆ ತಾಲ್ಲೂಕಿನಲ್ಲಿ, ಕಾಟಂಲಿಂಗೇಶ್ವರ (ಕಾಟಪ್ಪನಹಟ್ಟಿ, ಚಳ್ಳಕೆರೆ ಟೌನ್), ಬೊಮ್ಮಲಿಂಗೇಶ್ವರ (ಗೌರಸಮುದ್ರ), ಹಾಗೂ ಶಕ್ತಿ ದೇವತೆಯಾದ ದಡ್ಡಮಾರಮ್ಮ (ದೇವರಹಳ್ಳಿ)



ಪಾಮುಂಡ್ಲ ಬೆಡಗಿನ ಮ್ಯಾಸರ ದೈವ ಗುರುನಾಥ, ಚಳ್ಳಕೆರೆ ತಾಲ್ಲೂಕಿನ ಓಬನಹಳ್ಳಿಯಲ್ಲಿದೆ. ಕಂಪಳರಂಗ ಮೊಳಕಾಲ್ಮೂರು ತಾಲ್ಲೂಕಿನ ಚಿಕ್ಕ ಕುಮ್ಮಿಯಲ್ಲಿದೆ. ಈ ಎರಡು ದೈವಗಳು ' ಪೆಟ್ಟಿಗೆ ದೇವ್ರುಗಳಲ್ಲಿ ಸೇರಿಲ್ಲ.

ಸಾಮಾನ್ಯವಾಗಿ ಮ್ಯಾಸಬೇಡರ ಬಿದಿರ 'ಪೆಟ್ಟಿಗೆ ದೇವರು' ಗಳನ್ನು ಬಿಟ್ಟರೆ . ಬೇರೆ ದೈವಗಳು ತ್ರಿಶೂಲ, ಗಣೆ, ಅಲಗು (ಕತ್ತಿ), ಬಿಲ್ಲಿನ ರೂಪಗಳಲ್ಲಿ ಇರುವುದೇ ಹೆಚ್ಚು.

ಸಜೀವವಾಗಿದ್ದಾಗಲೇ ಗೊಂಡೆ ಮಣಕದ ಚರ್ಮ ಸುಲಿದು ತಯಾರಿಸುವ 'ದಗಮು' ವಾದ್ಯ ಕೂಡ ದೈವದ ಸ್ಥಾನ ಪಡೆದಿದೆ. ಇದು ಮ್ಯಾಸಬೇಡರ ಅನೇಕ ದೈವಗಳಿಗೆ ಪ್ರೀತಿಯ ವಾದ್ಯ.

ಕಲ್ಲು ಬೆನವಗಳನ್ನು, ದೈವ ನೆಲಸಿದ ಮರಗಳನ್ನು. ಅದರಲ್ಲೂ ವಿಶೇಷವಾಗಿ ಬೇವಿನ ಮರವನ್ನು, ಗತಿಸಿ ಹೋದ ಹಿರಿಯರನ್ನು, ವೀರರನ್ನು ಪೂಜಿಸುವ ಸಂಪ್ರದಾಯ ಇದೆ.

ಬಹಳಷ್ಟು ಪೆಟ್ಟಿಗೆ ದೇವರುಗಳಿಗೆ ನಾಗಾಭರಣದ ಅಲಂಕಾರವಿರುತ್ತದೆ. ಹೀಗಾಗಿ ಇವರು ಹುತ್ತವನ್ನು, ಸರ್ಪವನ್ನು, ಹುತ್ತದ ರೂಪದಲ್ಲೇ ಆರಾಧನೆಗೊಳ್ಳುವ ಗೌರಸಂದ್ರ ಮಾರಮ್ಮನನ್ನು ಪೂಜಿಸುತ್ತಾರೆ.

ಮ್ಯಾಸರ ಎಲ್ಲ ದೈವಗಳಿಗೂ ಬೇಡರೇ ಪೂಜಾರಿಗಳಾಗಿರುತ್ತಾರೆ.

ಜನಪದ ಸಾಹಿತ್ಯ : ಆಶ್ಚರ್ಯಕರವೆಂಬಂತೆ ತೆಲುಗು ಮೂಲದ, ತೆಲುಗು ಮನೆ ಮಾತಿನ ಇವರಿಗೆ ತೆಲುಗಿನ ಜನಪದ ಸಾಹಿತ್ಯ ಇಲ್ಲವೇ ಇಲ್ಲ - ತೀರಾ ಒಂದೆರಡು ಬೆರಳೆಣಿಯ ಪ್ರಸಂಗಗಳನ್ನು ಬಿಟ್ಟರೆ. ಇರುವ ಅಲ್ಪ-ಸ್ವಲ್ಪ ಜನಪದ ಸಾಹಿತ್ಯವೆಲ್ಲ ಕನ್ನಡದ್ದೇ.

ಅದೂ ಮ್ಯಾಸಬೇಡರು ಹಾಡುವುದೂ ಅಪರೂಪವೇ. ಹಾಡುವ ಕಲಾವಿದರೆಲ್ಲ ಮ್ಯಾಸರೊಂದಿಗೆ ಬದುಕುತ್ತಿರುವ ಅನ್ಯ ಜಾತಿಯ ಜನಗಳೇ ಆಗಿದ್ದಾರೆ. ಹಾಗಾದರೆ ಈ ಸಾಹಿತ್ಯವನ್ನೂ ಕಟ್ಟಿದವರೂ ಅವರೇ ಇರಬೇಕು. ಖಂಡ ಕಾವ್ಯ, ಮಹಾಕಾವ್ಯ, ರೂಪುಗೊಳ್ಳುವಂತಹ ಸಾಂಸ್ಕೃತಿಕ ವೀರರು ಇದ್ದು ಅವರ ಬಗ್ಗೆ ತುಣುಕು ಹಾಡುಗಳು ಬಿಟ್ಟರೆ ಪುಟ್ಟ ಕಥನ ಕಾವ್ಯಗಳೂ ರಚನೆಗೊಂಡಿಲ್ಲ-ಗಾದಿರಿ ಪಾಲನಾಯಕನ ತ್ರಿಪದಿ ಕಾವ್ಯವನ್ನು ಹೊರತುಪಡಿಸಿದರೆ, ಯಾಕೆ ಹೀಗಾಯಿತು? ಈ ಸಾಂಸ್ಕೃತಿಕ ಬಿಕ್ಕಟ್ಟಿನ ಕಾರಣಗಳನ್ನು ಇನ್ನೂ ಶೋಧಿಸಬೇಕಿದೆ. ಆದರೆ ಬೇಡರು ಆಚರಣಾತ್ಮಕ ನೆಲೆಯಲ್ಲಿ ಪಶುಪಾಲಕ ಸಂಸ್ಕೃತಿಯ ಸಮೃದ್ಧ ವಿವರಗಳನ್ನು ಇಟ್ಟುಕೊಂಡಿರುವುದು ಒಂದು ವಿಸ್ಮಯವೇ ಸರಿ.

ಸಾಮಾಜಿಕ ಸ್ಥಿತಿ-ಗತಿ : ಅತ್ಯಂತ ಶೋಚನೀಯ ಸ್ಥಿತಿಯಲ್ಲಿದೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಅತ್ಯಂತ ದುರ್ಬಲರಾಗಿರುವ ಇವರನ್ನು ಸರ್ಕಾರ 'ಎಸ್.ಟಿ.' ಎಂಬ ಸವಲತ್ತಿನ ಮೂಲಕ ಗುರುತಿಸಿದೆ. ಆದರೆ ವಿಶೇಷ ಬುಡಕಟ್ಟು ಯೋಜನೆಗಳು ಮಾತ್ರ ಇವರನ್ನು ಹಿಡಿದೆತ್ತಬಲ್ಲವು.

ಶಿಷ್ಟ ಸಂಸ್ಕೃತಿಯ ಅನುಕರಣೆ ಎಂಬಂತೆ ಮೇಲ್ವರ್ಗದ ಜಾತಿಗಳ ರೀತಿಯಲ್ಲಿ ತಮ್ಮದೇ 'ಮಠ' ವನ್ನು ಕಟ್ಟಿ, 'ಸ್ವಾಮಿ'ಯನ್ನು ಮಾಡಿಕೊಂಡಿದ್ದಾರೆ. ಆದರೆ ಸಾಗಬೇಕಾದ ದಾರಿ ಬಹಳ ದೂರವಿದೆ.

ತೆಲುಗು ಅವರ ಮನೆಗಳಿಗೆ ಮಾತ್ರ ಸೀಮಿತವಾಗಿದೆ, ಹೊರಗೆ ಕನ್ನಡ ಸಂಸ್ಕೃತಿಯಲ್ಲಿ ಬೆರೆತು ಹೋಗಿದ್ದಾರೆ. ಆದರೆ ಸಿಂಹಪಾಲು ಕನ್ನಡದಿಂದ ಕೂಡಿದ ಅವರ 'ಕಂದೆಲುಗು' ಭಾಷಾಸಕ್ತರ ಕುತೂಹಲ ಕೆರಳಿಸುವಂತಿದೆ.

ಮ್ಯಾಸಬೇಡರು ಭಾರತದ ಭವ್ಯ ಪಶುಪಾಲಕ ಪರಂಪರೆಯ ಪಳೆಯುಳಿಕೆಗಳಂತೆ ಬದುಕುತ್ತಿದ್ದರೂ, ಆಚರಣೆಗಳಲ್ಲಿ ಪಶುಪಾಲಕ ಸಂಸ್ಕೃತಿಯನ್ನು ಇನ್ನೂ ಜೀವಂತವಾಗೇ ಇಟ್ಟುಕೊಡಿದ್ದಾರೆ.

(ಈ ಲೇಖನಕ್ಕೆ ಆಗತ್ಯವಾದ ಮಾಹಿತಿಗಳನ್ನು ಒದಗಿಸುವಲ್ಲಿ ಸಹಕರಿಸಿದ ಕರ್ನಾಟಕ ಸರ್ಕಾರದ ಮಾಜಿ ಮಂತ್ರಿಗಳಾದ ತಿಪ್ಪೇಸ್ವಾಮಿ, ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತರಾದ ಪಿ. ತಿಪ್ಪೇಸ್ವಾಮಿ, ಚಿತ್ರದುರ್ಗದ ಪಾಳೆಯಗಾರ ಅರಸರ ವಂಶಸ್ಥರಾದ ಪಿ.ಆರ್. ವೀರಭದ್ರನಾಯಕರಿಗೆ ಕೃತಜ್ಞನಾಗಿದ್ದೇನೆ.)

* ಪ್ರಜಾವಾಣಿ ದೀಪಾವಳಿ ವಿಶೇಷಾಂಕ, 2002.

# ನಾಯಕನಹಟ್ಟಿ ಪಾಳೆಯಗಾರರ ವಂಶಾವಳಿ- ಒಂದು ಮರುಪರಿಶೀಲನೆ

ನಾಯಕನಹಟ್ಟಿ-ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿದೆ. ಈಗ ಹೋಬಳಿ ಕೇಂದ್ರವಾಗಿರುವ ನಾಯಕನ ಹಟ್ಟಿ ತಾಲ್ಲೂಕು ಕೇಂದ್ರ ಚಳ್ಳಕೆರೆಯಿಂದ ವಾಯುವ್ಯ ದಿಕ್ಕಿನಲ್ಲಿದ್ದು, ಸುಮಾರು 22 ಕಿ.ಮೀ.ಗಳ ಅಂತರದಲ್ಲಿದೆ.

ನಾಯಕನಹಟ್ಟಿ ಪಾಳೆಯಗಾರರನ್ನು ಕುರಿತು ದೊರೆಯುವ ಮೊದಲ ದಾಖಲೆ- ಇಲ್ಲಿಯವರೆಗೆ 'ಬಖೈರು' ಎಂದು ತಪ್ಪಾಗಿ ಕರೆಸಿಕೊಳ್ಳುತ್ತಿದ್ದ 'ನಾಯಕನಹಟ್ಟಿ ದೊರೆಗಳ ವಂಶಾವಳಿ'[1] ಮತ್ತು ಒಂದೆರೆಡು ಶಿಲಾಶಾಸನ ಹಾಗೂ ತಾಮ್ರಶಾಸನಗಳು ಮಾತ್ರ. ಈ ಮೂಲ ದಾಖಲೆಯನ್ನು ಆಧರಿಸಿಯೇ ಎಂ.ವಿ. ಚಿತ್ರಲಿಂಗಯ್ಯನವರು 'ನಾಯಕನಹಟ್ಟಿ ಬಖೈರು - ಕೆಲವು ಟಿಪ್ಪಣಿಗಳು'[2] ಎಂಬ ಮೂರು ಕಂತುಗಳ ಸುದೀರ್ಘ ಲೇಖನ ಬರೆದು ಈ ದಾಖಲೆಯ ಇಂಚು ಇಂಚನ್ನು ಪರಾಮರ್ಶೆಗೆ ಒಳಪಡಿಸಿದರು. ಆದರೆ ಎಂ.ವಿ. ಚಿತ್ರಲಿಂಗಯ್ಯನವರ ವಿಶ್ಲೇಷಣೆ ಎಷ್ಟೋ ಬಾರಿ ಊಹಾತ್ಮಕ ಲಹರಿಯಲ್ಲೇ ಸಾಗುತ್ತದೆ, ತಮ್ಮ ಅಭಿಪ್ರಾಯಗಳಿಗೆ ಸಮರ್ಥನೆಯಾಗಿ ಸರಿಯಾದ ದಾಖಲೆಗಳನ್ನೇ ನೀಡುವುದಿಲ್ಲ!

---

1. ಇದೇ ವಂಶಾವಳಿಯನ್ನು ಈ ಹಿಂದೆ ಎಂ. ಎಸ್. ಪ್ರಭಾಕರ್ ಅವರು 'ಚಂದ್ರವಳ್ಳಿ' (ಸಂ. ಡಾ॥ ಎಂ. ವಿ. ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ, 1979) ಎಂಬ ಗ್ರಂಥದಲ್ಲಿ ಪೀಠಿಕೆಯೊಂದಿಗೆ 'ನಾಯಕನ ಹಟ್ಟಿ ಬಖೈರು' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದರು. ಎಲ್ಲರೂ ಈ ದಾಖಲೆಯನ್ನು ಬಖೈರು ಎಂಬ ಹೆಸರಿನಿಂದಲೇ ಗುರುತಿಸುತ್ತಾ ಬಂದಿದ್ದರು. ಆದರೆ ಇತ್ತೀಚೆಗೆ ಈ ದಾಖಲೆಯನ್ನು ಪ್ರೊ ॥ ಬಿ. ರಾಜಶೇಖರಪ್ಪನವರು ಮರು ಓದಿಕೆಗೆ ಒಳಪಡಿಸಿದಾಗ ಅನೇಕ ಹೊಸ ಅಂಶಗಳು ಬೆಳಕಿಗೆ ಬಂದುವಲ್ಲದೆ (ಎಂ. ಎಸ್. ಪ್ರಭಾಕರ್ ಅವರ ತಪ್ಪು ಓದಿಕೆಯಿಂದ ಅನೇಕ ವಿಷಯಗಳು ಅಪವ್ಯಾಖ್ಯಾನಕ್ಕೆ ಒಳಗಾಗಿದ್ದವು), ಅವರು ಈ ದಾಖಲೆಗೆ 'ನಾಯಕನ ಹಟ್ಟಿ ದೊರೆಗಳ ವಂಶಾವಳಿ' ಎಂದು ಮರುನಾಮಕರಣ ಮಾಡಿದುದು ಸರ್ವಮಾನ್ಯವಾಗಿದೆ, ನಾನು ಇದನ್ನೇ ಪುರಸ್ಕರಿಸಿದ್ದೇನೆ.
2. ವಾಲ್ಮೀಕಿ ಸಂದೇಶ : ಜುಲೈ, ಆಗಸ್ಟ್, ಸೆಪ್ಟೆಂಬರ್,1987ರ ಸಂಚಿಕೆಗಳನ್ನು ಗಮನಿಸಿ. ಅಲ್ಲದೆ 'ಬಿಚ್ಚುಗತ್ತಿ' ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಗಿರುವ ಅವರ 'ನಾಯಕನಹಟ್ಟಿ ಪಾಳೆಯಗಾರರು' ಲೇಖನವನ್ನು ಈ ಸಂದರ್ಭದಲ್ಲಿ ಗಮನಿಸಬಹುದು.

ಅವರ ಅತಿ ಉತ್ಸಾಹದ ವ್ಯಾಖ್ಯಾನ ಅಪವ್ಯಾಖ್ಯಾನಗಳಿಗೂ ದಾರಿ ತೆರೆಯುತ್ತದೆ. ಅವರು ಸಂಯಮ ಸಮತೋಲನಗಳನ್ನು ಕಾಯ್ದುಕೊಂಡಿದ್ದರೆ ಇದೊಂದು ಮೌಲಿಕ ಲೇಖನವಾಗುತ್ತಿತ್ತು.

ಡಾ॥ ಡಿ.ಎನ್. ಯೋಗೀಶ್ವರಪ್ಪ[3] ಅವರು ಈ ದಾಖಲೆಯನ್ನೇ 'ವಂಶಾವಳಿ' ಎಂದು ಕರೆಯುತ್ತಾ ವಿಶ್ಲೇಷಿಸುವ ಪ್ರಯತ್ನ ನಡೆಸಿದ್ದಾರೆ. ಆದರೆ ಇಂತಹ ವಿಶ್ಲೇಷಣೆಗೆ ಯಾವಾಗಲು ಬೆಲೆ ಬರುವುದು-ಆದಕ್ಕಾಗಿ ಮಾಡಬಹುದಾದ ಕ್ಷೇತ್ರ ಕಾರ್ಯದಿಂದ. ಅದಿಲ್ಲದ ಅವರ ಪ್ರಯತ್ನ ಹೆಚ್ಚಿನ ವಿಷಯಗಳೇನನ್ನೂ ತಿಳಿಸುವುದಿಲ್ಲ. ಬಿ.ಎಲ್. ರೈಸರೂ ಕೂಡ ಹಟ್ಟಿ ಪಾಳೆಯಗಾರರನ್ನು ಕುರಿತು ನೀಡುವ ಕೆಲವು ವಿವರಗಳು, ಈ ದಾಖಲೆ ನಾಯಕನ-ಹಟ್ಟಿ ಚರಿತ್ರೆಯನ್ನು ಬರೆಯುವಲ್ಲಿ ಪ್ರಮುಖ ಆಕರವಾಗಿ ನಿಲ್ಲುತ್ತದೆ[4].

ಹಟ್ಟಿ ಪಾಳೆಯಗಾರರ 'ವಂಶಾವಳಿ'ಯ ಕತೆ ಒಂದು ಜನಪದ ಕತೆಯಂತೆ ಪ್ರಾರಂಭವಾಗುತ್ತದೆ. ಇದೊಂದು ಪಾಳೆಯಪಟ್ಟಿನ ಕತೆ ಎಂಬುದನ್ನು ಮನದಟ್ಟು ಮಾಡುತ್ತಾ ಹೋಗುವ ರೀತಿ ಕುತೂಹಲಕರವಾದುದು. 'ಬೇಟೆ ಸಂಸ್ಕೃತಿ'ಗೆ ಸೇರಿದವರು ಎಂದು ಭಾವಿಸಲ್ಪಡುವ ಮ್ಯಾಸಬೇಡರು ಮೂಲತಃ ಪಶುಪಾಲಕರೇ ಆಗಿದ್ದರು ಎಂಬುದನ್ನು ಅನೇಕ ವಿವರಗಳೊಂದಿಗೆ ಈ ವಂಶಾವಳಿ ಶೃತಪಡಿಸುತ್ತಾ ಹೋಗುವ ಪರಿ ಅನೇಕ ಅಚ್ಚರಿಗಳನ್ನು ತೆರೆಯುತ್ತದೆ. ಜೊತೆಗೆ ಚರಿತ್ರೆಯನ್ನು ಬೇರೊಂದು ನಿಟ್ಟಿನಿಂದ ಕಟ್ಟಲು ಇಲ್ಲಿಯ ಐತಿಹ್ಯಗಳ ಜಾನಪದ ಮೂಲ ಸಾಮಾಗ್ರಿಯಾಗಿ ಹೇಗೆ ಒದಗಬಲ್ಲದೆಂಬುದನ್ನು ತಿಳಿಸುತ್ತಾ ನಮ್ಮನ್ನು ಅಧ್ಯಯನದ ಹೊಸ ತಿರುವಿಗೆ ತರುತ್ತದೆ. ಈ ಗೋಪಾಲಕ ವಲಸೆಗಾರರೊಂದಿಗೆ ಹೊರಟ ಅವರ ಅಲೆಮಾರಿ ಹನ್ನೆರಡು ಪೆಟ್ಟಿಗೆ ದೇವರುಗಳ ಕತೆಯೂ ತಳಕು ಹಾಕಿಕೊಂಡು ಅವರ ಸಂಸ್ಕೃತಿಯ ಕತೆಯೂ ಆಗಿಬಿಡುವುದರೊಂದಿಗೆ ನಮ್ಮನ್ನೊಂದು ರೋಮಾಂಚಕಾರಿ ಘಟ್ಟಕ್ಕೆ ತಂದು ನಿಲ್ಲಿಸುತ್ತದೆ.

ಹಟ್ಟಿ ಪಾಳೆಯಗಾರ ಮೂಲ ಪುರುಷನ ಕತೆ ಶ್ರೀಶೈಲದ ಸಮೀಪದ ಕರೀಮಲೆ, ಬಳೀಮಲೆಗಳ ಕಾಡಿನಲ್ಲಿ ಬಣಿಕೆ ಲಕ್ಷ ಕಂಪಳ (ಗುಂಪು) ಇಟ್ಟುಕೊಂಡು ಪಶುಪಾಲನೆಯಲ್ಲಿ

---

3. 1999ರ ಇತಿಹಾಸ ಅಕಾಡೆಮಿ ಸಂಚಿಕೆ ಗಮನಿಸಿ.

4. ಇದೇ ದಾಖಲೆಯನ್ನು ಆಧರಿಸಿ ನಾನು ಬರೆದ 'ನಾಯಕನಹಟ್ಟಿ ಪಾಳೆಯಗಾರರು: ಒಂದು ಮುನ್ನೋಟ' ಎಂಬ ಪ್ರಬಂಧವನ್ನು ಬಹಳ ಹಿಂದೆ ಮಿಥಿಕ್ ಸೊಸೈಟಿ, ಬೆಂಗಳೂರು ಏರ್ಪಡಿಸಿದ್ದ 'ಕರ್ನಾಟಕ ಪಾಳೆಯಗಾರರು' ವಿಚಾರ ಸಂಕಿರಣದಲ್ಲಿ ಮಂಡಿಸಿದ್ದೆ. ಅದನ್ನೇ ಮತ್ತಷ್ಟು ಹೊಸ ವಿಚಾರಗಳೊಂದಿಗೆ ಪರಿಷ್ಕರಿಸಿ ಹಂಪಿ ಕನ್ನಡ ವಿಶ್ವವಿದ್ಯಾಲಯ ತುಮಕೂರಿನಲ್ಲಿ ಏರ್ಪಡಿಸಿದ್ದ 'ಕರ್ನಾಟಕದ ಸ್ಥಾನಿಕ ಪ್ರಭುಗಳು' ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧವನ್ನೇ ಈಗ ಮತ್ತಷ್ಟು ವಿಸ್ತರಿಸಿ ಹೆಚ್ಚಿನ ಮಾಹಿತಿಯೊಂದಿಗೆ ಇಲ್ಲಿ ನೀಡಿದ್ದೇನೆ.

ಪರಮಾರ್ಥವನ್ನು ಕಾಣುತ್ತಾ ಇದ್ದ ಕಾಟಮಲ್ಲನಾಯಕನೊಂದಿಗೆ ಪ್ರಾರಂಭವಾಗುತ್ತದೆ. ಹಟ್ಟಿ ಪಾಳೆಯಪಟ್ಟಿನ ಮೂಲಪುರುಷ ತೆಲುಗು ಮೂಲದ ಬೇಡ ಜಾತಿಗೆ ಸೇರಿದವನೆಂದು ಸ್ಪಷ್ಟವಾಗುತ್ತದೆ. ಅಲ್ಲಿ ತಲೆದೋರಿದ ಭೀಕರ ಕ್ಷಾಮ ಡಾಮರಗಳಿಗೆ ಹೆದರಿ ತನ್ನ 12 ಪೆಟ್ಟಿಗೆ ದೇವರು, ದನಕರು, 500ಜನ ಮೇಸರ್ರು[5] ಸಹಿತ ತನ್ನ 6 ಜನ ತಮ್ಮಂದಿರೊಂದಿಗೆ ಹುಲ್ಲು-ನೀರು ಹುಡುಕುತ್ತಾ ವಿಜಯನಗರದತ್ತ (ಆನೆಗೊಂದಿ?) ವಲಸೆ ಬರುತ್ತಾನೆ. ಈ ಕಾಲವನ್ನು ಎಂ. ಎಸ್. ಪ್ರಭಾಕರ್ ಅವರು ಕ್ರಿ.ಶ. 14ನೇ ಶತಮಾನದ ಮಧ್ಯಭಾಗ ಎಂದು ಗುರುತಿಸಿದರೆ, ಎಂ. ವಿ. ಚಿತ್ರಲಿಂಗಯ್ಯನವರು ದಾಖಲೆಯಲ್ಲಿ ಉಲ್ಲೇಖಿತವಾಗಿರುವ ಕಾಲದೋಷವನ್ನು ಎತ್ತಿ ತೋರಿಸುತ್ತಾ ಇದು ಸರಿಸುಮಾರು ಕ್ರಿ.ಶ. 1529 ಇರಬೇಕು ಎನ್ನುತ್ತಾರೆ. ಆದರೆ ಬಹಳಷ್ಟು ವಿದ್ವಾಂಸರು ಈ ಕಾಲವನ್ನೂ ಒಪ್ಪುವುದಿಲ್ಲ, ಬಹುಶಃ ಇದು ಕ್ರಿ.ಶ. 16ನೇ ಶತಮಾನದ ಕೊನೆ ಇರಬಹುದು ಎಂದು ತರ್ಕಿಸುವುದೇ ಸತ್ಯಕ್ಕೆ ಸಮೀಪ ಇದ್ದಂತಿದೆ.

'ಗುರು ಗುಹೇಶ್ವರ ಬೆಟ್ಟಕ್ಕೆ ಪೂರ್ವಭಾಗ ಯೇಳು ಜಂಬ್ಬಿ । ಜಂಬ್ಬಿಗೆ ಹಳ್ಳ ಋಷಿಗಳ ಮಧ್ಯದಲ್ಲಿ ಯೀ ಕಂಪಳಕ್ಕೆ ಹಟ್ಟಿಯಿಟ್ಟುಕೊಂಡು' ಇರುವ ಜಾಗ ಹಂಪೆಯ ಸುತ್ತಿನ ಪರಿಸರವನ್ನು ನಿರ್ದೇಶಿಸುವಂತಿದೆ. ಇಲ್ಲಿ ವಿಜಯನಗರವನ್ನು ವಿದ್ಯಾನಗರ ಎಂದು ಕರೆದಿರುವುದು ಗಮನಾರ್ಹ. ಆದರೆ ಆಗ ವಿಜಯನಗರವನ್ನು ಯಾವ ದೊರೆ ಪಾಲಿಸುತ್ತಿದ್ದನೆಂಬುದು ಸ್ಪಷ್ಟವಾಗುವುದಿಲ್ಲ. ಆದರೆ ದೊರೆಗಳ ಅನುಮತಿಯಿಲ್ಲದೆ ಹಟ್ಟಿ ಹಾಕಿಕೊಂಡು ಇದ್ದ ಇವನನ್ನು ವಿಜಯನಗರದವರು ಕೆಣಕುವ ಪ್ರಸಂಗವೂ ಒಂದು ಜನಪದ ಕತೆಯಂತೆ ನಿರೂಪಿತಗೊಂಡಿದೆ. ಸೆರೆ ಹಿಡಿಯಲು ಬಂದ ವಿಜಯನಗರದ ಸೈನ್ಯ-ಕಂಪಳದ ದನಗಳ ಆಕ್ರಮಣದಿಂದ ಕಂಗಾಲಾಗಿ ಕಾಲು ಕೀಳುತ್ತದೆ. ತಮ್ಮ ಮೋಹಪಾಶದಿಂದ ಬಂಧಿಸಲು ಬಂದ 32 ಜನ ಸೂಳೆಯರು ವಿಫಲಗೊಂಡಾಗ, ವಿಜಯನಗರದ ದೊರೆ(?) ಭಟ್ಟಿಮೂರ್ತಿಯಿಂದ ಸೌಹಾರ್ದ ಏರ್ಪಡುತ್ತದೆ. ವಿಜಯನಗರದ ದೊರೆ ಇವನ ಶರಣ ವ್ಯಕ್ತಿತ್ವ, ಪಶು(ಗೋ)ಪಾಲನೆಯ ಕೈಂಕರ್ಯದಿಂದ ಸಂತೋಷಗೊಂಡು ತಮ್ಮ ರಾಜ್ಯಾದ್ಯಂತ ಎಲ್ಲಿಬೇಕೆಂದರಲ್ಲಿ ಕಂಪಳ ಇಟ್ಟುಕೊಂಡಿರಲು ಅನುಮತಿ ನೀಡುವುದರೊಂದಿಗೆ ಆವನನ್ನು ವಾಲ್ಮೀಕಿ ಕುಲದ ಜನಗಳ ದೊರೆಯಾಗಿ ನೇಮಿಸಿದುದಲ್ಲದೆ ಲಗ್ನ ಮುಂತಾದ ಕಾರ್ಯಗಳಲ್ಲಿ ಇವರಿಗೆ ಗೌರವ ಸೂಚಕವಾದ ಕುಲಮರ್ಯಾದೆಯ ಆಯವನ್ನು ಗೊತ್ತು ಮಾಡುತ್ತಾನೆ. ವಂಶಾವಳಿ ಇಂಥ ಸಾಂಸ್ಕೃತಿಕ ವಿವರಗಳನ್ನು ನೀಡುವ ಐತಿಹಾಸಿಕ ಅಂಶಗಳನ್ನು ತಿಳಿಸುವುದರೊಂದಿಗೆ ಸಾಂಸ್ಕೃತಿಕ ಮಹತ್ವವನ್ನು ಪಡೆದುಬಿಡುತ್ತದೆ.

---

5. ಬೇಡರೊಂದಿಗೆ ಸೇರಿಕೊಂಡಿರುವ 'ಮ್ಯಾಸ' ಶಬ್ದದ ನಿಷ್ಪತ್ತಿಯನ್ನು ಈ ಪದ ನಿರ್ದೇಶಿಸುತ್ತದೆ ಅನಿಸುತ್ತದೆ; ಪಶುಗಳನ್ನು 'ಮೇಯಿಸುವವರು › ಮೇಸುವವರು › ಮೇಸರ್ರು' ಕ್ರಮೇಣ 'ಮ್ಯಾಸ' ಆದಂತೆ ತೋರುತ್ತದೆ. ಈ 'ಮ್ಯಾಸ' ಎಂಬ ಶಬ್ದ ಅವರ ಪಶುಪಾಲಕ ವೃತ್ತಿ ಮೂಲದಿಂದಲೇ ಬಂದಿರಬೇಕೆಂಬುದನ್ನು ಇಂದಿಗೂ ಅವರಲ್ಲಿ ದಟ್ಟವಾಗಿ ಉಳಿದುಕೊಂಡು ಬಂದಿರುವ ದೇವರೆತ್ತು, ಕಿಲಾರಿ ಮುಂತಾದ ಪಶುಪಾಲಕ ಸಂಪ್ರದಾಯಗಳೇ ಹೇಳುತ್ತವೆ.

ವಿಜಯನಗರದವರಿಂದ ಮಾನ-ಸನ್ಮಾನಗಳನ್ನು ಹೊಂದಿ ಹೊರಟ ಕಾಟಮಲ್ಲ ನಾಯಕ ಕುಂದಿರ್ಪೆ ಗುಡ್ಡದ ಬಳಿಗೆ ಬಂದು ಹಟ್ಟಿ ಹಾಕಿಕೊಂಡು ಬೀಡುಬಿಡುತ್ತಾನೆ. ಜೊತೆಯಲ್ಲಿ ಹೊರಟ ಇವನ ತಮ್ಮಂದಿರೂ ಕುಂದಿರ್ಪೆ ಸೇರಿದಂತೆ ಅದರ ಸುತ್ತಿನ ಸೀಮೆಗಳಾದ ರತ್ನಗಿರಿ, ಮಿಡಿಗೇಶಿ, ಹೊಸಕೋಟೆ, ನಿಡಗಲ್ಲು, ಶಂಕರಕಲ್ಲುಗಳಲ್ಲಿ ಚದುರಿದಂತೆ ನೆಲಸುತ್ತಾರೆ. ಕ್ರಮೇಣ ಈ ನೆಲೆಗಳೇ ಪಾಳೆಯಪಟ್ಟುಗಳಾಗಿ ವಿಕಾಸಗೊಂಡಂತೆ ಕಾಣುತ್ತವೆ. ಹೀಗಾಗಿ ಈ ಎಲ್ಲ ಪಾಳೆಯಪಟ್ಟುಗಳೊಂದಿಗೆ ನಾಯಕನಹಟ್ಟಿಯವರದು ಸೋದರ ಸಂಬಂಧವಿದ್ದಂತೆ ಕಾಣುತ್ತದೆ.

ಕಾಲಾಂತರದಲ್ಲಿ ಮಲ್ಲನಾಯಕ ಹಟ್ಟಿಯನ್ನು ಕುಂದಿರ್ಪೆಯಿಂದ ಗೋಸಿಕೆರೆಗೆ ಸ್ಥಳಾಂತರಿಸುತ್ತಾನೆ. (ಈ ಹಿಂದೆ ವಲಸೆ ಬಂದ ಕುಂಚಿಟಿಗ ಒಕ್ಕಲಿಗರು, ಕಾಡು ಗೊಲ್ಲರು, ಮ್ಯಾಸಬೇಡ ಜನಾಂಗಗಳ ನಾಯಕತ್ವ ವಹಿಸಿದ್ದ ವಿಭೂತಿಪುರುಷ ಶ್ರೀ ಗುರು ಸಾರ್ವಡೇಶ್ವರ ಸ್ವಾಮಿಗಳ ಸಮಾಧಿ ಗೋಸಿಕೆರೆಯಲ್ಲಿದ್ದು, ಇವರು ಆ ಜನಾಂಗಗಳ 'ಕುಲಗುರು'ಗಳಾಗಿರುವುದು ಗಮನಾರ್ಹ. ಇವರ ಸಮಾಧಿಯ ಮೇಲೆ ಶಿವ ಷಟ್‌ಚಕ್ರ ಭಂಗಿಗಳನ್ನು ಹೊಂದಿದ ಪಟ್ಟಿಕೆಯುಳ್ಳ ಅಪೂರ್ವ ಶಿವಲಿಂಗವನ್ನು ಸ್ಥಾಪಿಸಲಾಗಿದ್ದು, ಇದು ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವ ಪಡೆದಿರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.) ಇಲ್ಲಿ ಇವನಿಗೆ ಮೂವರು ಗಂಡು ಮಕ್ಕಳು ಜನಿಸುತ್ತಾರೆ. ಹಿರಿಯವನು ಸೂರೆದೇವಿನ ಪಾಪನಾಯ್ಕ, ಮಧ್ಯದವನು ತೊರ್ರೆಲ ಮಲ್ಲನಾಯ್ಕ, ಕೊನೆಯವನು ಗಾದರ್ರ ಪಾಲನಾಯ್ಕ.

ಇವನು ಗೋಸಿಕೆರೆ ಬಳಿ ಪಶುಪಾಲನೆ ಮಾಡುತ್ತಿರುವಾಗ ತನ್ನ ಜೀವರಾಶಿಯನ್ನು ಮುಟ್ಟದಿರುವಂತೆ ಹುಲಿಯೊಂದಿಗೆ ಒಪ್ಪಂದ ಮಾಡಿಕೊಂಡಿರುತ್ತಾನೆ. ಹೀಗಾಗಿ ಇವನ ದನದ ದೊಡ್ಡಿಯಲ್ಲಿ ಹಸು ಕರುಗಳೊಂದಿಗೆ ಹುಲಿಯ ಮರಿಗಳೂ ಇರುತ್ತವೆ! ಈ ಒಪ್ಪಂದದ ಅರಿವಿಲ್ಲದ ಇವನ ಬಂಧುಗಳು ದೊಡ್ಡಿಯಲ್ಲಿರುವ ಹುಲಿಯ ಮರಿಗಳನ್ನು ಕೊಲ್ಲುತ್ತಾರೆ. ವ್ಯಾಘ್ರಗೊಂಡ ಹುಲಿ ತನ್ನನ್ನು ಬಿಡುವುದಿಲ್ಲವೆಂದು ಪಾಲನಾಯಕ ಜನ-ಜಾನುವಾರು, ಪತ್ನಿ ಕೆಂಚವ್ವ-ಕಾಮವ್ವರೊಂದಿಗೆ ನನ್ನಿವಾಳದ ಕಟ್ಟೆಮನೆಯ ಮೂಲಕ ಗಾದಿರಿ ಗುಡ್ಡಕ್ಕೆ ಹೋಗುತ್ತಾನೆ. ಅಲ್ಲಿಗೂ ಅಟ್ಟಿಸಿಕೊಂಡು ಹೋದ ಹುಲಿಯೊಂದಿಗೆ ಕದನ ನಡೆದು ಮಡಿಯುತ್ತಾನೆ. ಈ ಗಾದಿರಿಗುಡ್ಡ ಹೊಳಲ್ಕೆರೆ ತಾಲ್ಲೂಕಿನ ಮಿಂಚೇರಿ ಬಳಿ ಇದೆ. ಈತನಿಗೆ ಸಂತತಿ ಇಲ್ಲ, ಇವನನ್ನು ಮ್ಯಾಸಬೇಡ ಜನಾಂಗದ ಪ್ರಥಮ ಸಾಂಸ್ಕೃತಿಕವೀರ ಎಂದು ಗುರುತಿಸಲಾಗಿದೆ. ಇಂದಿಗೂ ನನ್ನಿವಾಳದ ಸುತ್ತಿನ ಹಟ್ಟಿಗಳಲ್ಲಿ ಗಾದಿರಿ ಪಾಲನಾಯಕ ಮತ್ತು ಹುಲಿಯನ್ನು ಬಂಗಾರ ದೇವರು (ಹುಲಿಯ ಮೂರ್ತಿಯನ್ನು ಬಂಗಾರದಲ್ಲಿ ಮಾಡಿಸಿರುವುದರಿಂದ 'ಬಂಗಾರ ದೇವರು' ಎಂದು ಕರೆಯುತ್ತಾರೆ.) ಎಂಬ ಹೆಸರಿನಲ್ಲಿ ಪೂಜಿಸುತ್ತಾರೆ.

ಮಧ್ಯದ ತೊರ್ರೆಲ ಮಲ್ಲನಾಯ್ಕನ ಮಗ ಜಗಲೂರು ಪಾಪನಾಯಕ, ಈತನನ್ನು ಮ್ಯಾಸಬೇಡ ಜನಾಂಗದ ಮತ್ತೊಬ್ಬ ಸಾಂಸ್ಕೃತಿಕ ವೀರನೆಂದು ಗುರುತಿಸಲಾಗಿದೆ. ಈತನ ಸಾಂಸ್ಕೃತಿಕ ನೆಲೆಯೊಂದು ಚಳ್ಳಕೆರೆ ಪಟ್ಟಣದ ಹೊರವಲಯದಲ್ಲಿದೆ. ಈ ಪರಿಸರದಲ್ಲೇ

ಪಶುಪಾಲನೆ ಮಾಡಿಕೊಂಡಿದ್ದ ಪಾಪನಾಯಕ ಮಂಗಾರದೊಣ್ಣೆ ಚಿಗುರಿಸುವ ಪವಾಡ ಮೆರೆದ ನೆಲೆಯನ್ನೇ ಇಂದು ಪೂಜಿಸಲಾಗುತ್ತಿದೆ. ಇಲ್ಲಿ ಈತ ಹುತ್ತದ ರೂಪದಲ್ಲಿ ಆರಾಧನೆಗೊಳ್ಳುತ್ತಿದ್ದಾನೆ. ಈತ ಜಗಲೂರಿನಲ್ಲಿ ಸಮಾಧಿಯಾಗಿರುವುದರಿಂದ ಈತನಿಗೆ 'ಜಗಲೂರಜ್ಜ' ಎಂಬ ಅನ್ವರ್ಥನಾಮವೂ ಪ್ರಚಾರದಲ್ಲಿದೆ. ಈತ ಕೂಡ ಶರಣನಾಗಿದ್ದರಿಂದ ಸಂತತಿ ಇಲ್ಲ. ಈ ಇಬ್ಬರು ಸಾಂಸ್ಕೃತಿಕ ವೀರರು ನಾಯಕನ ಹಟ್ಟಿ ಪಾಳೆಯಗಾರರ ವಂಶಕ್ಕೆ ಸೇರಿದವರು ಎಂಬುದು ಇತಿಹಾಸದ ದೃಷ್ಟಿಯಿಂದ ಒಂದು ಹೊಸ ಸಂಗತಿ.

ಹಿರಿಯ ಮಗ ಸೂರದೇವನ ಪಾಪನಾಯ್ಕನನ್ನು ನಿಡಗಲ್ಲಿನಲ್ಲಿ ನೆಲೆಸಿದ್ದ ತನ್ನ ಪೂರ್ವಿಕರ ವಂಶದ ಹೊಟ್ಟೆಳನಾಯ್ಕ ಬಂದು ಕಂಪಳದ ಪಶುಗಳು, ಹಾಗೂ ಹನ್ನೆರಡು ಪೆಟ್ಟಿಗೆ ದೇವರುಗಳು ತಮಗೇ ಸೇರಬೇಕೆಂದು 'ಲಡಾಯಿ ಮೊಕದ್ದಮೆ'ಗೆ ಬಂದ ಕಾರಣ ಅಮೂಲ್ಯ ವಸ್ತುಗಳನ್ನು 'ಸಂಣ ಕಂಬದ ದಿನ್ನೆ'ಯಲ್ಲಿ ನೆಲಮಾಳಿಗೆ ಮಾಡಿಸಿ ಬಚ್ಚಿಡುತ್ತಾನೆ. ಆದರೆ ಈ ಸ್ಥಳ ಯಾವುದೆಂಬುದು ತಿಳಿಯುತ್ತಿಲ್ಲ. ಇವರಿಬ್ಬರಿಗೂ ಬೈರೇದೇವರ ಜಾತ್ರೆಯಲ್ಲಿ ಶೂಲದ ಮರ ಚಿಗುರಿಸುವ ಸ್ಪರ್ಧೆ 'ಚಿಂತಾಗುಟ್ಲು' (ಇದನ್ನು ಇಂದಿನ ಖುದಾಪುರ ಎಂದು ಗುರುತಿಸುತ್ತಾರೆ.) ಎಂಬಲ್ಲಿ ನಡೆದು ಪಾಪನಾಯ್ಕನೇ ಗೆಲ್ಲುತ್ತಾನೆ. ಸೋತ ಹೊಟ್ಟೆಳನಾಯ್ಕ ತನ್ನ ಹಕ್ಕು ಬಿಟ್ಟುಕೊಟ್ಟು ನಿಡಗಲ್ಲಿಗೆ ಹೋಗುತ್ತಾನೆ. ನಂತರ ಈ 12 ಪೆಟ್ಟಿಗೆ ದೇವರುಗಳು, ಇಂದಿನ ಮೊಳಕಾಲ್ಮುರು ತಾಲ್ಲೂಕಿನಲ್ಲಿರುವ ಚಿಕ್ಕಕುಮ್ಮಿ (ಇದನ್ನು 'ಕಂಪಳ ದೇವರ ಹಟ್ಟಿ'ಯೆಂದೇ ಕರೆಯುವುದು ವಾಡಿಕೆ)ಯಲ್ಲಿ ನೆಲಸಿದಂತೆ ಕಾಣುತ್ತದೆ. ಇಲ್ಲಿಯವರೆಗೂ ಒಂದು ರೋಚಕ ಜನಪದ ಕತೆಯಂತೆ ಸಾಗಿ ಬಂದ ವಂಶಾವಳಿ ಮುಂದಕ್ಕೆ ನಾಯಕನಹಟ್ಟಿ ಪಾಳೆಯಪಟ್ಟಿನ ವಂಶದ ಕತೆಯನ್ನು ಹೆಚ್ಚು ತಿರುವುಗಳಿಲ್ಲದೆ ನೇರವಾಗಿ ತಿಳಿಸುತ್ತದೆ.

ಸೂರದೇವಿನ ಪಾಪನಾಯ್ಕನ ಮಗ ಕಾಕಾಳನಾಯ್ಕ ಎಂಬುವವನು ಗೋಸಿಕೆರೆಯಿಂದ ತನ್ನ ಕಂಪಳವನ್ನು 12 ಪೆಟ್ಟಿಗೆ ದೇವರುಗಳೊಂದಿಗೆ, ಈಗಿನ ನಾಯಕನಹಟ್ಟಿ ಇರುವ ಜಾಗಕ್ಕೆ ತಂದು ನೆಲೆ ನಿಲ್ಲುತ್ತಾನೆ. ಹೀಗಾಗಿ ಈ ಸ್ಥಳದಲ್ಲಿ ಈ 'ನಾಯಕ' ತನ್ನ ದನಕರುಗಳ 'ಹಟ್ಟಿ' ಇಟ್ಟು ಸುತ್ತಿನ ಗಿಡಗಂಟೆ ವನಾಂತ್ರ ಕಡಿದು ನೆಲೆಸಿದ್ದರಿಂದ ಇದು 'ನಾಯಕನ ಹಟ್ಟಿ'ಯಾಯಿತು. ಹೀಗಾಗಿ ಕಾಕಾಳನಾಯ್ಕನನ್ನೇ 'ಹಟ್ಟಿ ಪಾಳೆಯಗಾರರ ಮೂಲಪುರುಷ'ನೆನ್ನಬೇಕಾಗುತ್ತದೆ. ಈ ಮುಂಚೆ ಈ ಸ್ಥಳವನ್ನು ಬೂದಿಹಳ್ಳಿಯೆಂದೂ, ಬೂದ್ಯಾಳು ಚಂದ್ರಗಿರಿಯೆಂದೂ, ಚಂದ್ರಗಿರಿ ಭಾನುಕೋಟೆಯೆಂದು ನಾನಾ ಹೆಸರುಗಳಿಂದ ಕರೆಯುತ್ತಿದ್ದರೆಂದು ಸ್ಥಳೀಯ ಐತಿಹ್ಯಗಳು ಹೇಳುತ್ತವೆ. ಆದರೆ ಕಾಲಾಂತರದಲ್ಲಿ 'ನಾಯಕನಹಟ್ಟಿ' ಎಂಬ ಹೆಸರೇ ನೆಲೆ ನಿಂತಂತೆ ಕಾಣುತ್ತದೆ. ಹಟ್ಟಿಯ ವಿಸ್ತೀರ್ಣ ಮೊದಲಿಗೆ ಈಗಿನ ಗೌಡಗೆರೆ (ಮೊದಲು ಇದೇ ಗಡಿ ಆಗಿದ್ದುದರಿಂದ ಇದನ್ನು ಗಡಿಗೆರೆ ಎಂದು ಕರೆಯುತ್ತಿದ್ದರೆಂದು ಐತಿಹ್ಯಗಳು ಹೇಳುತ್ತವೆ.)ಯವರೆಗೂ ಮಾತ್ರ ಇದ್ದುದು ಕ್ರಮೇಣ ಇದು 32 ಹಳ್ಳಿ ಗ್ರಾಮ ಕಸಬೆಗೆ ವಿಸ್ತರಿಸಿದುದನ್ನು ವಂಶಾವಳಿಯೇ ಹೇಳುತ್ತದೆ.

ಕಾಕಾಳನಾಯಕನಿಗೆ ದೊಡ್ಡೆರಪ್ಪನಾಯಕ ('ದೊಡ್ಡ' ಎಂಬುದು ತೆಲುಗು ಶಬ್ದವಾಗಿದ್ದು ದನಗಳ 'ದೊಡ್ಡಿ' ಎಂಬ ಅರ್ಥವಿದೆ.)ಎಂಬ ಮಗನಿದ್ದ. ಇವನಿಗೆ ಗಿಡ್ಡೆರಪ್ಪನಾಯ್ಕ ಎಂಬ

ಮಗ. ಇವನು ಕಂಪಳದೇವರಿಗೆ ಮುತ್ತಿನ ಕಾಲುಪೆಂಡೆ ಮಾಡಿಸುತ್ತಾನೆ. ಇವನ ಮಗ ದೊಡ್ಡ ಮಲ್ಲಪ್ಪನಾಯಕ-ಇವನಿಗೆ ಬಸವಮಲ್ಲಪ್ಪನಾಯ್ಕ, ಬೋಡಿ ಮಲ್ಲಪ್ಪನಾಯ್ಕ ಎಂಬ ಇಬ್ಬರು ಮಕ್ಕಳು, ಅದಾವ ಕಾರಣಕ್ಕೋ ದೊಡ್ಡ ಮಲ್ಲಪ್ಪನಾಯಕನ ಎರಡನೆ ಮಗ ಬೋಡಿ ಮಲ್ಲಪ್ಪನಾಯ್ಕನಿಗೆ ದೊರೆತನ ಪ್ರಾಪ್ತವಾದಂತೆ ಕಾಣುತ್ತದೆ. ಇವನ ಕಾಲದಲ್ಲಿ ನಾಯಕನಹಟ್ಟಿ ತನ್ನ ಸರ್ವತೋಮುಖ ಬೆಳವಣಿಗೆಯನ್ನು ಕಾಣುತ್ತದೆ. ಇವನಿಗೆ ಚಿತ್ರದುರ್ಗದ ಚಿಕ್ಕಳನಾಯ್ಕರ ತಂಗಿ ಸರ್ಜಮ್ಮನಾಗತಿಯನ್ನು (ಪ್ರಭಾಕರ ಅವರು ಗಿರಿಜಮ್ಮ ನಾಗತಿ ಎಂದು ತಪ್ಪಾಗಿ ಓದಿದ್ದಾರೆ.) ಕೊಟ್ಟಿದ್ದುದರಿಂದಲೋ ಏನೋ ಇವನು ಪ್ರವರ್ಧಮಾನಕ್ಕೆ ಬರಲು ಚಿತ್ರದುರ್ಗದ ಪಾಳೆಯಗಾರರೂ ಸಹಕರಿಸಿದಂತೆ ಕಾಣುತ್ತದೆ. ಇವನ ಸಹೋದರಿಯಾದ ಹಟ್ಟಿ ಮಲ್ಲವ್ವ ನಾಗತಿ ರಾಜಾ ಚಿಕ್ಕಣ್ಣ ನಾಯಕನ ಅನೇಕ ಪತ್ನಿಯರಲ್ಲಿ ಒಬ್ಬಳಾಗಿದ್ದಂತೆ ತಿಳಿದು ಬರುತ್ತದೆ. ವೈವಾಹಿಕ ಸಂಬಂಧಗಳ ಮೂಲಕ ಅತ್ಯಂತ ಬಲಿಷ್ಠರಾದ ಚಿತ್ರದುರ್ಗದ ಪಾಳೆಯಗಾರರು ನೆಂಟರಾಗಿದ್ದರಿಂದ ಹಟ್ಟಿಯವರೊಂದಿಗೆ ಸೌಹಾರ್ದಯುತವಾದ ಮಧುರ ಸಂಬಂಧಗಳೇ ಇದ್ದವು.

ಆನೆಗೊಂದಿ ರಾಜರ ಮರ್ಯಾದೆಗೆ ಕುಂದು ಉಂಟಾಗದಂತೆ ಊರ ಬಾಗಿಲಿಗೆ ತನ್ನ ಇಜಾರ ಕಟ್ಟಿಸಿ ಮೆರೆಯುತ್ತಿದ್ದ ಭೀಮಾಜಟ್ಟಿ ಎಂಬುವವನನ್ನು ಸೋಲಿಸಿದ ಬೋಡಿ ಮಲ್ಲಪ್ಪನಾಯ್ಕನಿಗೆ ಆನೆಗೊಂದಿ ರಾಜರಾದ ರಾಮರಾಜು ತಿರುಮಲರಾಜದೇವನು ಬುಕ್ಕಸಾಗರ-ಹರಿಯಸಮುದ್ರ ಗ್ರಾಮಗಳನ್ನು, ಇವೆರಡರ ನಡುವೆ ಇದ್ದ, ಕಳಸಾಪುರದ ಗ್ರಾಮವನ್ನು ಅದರ ಸಮೀಪವೇ ಇದ್ದ ಕಾಮಲಾಪುರದ ಕೆರೆಯ ಕೆಳಗಿನ 3 ಖಂಡುಗದ ಬೀಜಾವರಿ ಭೂಮಿಯನ್ನು ಉಂಬಳಿಯಾಗಿ ಕೊಟ್ಟ ವಿಚಾರವನ್ನು ಕನ್ನಡ ಲಿಪಿಯಿರುವ ತೆಲುಗುಭಾಷೆಯ ತಾಮ್ರಶಾಸನ ತಿಳಿಸುತ್ತದೆ. ಇದರ ಕಾಲಕೂಡ ಅಸ್ಪಷ್ಟ. ಈ ವಿಚಾರವನ್ನು ವಂಶಾವಳಿಯೂ ಶ್ರುತಪಡಿಸುತ್ತ ಇವನಿಗೆ 'ಭೀಮ'ಎನ್ನುವ ಬಿರುದನ್ನು ನೀಡಿದ ವಿಚಾರವನ್ನು ತಿಳಿಸುತ್ತದೆ. ಅವನು ಈ ಬಿರುದಿನ ಹೆಸರು ಉಳಿಸಬೇಕೆಂದು ಹಟ್ಟಿಯಲ್ಲೇ 'ಭೀಮನ ಕೆರೆ'ಯಲ್ಲದೆ ಹಿರೇಕೆರೆ, ಚಿಕ್ಕಕೆರೆ, ಹೊಸಕೆರೆಗಳನ್ನು ಕಟ್ಟಿಸಿದ. (ಇಂದು ಭೀಮನಕೆರೆ, ಹಿರೇಕೆರೆಗಳು ಮಾತ್ರ ಅಸ್ತಿತ್ವದಲ್ಲಿವೆ.) ಇವುಗಳ ಜೊತೆಯಲ್ಲೇ ರಾಮಸಾಗರದ ಕೆರೆ, ವರವಿನಕೆರೆ, ನಾಯ್ಕನ ಕೆರೆಗಳನ್ನು ಕಟ್ಟಿಸಿದುದಾಗಿ ವಂಶಾವಳಿ ಹೇಳುತ್ತದೆ. ಕೆರೆಗಳನ್ನು ಕಟ್ಟಿಸುವುದರ ಮೂಲಕ ಜನಪರ ಕಾರ್ಯಗಳನ್ನು ಮಾಡಿದುದಲ್ಲದೆ ಕಾಶೀಪುರ, ಖುದಾಪುರ, ಮಹದೇವಪುರ, ಗೌರೀಪುರ, ಗಿಡ್ಡಾಪುರ, ಮಲ್ಲಾಪುರ, ಬಸಾಪುರ ಎಂಬ ಏಳು ಗ್ರಾಮಗಳನ್ನು ಕಟ್ಟಿಸಿದುದಲ್ಲದೇ (ಇವುಗಳಲ್ಲಿ ಖುದಾಪುರ, ಮಹದೇವಪುರ, ಗೌರೀಪುರ ಗ್ರಾಮಗಳು ಮಾತ್ರ ಉಳಿದಂತೆ ಕಾಣುತ್ತವೆ, ಉಳಿದವು ಬೇಚಿರಕ್ ಆಗಿವೆ.) ಆನೆಗೊಂದಿ ರಾಜರ ಹೆಸರಿನಲ್ಲಿ ತಿಮ್ಮಪ್ಪಯ್ಯನಹಳ್ಳಿ, ರಾಮಸಾಗರ ಗ್ರಾಮಗಳನ್ನು ಕಟ್ಟಿಸಿದ್ದು, ಇಂದಿಗೂ ಈ ಗ್ರಾಮಗಳು ಇವೆ.

ಬೋಡಿ ಮಲ್ಲಪ್ಪನಾಯಕ ಕೆರೆ-ಪುರ ಗ್ರಾಮಗಳನ್ನು ಕಟ್ಟಿಸುವುದರೊಂದಿಗೆ ಆ ಗ್ರಾಮದ ಜನತೆಗೆ ಅಗತ್ಯವಾದ ದೇವಸ್ಥಾನಗಳನ್ನು ಕಟ್ಟಿಸಿದ. ಶಿಲ್ಪಕಲೆಯ ದೃಷ್ಟಿಯಿಂದ ಗೌರೀಪುರದ ಗೌರೀಶಂಕರ ದೇವಸ್ಥಾನ ಬಹಳ ಮುಖ್ಯವಾದುದು. ಊರ ಹೊರವಲಯದಲ್ಲಿ ನಿರ್ಮಿಸಿರುವ ಈ ದೇವಸ್ಥಾನದ ಪ್ರಧಾನ ಮೂರ್ತಿ ಗೌರೀಶಂಕರ. ಪೀಠ, ಪ್ರಭಾವಳಿಯೊಂದಿಗೆ ಕಂಗೊಳಿಸುವ

ಪೀಠಸ್ಥನಾದ ಚತುರ್ಭುಜ ಶಂಕರ ಎಡತೊಡೆಯ ಮೇಲೆ ಗೌರೀದೇವಿಯನ್ನು ಕುಳ್ಳಿರಿಸಿಕೊಂಡಿರುವ ಪ್ರೇಮಮಯವಾದ ಭಂಗಿಯನ್ನು ಶಿಲ್ಪಿ ಬಹಳ ಸುಂದರವಾಗಿ ಬಿಡಿಸಿದ್ದಾನೆ. ಗರ್ಭಗುಡಿಯಿಂದ ಹೊರಗೆ ಪೂರ್ವಾಭಿಮುಖವಾದ ನಂದಿಯ ವಿಗ್ರಹವಿದೆ. ನವರಂಗದ ಚಚ್ಚೌಕಾರದ ನಾಲ್ಕು ಕಂಭಗಳಲ್ಲಿ ನರಸಿಂಹ, ಗಿಳಿ, ಬೇಡರ ಕಣ್ಣಪ್ಪ, ಭೈರಾಗಿ ಹೀಗೆ ಬಗೆಬಗೆಯ ಸುಂದರ ಚಿತ್ರಗಳನ್ನು ಕಾಣಬಹುದು.

ಕಾಶಿಯಿಂದ 'ಕಾಶಿಬಾಣ' ತೆಗೆದುಕೊಂಡು ಬಂದು ನಾಯಕನಹಟ್ಟಿಯಲ್ಲಿ ಪ್ರತಿಷ್ಠೆ ಮಾಡಿಸಿದ ವಿಷಯ ವಂಶಾವಳಿಯಲ್ಲಿ ಉಲ್ಲೇಖಗೊಂಡಿದೆ, ಆದರೆ ಈಗ ಅದರ ಸ್ಥಳ ಯಾವುದೆಂಬುದು ತಿಳಿಯುತ್ತಿಲ್ಲ. ಇದೇ ಸಂದರ್ಭದಲ್ಲಿ ಕಾಶಿಯಿಂದ ರಾಮಲಿಂಗವನ್ನು ತಂದು ನಾಯ್ಕನಹಟ್ಟಿಗೆ 3-4 ಕಿ.ಮೀ. ಸಮೀಪದಲ್ಲಿರುವ ಗುಡ್ಡದಲ್ಲಿ ಅಪೂರ್ವವಾದ ಗುಹಾಂತರ ದೇವಾಲಯವನ್ನು ಮಾಡಿಸಿ ಅಲ್ಲಿ ಪ್ರತಿಷ್ಠಾಪಿಸಿದುದಲ್ಲದೆ ಅದನ್ನು ರಾಮದುರ್ಗ ಎಂದು ಕರೆದು ಬೆಟ್ಟದ ಮೇಲೆ ಕೋಟೆಯನ್ನು ಕಟ್ಟಿ 'ಕಿಲ್ಲೆ' ಸ್ಥಾಪನೆ ಮಾಡಿದುದು ಬೋಡಿ ಮಲ್ಲಪ್ಪನಾಯಕನ ಕಾಲದಲ್ಲೇ. ಅತ್ಯಂತ ಕಠಿಣವಾದ ಗ್ರಾನೈಟ್‌ಶಿಲೆಯನ್ನು ಕೊರೆದು ನಿರ್ಮಿಸಿದ ಈ ಗುಹಾಂತರ ದೇವಾಲಯ ಶಿಲ್ಪಕಲೆಯ ದೃಷ್ಟಿಯಿಂದ ಹಟ್ಟಿಪಾಳೆಯಗಾರರಿಗೆ ಹೆಸರು ತರುವ ಕಲಾಕೃತಿಯಾಗಿ ಉಳಿದಿದೆ. ಈ ಗುಹಾಂತರ ದೇವಾಲಯಕ್ಕೆ ಮೆರಗು ತಂದಿರುವುದು ನವರಂಗದಲ್ಲಿಯ ಕಂಭಗಳು, ಹಾಗೂ ಗೊಂಚಲಿನ ಹಾಗೆ ಬಗ್ಗಿರುವ ಕಂಭದ ಶಿಲಾಭೋದಿಗೆಗಳು. ಈ ಕಂಬದ ಮೇಲ್ಭಾಗದ ನಾಲ್ಕು ಮುಖಗಳಲ್ಲಿ, ಬಗೆಬಗೆಯ ಪ್ರಾಣಿಚಿತ್ರಗಳನ್ನು ಬಿಡಿಸಲಾಗಿದೆ. ಈ ರಾಮದುರ್ಗದ ಗುಡ್ಡವನ್ನು 'ಹೊಸಗುಡ್ಡ' ಎಂದೇ ಕರೆಯುವುದು ವಾಡಿಕೆ. ಬೆಟ್ಟದ ಸುತ್ತ ಇಂದಿಗೂ ಸುಸ್ಥಿತಿಯಲ್ಲಿರುವ ಕೋಟೆ ಕೊತ್ತಲುಗಳು ಇವೆ. ಬೆಟ್ಟದ ಮೇಲಿನ ಬಂಡೆಯನ್ನು ಆಳವಾಗಿ ಚಚ್ಚೌಕಾರವಾಗಿ ಕೊರೆದು ನಿರ್ಮಿಸಿದ, ನೀರು ಸಂಗ್ರಹಣೆಯ ಎರಡು ತೊಟ್ಟಿಗಳಿವೆ. ಕೋಟೆಯ ತಳಭಾಗದಲ್ಲಿ ಒಂದು ಪುಷ್ಕರಣಿ ಇದ್ದು, ಅದು ಹೂಳು ತುಂಬಿ ಮುಚ್ಚಿ ಹೋಗಿದೆ.



ರಾಮದುರ್ಗದ ಕಿಲ್ಲೆ ಹಟ್ಟಿ ಪಾಳೆಯಗಾರರ ಆಡಳಿತ ಕಾಲದಲ್ಲಿ ಒಂದು ಆಯಕಟ್ಟಿನ ಸ್ಥಳವಾಗಿದ್ದಂತೆ ತೋರುತ್ತದೆ. ಬೆಟ್ಟದ ಕೆಳಗೆ ಸ್ವಲ್ಪ ದೂರದಲ್ಲಿ ಅದೇ ಹೆಸರಿನ ಗ್ರಾಮವೊಂದು ಈಗಲೂ ಇದೆ. ಈ ಗ್ರಾಮದ ಪಕ್ಕದಲ್ಲೇ 'ದೊರೆಗಳ ಹಟ್ಟಿ' ಇದೆ. ಇಲ್ಲಿ ನಾಯಕನಹಟ್ಟಿ ಪಾಳೆಯಗಾರ ವಂಶಸ್ಥರ ಮನೆಗಳಿವೆ. ಬಹುಶಃ ನಾಯಕನಹಟ್ಟಿ ಕೈತಪ್ಪಿದ ನಂತರ ಹಟ್ಟಿ ವಂಶಸ್ಥರು ಇಲ್ಲಿ ಬಂದು ನೆಲಸಿದಂತೆ ಕಾಣುತ್ತದೆ. ಪಾಳೆಗಾರರ ಆಳ್ವಿಕೆಯ ಕಾಲದಲ್ಲಿ ನಾಯಕನಹಟ್ಟಿಯಲ್ಲೇ ಇವರ ಅರಮನೆ ಇತ್ತು. ಇದರ ಅವಶೇಷಗಳನ್ನು ತಿಪ್ಪೇರುದ್ರಸ್ವಾಮಿಗಳ ಒಳಮಠದ ಹಿಂಭಾಗದಲ್ಲಿ ಇಂದಿಗೂ ಕಾಣಬಹುದು. ಈಗಲೂ ಇಲ್ಲಿ ಹಟ್ಟಿ ವಂಶಸ್ಥರ ಕೆಲವು ಮನೆಗಳಿವೆ. ಊರ ಹೊರವಲಯದಲ್ಲಿ 'ಅರಸರ ತೋಪು' ಎಂದು ಕರೆಯುವ ಮೊರಡಿಯಲ್ಲಿ 2 ಸಮಾಧಿ ಮಂಟಪಗಳಿವೆ. ಇವನ್ನು ಹಟ್ಟಿಯ ಪಾಳೆಯಗಾರರ ಸಮಾಧಿಗಳೆಂದು ಹೇಳುತ್ತಾರೆ, ಇವು ಯಾವ ಪಾಳೆಯಗಾರರವು ಎಂಬ ವಿವರಗಳು ದೊರೆಯುವುದಿಲ್ಲ. ಈ ಸಮಾಧಿ ಮಂಟಪಗಳೊಳಗೆ ನಂದಿಯ ವಿಗ್ರಹ ಪ್ರತಿಷ್ಠಾಪಿಸಲಾಗಿದ್ದು, ಈ ಮಂಟಪಗಳು ನಿರ್ವಹಣೆ ಇಲ್ಲದಿರುವುದರಿಂದ ಗಾಳಿ-ಮಳೆ-ಬಿಸಿಲಿಗೆ ಕುಸಿಯುತ್ತಿವೆ, ಗಿಡ-ಗಂಟೆಗಳು ಬೆಳೆದು ಹಾಳು ಸುರಿಯುತ್ತಿವೆ.

ಹಟ್ಟಿ ಪಾಳೆಯಗಾರರ ಕೀರ್ತಿಯನ್ನು ಮುಗಿಲೆತ್ತರಕ್ಕೆ ಏರಿಸಿದ ಬೋಡಿ ಮಲ್ಲಪ್ಪನಾಯಕನ ಕಾಲದಲ್ಲಿ ಆ ಪಾಳೆಯಗಾರರು ಕಂಡ ಸುವರ್ಣಯುಗವೆನ್ನಬಹುದು. ಆದರೆ ಅವನಿಗೆ ಸಂತಾನವಿಲ್ಲದೆ ಅಧಿಕಾರ ಮತ್ತೆ ಅವನ ಅಣ್ಣ ಬಸವ ಮಲ್ಲಪ್ಪನಾಯ್ಕನಿಗೆ ಹೋದಂತೆ ಕಾಣುತ್ತದೆ, ಇವನಿಗೆ ರಾಯದುರ್ಗದ ಯರ್ರಿಬೊಮ್ಮಣನಾಯ್ಕನ ಮಗಳು ಬೊಮ್ಮವ್ವ ನಾಗತಿಯನ್ನು ಕೊಟ್ಟಿರುತ್ತೆ. ಈ ಸಂಬಂಧದ ಕುರುಹಾಗಿ ಯರ್ರಿ ಬೊಮ್ಮಣನಾಯ್ಕ ಹಟ್ಟಿಯವರಿಂದ 700 ಕುರಿ, 700 ಆಕಳು ಪಡೆದು ಮೊಳಕಾಲ್ಮೂರು ಸೀಮೆಯನ್ನು ಬಿಟ್ಟುಕೊಟ್ಟಿರುತ್ತಾನೆ. ಈ ಬಸವ ಮಲ್ಲಪ್ಪನಾಯ್ಕನಿಗೆ 3 ಜನ ಮಕ್ಕಳು-ಮೀಸೆ ಮಲ್ಲಪ್ಪ ನಾಯ್ಕ, ಚಿನ್ನೈಯರಾಜು, ಬಂಗಾರನಾಯ್ಕ. ಬಂಗಾರನಾಯ್ಕ ಹೋಗಿ ಜರಿಮಲೆಯಲ್ಲಿ ನಿಲ್ಲುತ್ತಾನೆ, ಇವನಿಗೆ ಮಕ್ಕಳಾಗುವುದಿಲ್ಲ. ಮೀಸೆ ಮಲ್ಲಪ್ಪನಾಯ್ಕನಿಗೆ ಚಿತ್ರದುರ್ಗದ ಅರಸುಕುಮಾರಿ ಲಕ್ಷ್ಮವ್ವನಾಗತಿಯನ್ನು ಕೊಟ್ಟಿದ್ದು, 'ಶ್ರೀಮನ್ಮಹಾ ನಾಯಕಾಚಾರ್ಯ' ಎಂಬ ಬಿರುದಾಂಕಿತನಾದ ಕಸ್ತೂರಿನಾಯ್ಕ ಹುಟ್ಟುತ್ತಾನೆ; ಆದರೆ ಇವನ ಸಂತತಿಯು ಬೆಳೆಯುವುದಿಲ್ಲ.

ಬಸವ ಮಲ್ಲಪ್ಪನಾಯಕರ ಎರಡನೆ ಮಗ ಚಿನ್ನೈಯರಾಜ ಜರೀಮಲೆಯ ಪಾಳೆಯಗಾರನ ಮಗಳು ಲಿಂಗವ್ವ ನಾಗತಿಯನ್ನು ಮದುವೆಯಾಗಿ 1. ಬಸವ ಮಲ್ಲಪ್ಪ-II, 2. ದೊಡ್ಡಮಲ್ಲಪ್ಪ-II, 3. ಯರ್ರಿಮಲ್ಲಪ್ಪನಾಯ್ಕ, 4. ಬಂಗಾರನಾಯಕ-II ಎಂಬ ಮಕ್ಕಳನ್ನು ಪಡೆದರೆ, ಗಿರಿಯಮ್ಮನ ಹಳ್ಳಿಯ ರಡ್ಡೇರಪಾಲಯ್ಯನ ಮಗಳು ಲಕ್ಕವ್ವ ಎಂಬ ಉಪಪತ್ನಿಯಿಂದ ಐದನೇ ಮಗನಾದ ಚಿಕ್ಕಮಲ್ಲಪ್ಪನನ್ನು ಪಡೆಯುತ್ತಾನೆ. ಚಿನ್ನೈರಾಜನ ಉಪಪತ್ನಿಯ ಮಗನಾದ ಚಿಕ್ಕಮಲ್ಲಪ್ಪ ಮಹಾಘಟಿಂಗನಾಗಿದ್ದು, ಇವನ ಕಾಲದಲ್ಲಿ ಹಟ್ಟಿಯ ಮಾನ ಮಣ್ಣು ಪಾಲಾಗುತ್ತದೆ. ಬಹುಶಃ ಈ ಚಿಕ್ಕಮಲ್ಲಪ್ಪನೊಂದಿಗೆ ತಳಕು

ಹಾಕಿಕೊಂಡಿರಬಹುದಾದ ಸ್ವಾರಸ್ಯಕರ ಕತೆಯೊಂದು ಗೊಲ್ಲ ಜನಾಂಗದಲ್ಲಿ ದೊರೆಯುತ್ತದೆ. ಹರತಿ ಪಾಳೆಯಗಾರನ ಮಗಳು ಕರಿಯೋಬಿಯನ್ನು ಪಡೆಯಬೇಕೆಂಬ ಹಂಬಲದಿಂದ ಅವಳು ಹಾಕಿದ ಒಗಟು ಬಿಡಿಸಲು ಹೋಗಿ, ಕಲ್ಲಿಬುಳ್ಳಣ್ಣನೆಂಬ ಗೊಲ್ಲನಿಂದ ಮುಖಭಂಗಿತನಾಗಿ ಬರುತ್ತಾನೆ. (ನಂತರ ಗೊಲ್ಲರ ಕಲ್ಲಿಬುಳ್ಳಣ್ಣ, ಬ್ಯಾಡರ ಕರಿಯೋಬಿಯ ಕೈ ಹಿಡಿದು 'ತಾಳಿ ಕಟ್ಟದ ಗೊಲ್ಲರು' ಎಂಬ ಹೊಸ ಕೋಮಿನ ಹುಟ್ಟಿಗೆ ಕಾರಣನಾಗುತ್ತಾನೆ.)[6]

ಸು ಕ್ರಿ.ಶ. 1689ರಲ್ಲಿ ಚಿತ್ರದುರ್ಗದ ನಾಯಕ ಅರಸರಿಂದ ರಾಜಾಭರಮಪ್ಪ ನಾಯಕ, ರಾಯದುರ್ಗದ ಬಲಿಜ ಜಾತಿಯ ವೆಂಕಟಪತಿನಾಯಕನ ಹುಟ್ಟಡಗಿಸುವ ನೆಪಮಾಡಿಕೊಂಡು ಬೆಟ್ಟಸೀಮೆಯ ಮೊಳಕಾಲ್ಮೂರು ಗಡಿಸೀಮೆಯವರೆಗೂ ತಮ್ಮದೇ ಅಧಿಪತ್ಯ ಇದ್ದರೆ ಚೆನ್ನಾಗಿರುತ್ತದೆಂದು ಹಟ್ಟ ಪಾಳೆಯಗಾರರಿಗೆ ಸೇರಿದ ಈ ಬೆಟ್ಟಸೀಮೆಯನ್ನು ಆಕ್ರಮಿಸುತ್ತಾನೆ. ಈ ಜಾಗಕ್ಕೆ ಬದಲಾಗಿ ತನ್ನ ಚಿತ್ರದುರ್ಗ ಸೀಮೆಯ ಕೆಲವು ಭಾಗವನ್ನು ನೀಡಿದರೂ ಒಳಗೊಳಗೇ ಅಸಹಾಯಕನಾಗಿ ಕುದಿಯುತ್ತಿದ್ದ ಚಿನ್ನೈಯರಾಜು ಬರುಬರುತ್ತಾ ಭರಮಪ್ಪನಾಯಕರ ದೌಲತ್ತು ಹೆಚ್ಚುತ್ತಾ ಬಂದುದರಿಂದ ಇನ್ನು ಇವರ ಕೈಕೆಳಗೆ ಇರಬಾರದೆಂದು ತೀರ್ಮಾನಿಸಿ ತನ್ನ 5 ಜನ ಮಕ್ಕಳನ್ನು ಕರೆದುಕೊಂಡು ಆನೆಗೊಂದಿಯ ಚಿಕ್ಕವೆಂಕಟಪತಿರಾಯರಲ್ಲಿಗೆ ಹೋಗಿ, ಅಲ್ಲಿ ಈ ಹಿಂದೆ ಕೊಟ್ಟಿದ್ದ ಉಂಬಳಿಯನ್ನು ಅನುಭವಿಸಿಕೊಂಡು ಹೋಗುತ್ತಿರುವಾಗ ಒಂದು ಅಚಾತುರ್ಯವಾಗುತ್ತದೆ. ಘಟಿಂಗನಾದ ಚಿಕ್ಕಮಲ್ಲಪ್ಪನಾಯಕ ಆನೆಗೊಂದಿ ರಾಯರ ಸೂಳೆಯನ್ನೇ ಹಾರಿಸಿಕೊಂಡು ಹೋಗುವ ದುಸ್ಸಾಹಸ ಮಾಡುತ್ತಾನೆ. ತಲೆಹೊಯ್ಯಿಸುವ ಶಿಕ್ಷೆಗೆ ಹೆದರಿ ರಾತ್ರೋರಾತ್ರಿ ತಲೆತಪ್ಪಿಸಿಕೊಂಡು ಬಂದು ಚಿತ್ರದುರ್ಗ ಸೇರಿ, ರಾಜಾಭರಮಪ್ಪನಾಯಕರನ್ನು (ಕ್ರಿ.ಶ. 1729) ತಾನು ಹಟ್ಟಿಯ ವಂಶಸ್ಥನೆಂದು ಮರುಳುಗೊಳಿಸಿ, ಸಹಪಂಕ್ತಿ ಭೋಜನದ ಗೌರವವನ್ನು ಗಳಿಸಿ, ಅವರು ಹಾಕಿದ ಕುದುರೆ ಹತ್ತುವ ಸವಾಲಿನಿಂದ ಗೆದ್ದು, ಅವರ ಮಗಳಾದ ದೇಮವ್ವನಾಗತಿಯನ್ನೇ ಮದುವೆಯಾಗಿ ನಾಯಕನಹಟ್ಟಿಯನ್ನು ಮರಳಿ ಪಡೆಯುವ ಕತೆ ಒಂದು ರೋಮಾಂಚಕಾರಿ ಜನಪದ ಕತೆಯಂತಿದೆ. ಅಷ್ಟರಲ್ಲಿ ಚಿನ್ನೈರಾಜನ ಪಟ್ಟದ ಹೆಂಡತಿ ಜರಿಮಲೆಯ ಲಿಂಗಮ್ಮ ನಾಗತಿಯ ಮಕ್ಕಳು ತಾವೇ ನಿಜವಾದ ಹಕ್ಕುದಾರರೆಂದು ನಾಯಕನಹಟ್ಟಿಯನ್ನು ಬಿಡಿಸಿಕೊಂಡು ನಾಲ್ಕೂ ಜನ ಸೇರಿ ಏಕಪ್ರಕಾರವಾಗಿ ಆಳ್ವಿಕೆ ನಡೆಸುತ್ತಾರೆ. ಈ ಮಧ್ಯೆ ಚಿಕ್ಕಮಲ್ಲಪ್ಪ ನಾಯಕನ ತರಲೆ ಹೆಚ್ಚಾದ ವಿಚಾರ ದೊಡ್ಡಮದಕರಿನಾಯಕ (ಕ್ರಿ.ಶ.1754)ರವರೆಗೂ ಹೋಗಿ ಅವರು ತಲೆರೋಸಿ ದೊಡ್ಡೇರಿ ಸೆರೆಮನೆಯಲ್ಲಿ ಹಾಕಿಸಿ ಕೊಲ್ಲುತ್ತಾರೆ. ಮುಂದೆ ಇವನ ಮಗ ಪೆದ್ದಯ್ಯನನ್ನು ಚಿತ್ರದುರ್ಗದವರೇ ಸಾಕಿ ಸಲಹಿ ಸತ್ತೆವ್ವ ಎಂಬ ಹೆಣ್ಣನ್ನು ಕೊಟ್ಟು ಮದುವೆ ಮಾಡಿ 'ಅಡಿಕೆಲೆ'ಗೆಂದು ಗಜ್ಜುಗಾನಹಳ್ಳಿ ಎಂಬ ಗ್ರಾಮವನ್ನೇ ಕೊಡುತ್ತಾರೆ. ಈಕೆಯಿಂದ ಇವನಿಗೆ ಮಕ್ಕಳಾಗುವುದಿಲ್ಲ. ಆದರೆ ಕುಂಚಿಗೊಕ್ಕಲಿಗ ಸೋಮಯ್ಯನ ತಂಗಿ

---

6. ಈ ಬಗೆಗಿನ ಹೆಚ್ಚಿನ ವಿವರಗಳಿಗೆ ನನ್ನ 'ದುರುಗ ಜಾನಪದ' (ಪ್ರ: ಶಕ್ತಿ ಮುದ್ರಣ ಮತ್ತು ಪ್ರಕಾಶನ, ಬೆಂಗಳೂರು, 1999, ಕೃತಿಯಲ್ಲಿನ 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುಗಳು ಹಾಗೂ ಅವುಗಳ ಜನಪದ ಸಾಹಿತ್ಯ' (ಪುಟ /30) ಲೇಖನ ಗಮನಿಸಿ.

ಅಕ್ಕಮ್ಮನಿಂದ ಬೋಡಿಮಲ್ಲಪ್ಪ ಎಂಬ ಮಗ ಹುಟ್ಟುತ್ತಾನೆ; ಇವನಿಗೆ ದೊಡ್ಡತಿಪ್ಪಯ್ಯ, ಸಣ್ಣತಿಪ್ಪಯ್ಯ, ರುದ್ರಯ್ಯ ಎಂಬ ಮೂವರು ಮಕ್ಕಳಾಗುತ್ತಾರೆ. ಹೀಗೆ ವಂಶಾವಳಿಕಾರ ಉಪಪತ್ನಿ ಸಂಬಂಧದ ಸಂತತಿಯವರ ವಿವರಗಳನ್ನೂ ನಿಷ್ಪಕ್ಷಪಾತವಾಗಿ ನೀಡುತ್ತಾ ಹೋಗುತ್ತಾನೆ.

ಚಿನ್ನೈರಾಜನ ಹಿರಿಯಮಗ ಬಸವಮಲ್ಲಪ್ಪ-II, ಇವನಿಗೆ ತನ್ನ ಚಿಕ್ಕ ಹೆಂಡತಿಯಲ್ಲಿ (ಹಿರಿ ಹೆಂಡತಿಗೆ ಸಂತತಿ ಇಲ್ಲ) ಬಂಗಾರ ಮಲ್ಲಪ್ಪ ಎಂಬ ಮಗ ಜನಿಸಿದ್ದ, ಇವನಿಗೆ ದೊಡ್ಡಮಲ್ಲಪ್ಪ ಮತ್ತು ಒಬ್ಬ ಮಗಳೂ ಇದ್ದರು. ಬಹುಶಃ ಈ ಹುಡುಗಿಯನ್ನೇ ಚಿತ್ರದುರ್ಗದ ಕೊನೆಯ ದೊರೆ ರಾಜಾವೀರ ಮದಕರಿನಾಯಕನಿಗೆ (ಕ್ರಿ.ಶ. 1729) ಕೊಟ್ಟಿರುತ್ತಾರೆ.

ಈ ದೊಡ್ಡಮಲ್ಲಪ್ಪನಿಗೆ ತಿಪ್ಪಯ್ಯ ಮತ್ತು ಬಂಗಾರಿನಾಯ್ಕ ಎಂಬ ಇಬ್ಬರು ಮಕ್ಕಳು, ಇಲ್ಲಿಗೆ ಬಸವಮಲ್ಲಪ್ಪನಾಯಕರ ಎರಡನೆ ಮಗ ಚಿನ್ನೈಯರಾಜನ ಮೊದಲ ಮಗ ಬಸವಮಲ್ಲಪ್ಪ-IIನ ಸಂತತಿ ವಿಷಯ ಮುಗಿಯುತ್ತದೆ; ಚಿನ್ನೈಯರಾಜನ ಎರಡನೆ ಮಗ ದೊಡ್ಡಮಲ್ಲಪ್ಪ-IIನಿಗೆ ಬಂಗಾರನಾಯ್ಕ ಎಂಬ ಮಗ; ಚಿನ್ನೈಯರಾಜನ ಮೂರನೆ ಮಗ ಯರ್ರಿಮಲ್ಲಪ್ಪನಿಗೆ ಗಿರ್ರೆಮಲ್ಲನಾಯ್ಕ, ಕೊಮಾರ ಚಿನ್ನೈಯ್ಯ ಎಂಬ ಇಬ್ಬರು ಮಕ್ಕಳು- ಇದರಲ್ಲಿ ಹಿರಿಯವನಿಗೆ ಸಂತತಿ ಇಲ್ಲ, ಕಿರಿಯವನಾದ ಚಿನ್ನಯ್ಯನ ಸಂತತಿ ಬಗ್ಗೆ ಸ್ಪಷ್ಟನೆ ಇಲ್ಲ; ಚಿನ್ನೈಯರಾಜನ ನಾಲ್ಕನೆಯ ಮಗ ಬಂಗಾರನಾಯಕ-II, ಇವನಿಗೆ ಮೊದಲ ಹೆಂಡತಿ ಹೊರಮಠದ ಅಯ್ಯಸಾಮಿ ತಂಗಿ ಅಕ್ಕಮ್ಮನಿಂದ ತಿಪ್ಪನಾಯ್ಕ, ಮಲ್ಲಪ್ಪನಾಯ್ಕ, ಕಸ್ತೂರಿನ ಎಯ್ಯ ಎಂಬ ಮೂವರು ಮಕ್ಕಳು. ಇವರಲ್ಲಿ ಹಿರಿಯ ಮಗ ತಿಪ್ಪಯ್ಯನಿಗೆ ಕಾಮಗೇತಲಹಳ್ಳಿ ಪೂಜಾರಿನಾಯ್ಕನ ಮಗಳು ಚಿನ್ನಮ್ಮನಾಗತಿಯಿಂದ 4 ಜನ ಮಕ್ಕಳು; ಉಳಿದವರಿಗೆ ಸಂತತಿ ಇಲ್ಲ. ಆದರಲ್ಲಿ 1ನೇ ಮಗ ಚಿನ್ನಯ್ಯನಿಗೆ ಸಂತತಿ ಇಲ್ಲ, 2ನೇ ಮಗ ಮಲ್ಲಪ್ಪನ ಎಯ್ಯನಿಗೆ ಜರಿಮಲೆ ಪೂಜಾರಿ ಮಾಕನಡುಕುವಿನ ಪೋಟಳಿದೇವರ ಪೂಜಾರಿ ಮುದ್ದಯ್ಯನ ಮಗಳು ಮುದ್ದಪ್ಪನಾಗತಿಗೆ ಕಸ್ತೂರಿನಾಯ್ಕ, ಬಂಗಾರ ನಾಯ್ಕ, ಬಸಪ್ಪನಾಯ್ಕ, ಬೋರೆನ ಎಯ್ಯ-ಹೀಗೆ ನಾಲ್ಕು ಜನ ಮಕ್ಕಳು. ಉಳಿದ ಇಬ್ಬರು ಮಕ್ಕಳ ಸಂತತಿ ವಿವರಗಳ ಬಗ್ಗೆ ವಂಶಾವಳಿಕಾರ ಯಾಕೋ ನಿರ್ಲಕ್ಷ್ಯವಹಿಸಿದ್ದಾನೆ.

ಎರಡನೆ ಹೆಂಡತಿ ಇಮ್ಮಡಿನಾಯ್ಕನ ತಂಗಿ ಪಾಪಮ್ಮನಾಗತಿಯನ್ನು-ಅತ್ತೆ ಲಿಂಗಮ್ಮನಾಗತಿ ತನ್ನ ತವರುಮನೆಯಾದ ಜರೀಮಲೆಯಿಂದ ತಂದುಕೊಂಡಿದ್ದಳು, ಈಕೆಯ ಮಗ ಬಂಗಾರ ಮಲ್ಲಪ್ಪನಾಯ್ಕ ತನ್ನ ದಂಡುದಳವನ್ನು ತೆಗೆದುಕೊಂಡು ಆಗ ಕೇರಳದ ಕಲ್ಲಿಕೋಟೆಯಲ್ಲಿದ್ದ. (ಇದನ್ನು ಪ್ರಭಾಕರ್ ಅವರು ತಪ್ಪಾಗಿ ತಾಳೀಕೋಟೆ ಎಂದು ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾರೆ.) ಅನಂತಶಯನದ ಕಿರೀಟ ರಾಮರಾಯನ ಪರವಾಗಿ ಹೋರಾಡುತ್ತಿದ್ದ ದೊಡ್ಡಮದಕರಿನಾಯಕರ ಸಹಾಯಕ್ಕೆ ಹೋಗಿದ್ದಾಗ ನಡೆದ ಕಲ್ಲಿಕೋಟೆ ಯುದ್ಧದಲ್ಲಿ ಮಡಿಯುತ್ತಾನೆ. ಇವನಿಗೆ ಸಂತತಿ ಇಲ್ಲ. ಇವನ ತಂದೆ ಬಂಗಾರನಾಯಕ-II ನಿಗೆ ದುರ್ಗದ ದೊಡ್ಡ ಮದಕರಿನಾಯಕರು ಗೌಡಗೆರೆ ಗ್ರಾಮವನ್ನು ಮತ್ತು ತಿಂಗಳೊಂದಕ್ಕೆ'


(ಚಿಕ್ಕಹೆಂಡತಿ:ಜರ್ರಿಮಲೆ ಉಮ್ಮಡನಾಯ್ಕನ ತಂಗಿ
ಪಾಪಮ್ಮ ನಾಗತಿ)
(ಹಿರಿ ಹೆಂಡತಿ:ಹೊರಮಠದ ಅಯ್ಯಸ್ವಾಮಿ ಅಕ್ಕಂಮ್ಮನ ಮಕ್ಕಳು)
ಬಂಗಾರ್‍ರ ಮಲ್ಲಪ್ಪನಾಯ್ಕ
ಕಲ್ಲಿಕೋಟೆ ಯುದ್ಧದಲ್ಲಿ ಮಡಿಯುತ್ತಾನೆ, ಸಂತತಿ ಇಲ್ಲ)
ತಿಪ್ಪನಾಯ್ಕ
ಮಲ್ಲಪ್ಪನಾಯ್ಕ
(ಸಂತತಿ ಇಲ್ಲ)
ಕಸ್ತೂರಿ ನಾಯ್ಕ-II
(ಸಂತತಿ ಇಲ್ಲ)
(ಹೆಂಡತಿ ಕಾಮಗೇತಲಹಳ್ಳಿ ಪೂಜಾರಿನಾಯ್ಕನ ಮಗಳು
ಚಿನ್ನಮ್ಮ ನಾಗತಿ)
ಚಿನ್ನಾಯ್ಕ
(ಸಂತತಿ ಇಲ್ಲ)
ಮಲ್ಲಪ್ಪನಾಯ್ಕ
?
?
(ಹೆಂಡತಿ ಜರ್ರಿಮಲೆ ಪೂಜಾರಿ ಮಾಕನದಕುವಿನ
ಓಬಳ ದೇವರ ಪೂಜಾರಿ ಮುದ್ದಯ್ಯನ ಮಗಳು
ಮುದ್ದಪ್ಪನಾಗತಿ
ಕಸ್ತೂರಿನಾಯ್ಕ-III
ಬಂಗಾರ ನಾಯ್ಕ-IV
ಬಸಪ್ಪನಾಯ್ಕ
ಬೋಡಿನಾಯ್ಕ
(ವಂಶವೃಕ್ಷ ಹಠಾತ್ತನೆ ಕೊನೆಗೊಳ್ಳುತ್ತದೆ)

30 ವರಹ ನಡೆಸಿಕೊಂಡು ಬರುವ ಅಪೂರ್ವ ವಿವರವನ್ನು ನೀಡುವುದರೊಂದಿಗೆ ಹಟ್ಟಿಪಾಳೆಯಗಾರರ ಮತ್ತು ದೊಡ್ಡ ಮದಕರಿನಾಯಕರ ಸಂಬಂಧದ ಬಗ್ಗೆ ಹೊಸ ಬೆಳಕು ಚೆಲ್ಲುತ್ತದೆ. ರಾಜಾವೀರ ಮದಕರಿನಾಯಕರಿಗೆ ವಾವೆಯಲ್ಲಿ ಅಣ್ಣನಾಗಬೇಕಿದ್ದ ಚಿತ್ರದುರ್ಗದ ಸಿಂಹಾಸನಕ್ಕೆ ನಿಜವಾದ ವಾರಸುದಾರನಾಗಿದ್ದ ದೊಡ್ಡ ಮದಕರಿನಾಯಕರನ್ನು ಕುರಿತ ಅಪರೂಪದ ಮಾಹಿತಿಯನ್ನು ಸಹ ಈ ದಾಖಲೆ ನೀಡುವುದರಿಂದ ಇದಕ್ಕೆ ತನ್ನದೇ ಐತಿಹಾಸಿಕ ಮಹತ್ವ ಇದೆ.

ಹೀಗೆ ವಂಶಾವಳಿ ಒಂದು ರೀತಿಯಲ್ಲಿ ಹಠಾತ್ತನೆ ಅಪೂರ್ಣ ಮುಕ್ತಾಯವನ್ನು ಕಾಣುತ್ತದೆ. ಹದಿನಾರನೆಯ ಶತಮಾನದ ಕೊನೆಯಿಂದ ಹದಿನೆಂಟನೆ ಶತಮಾನದ ಕೊನೆಯುವರೆಗೂ ಸುಮಾರು 200 ವರ್ಷಗಳ ಬೀಸಿನಲ್ಲಿ ಹಟ್ಟಿ ಚರಿತ್ರೆಯನ್ನು ಗುರುತಿಸಬಹುದು.

ನಾಯಕನ ಹಟ್ಟಿ ಪಾಳೆಯಗಾರರ ಚರಿತ್ರೆಯಲ್ಲಿ ಹಾಸುಹೊಕ್ಕಾಗಿರಬೇಕಾಗಿದ್ದ, ಇಲ್ಲಿ ಸಮಾಧಿಯಾಗಿರುವ ಶರಣ ತಿಪ್ಪೇರುದ್ರಸ್ವಾಮಿಗಳ ಬಗ್ಗೆ ವಂಶಾವಳಿಕಾರ ಚಕಾರವೆತ್ತದೆ ಆಶ್ಚರ್ಯಕರ ಮೌನವಹಿಸಿರುವುದು ಅನೇಕ ಬಗೆಯ ಊಹೆಗಳಿಗೆ ಕಾರಣವಾಗುತ್ತದೆ.

(ಈ ಪ್ರಬಂಧ ಬರೆಯುವಲ್ಲಿ ತಮ್ಮ ಅಮೂಲ್ಯ ದಾಖಲೆಗಳನ್ನು ನೀಡಿದುದಲ್ಲದೆ, ಹಟ್ಟಿ ವಂಶಾವಳಿಯನ್ನು ತಮ್ಮ 'ಹೊಸಓದಿ'ನಿಂದ ಚರಿತ್ರೆಯ ತಪ್ಪುಗಳನ್ನು ತಿದ್ದಲು ನೆರವಾದುದಲ್ಲದೆ, ಅನೇಕ ವಿಷಯಗಳಿಗೆ ತಮ್ಮ ಚರ್ಚೆಯ ಮೂಲಕ ಹೊಸದಿಕ್ಕು ಮೂಡಿಸಿದ ಆತ್ಮೀಯ ಗೆಳೆಯ, ಸುಪ್ರಸಿದ್ಧ ಸಂಶೋಧಕ ಪ್ರೊ॥ ಬಿ. ರಾಜಶೇಖರಪ್ಪನವರನ್ನು ಮತ್ತು ಹಟ್ಟಿಪಾಳೆಯಗಾರರ ಬಗ್ಗೆ ಅನೇಕ ಒಳನೋಟಗಳನ್ನು ನೀಡಿದ ಶಿಷ್ಯ-ಗೆಳೆಯ, ಚಿತ್ರದುರ್ಗ ಪಾಳೆಯಗಾರ ಅರಸರ ನೇರ ವಂಶಸ್ಥರಾದ ಪಿ.ಆರ್.ವೀರಭದ್ರ ನಾಯಕರನ್ನು ನೆನೆಯದಿದ್ದರೆ ಕರ್ತವ್ಯ ಲೋಪವಾದೀತು; ಇವರಿಗೆ ನಾನು ಕೃತಜ್ಞ.)

* ಕನ್ನಡ ವಿಶ್ವವಿದ್ಯಾಲಯ, ಹಂಪಿ 2001ರಲ್ಲಿ ತುಮಕೂರಿನಲ್ಲಿ ಏರ್ಪಡಿಸಿದ್ದ 'ದಕ್ಷಿಣ ಕರ್ನಾಟಕ ಸ್ಥಾನಿಕ ಪ್ರಭುಗಳು' ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.



# ನಾಯಕನಹಟ್ಟಿ ಪಾಳೆಯಗಾರರ ಕಾಲದ ನ್ಯಾಯಾಡಳಿತ

ನಾಯಕನಹಟ್ಟಿ- ಚಿತ್ರದುರ್ಗ ಜಿಲ್ಲಾ ಕೇಂದ್ರದಿಂದ ಈಶಾನ್ಯಕ್ಕೆ ಸುಮಾರು ಇಪ್ಪತ್ತೆರಡು ಕಿ.ಮೀ.ಗಳ ಅಂತರದಲ್ಲಿದ್ದು, ಅವಧೂತ ತಿಪ್ಪೇಸ್ವಾಮಿಯ ಪುಣ್ಯಕ್ಷೇತ್ರವಾಗಿ ಪ್ರಸಿದ್ಧಿ ಪಡೆದಿದೆ. ಆದರೆ ಒಂದು ಕಾಲಕ್ಕೆ ಅದು ಹಟ್ಟಿ ಪಾಳೆಯಪಟ್ಟಿನ ಮುಖ್ಯ ನೆಲೆಯೂ ಆಗಿತ್ತು. ಆದರೆ ಅದು ಅಂದು-ಇಂದು ಆರಕ್ಕೇರದ ಮೂರಕ್ಕಿಳಿಯದ ಒಂದು ಸಣ್ಣ ಪಾಳೆಯಪಟ್ಟು. ಒಂದು ರೀತಿಯಲ್ಲಿ ಸ್ವತಂತ್ರ ಪಾಳೆಯಪಟ್ಟಿನಂತೆ ತೋರಿದರೂ, ಪರೋಕ್ಷವಾಗಿ ಚಿತ್ರದುರ್ಗದ ಪಾಳೆಯಪಟ್ಟಿನ ನಿಯಂತ್ರಣದಲ್ಲೇ ಇತ್ತು. ಹೀಗಾಗಿ ನಾಯಕನ ಹಟ್ಟಿಗೆ ಎಂದೂ ಒಂದು ಸಂಸ್ಥಾನದ ಘನತೆ ಪ್ರಾಪ್ತವಾಗಲೇ ಇಲ್ಲ. ಆದರೆ ಬೇರೆಲ್ಲಾ ಪಾಳೆಯಪಟ್ಟುಗಳಿಗೆ ಇಲ್ಲದ ವಿಶೇಷತೆ ಇದಕ್ಕಿದೆ. ಏಕೆಂದರೆ ಪಶುಪಾಲಕ ಮೂಲದಿಂದ ಬಂದ ಅಪರೂಪದ ಪಾಳೆಯಪಟ್ಟು ಇದು. ಹಟ್ಟಿಪಾಳೆಯಗಾರರ ಮೂಲ ಪುರುಷರು ಅಲೆಮಾರಿ ಪಶುಪಾಲಕ 'ಮ್ಯಾಸ ನಾಯಕ' ಬುಡಕಟ್ಟಿನಿಂದ ಬಂದವರು. ಅವರು ಈ ಪ್ರಾಂತ್ಯಕ್ಕೆ ಹುಲ್ಲು-ನೀರು ಹುಡುಕುತ್ತಾ ತಮ್ಮ ಪಶುಗಳೊಂದಿಗೆ ಬಂದು ಇಲ್ಲೇ ನೆಲೆ ನಿಂತು, ಹಟ್ಟಿ ಹಾಕಿದ ಜಾಗವೇ 'ನಾಯಕನಹಟ್ಟಿ'ಯಾಗಿ, ಮ್ಯಾಸ ನಾಯಕ ಜನಾಂಗದವರಿಗೆ 'ಕಟ್ಟೆಮನೆ'ಯಾಗಿ, ನಂತರ ಅದು ಆಡಳಿತಾತ್ಮಕವಾದ 'ಪಾಳೆಯ'ದ ಸ್ವರೂಪ ಪಡೆದಂತೆ ಕಾಣುತ್ತದೆ. (ನಾಯಕನಹಟ್ಟಿ ನೆಲೆಯಿಂದಲೇ ಇವರ ಕೆಲವು ಸಹೋದರರು ತಮ್ಮ ಪಶುಗಳೊಂದಿಗೆ ಹೊರಟು ಕುಂದಿರ್ಪೆ, ನಿಡಗಲ್ಲು, ಶಂಕರಕಲ್ಲು, ರತ್ನಗಿರಿ ಮುಂತಾದ ಸ್ಥಳಗಳಿಗೆ ಹೋಗಿ ನೆಲೆನಿಂತು ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡರು.) ಹೀಗಾಗಿ ಇದು ಮೂಲತಃ ಬುಡಕಟ್ಟು ಸ್ವರೂಪದ 'ಕಟ್ಟೆಮನೆ'ಯ ಅಂತಃಸತ್ವವನ್ನು ಗರ್ಭೀಕರಿಸಿಕೊಂಡ ಪಾಳೆಯಪಟ್ಟು ಆಗಿದೆ. ಸಹಜವಾಗಿ ಇವರ ನಿಯಂತ್ರಣ ಆ ಭಾಗದಲ್ಲಿ ನೆಲೆನಿಂತ ನಾಯಕ ಮಹಾಮಂಡಲಿಯ ವ್ಯಾಪ್ತಿಯನ್ನು ಪಡೆದಂತೆ ಕಾಣುತ್ತದೆ. ಮೇಲಾಗಿ ಹಟ್ಟಿ ಪಾಳೆಯಪಟ್ಟಿನ ಮೂಲಪುರುಷನಾದ ಕಾಟಮಲ್ಲನಾಯಕನ ಹೆಸರಿನಲ್ಲೇ 'ಮ್ಯಾಸಮಂಡಲಿ'ಯ ಪ್ರಮುಖ ಶಾಖೆಯಾದ 'ಮಲ್ಲನಾಯಕನೋರು' ಹುಟ್ಟಿಕೊಂಡಂತೆ ಕಾಣುತ್ತದೆ. ನಾಯಕನಹಟ್ಟಿ ಸುತ್ತಿನ ಸಣ್ಣ-ಪುಟ್ಟ ಮೊರಡಿಗಳು, ಹಳ್ಳ-ಕಣಿವೆಗಳಲ್ಲಿ ತಮ್ಮ ಪಶುಸಂಪತ್ತಿನೊಂದಿಗೆ ಬೀಡು ಬಿಟ್ಟ 'ಮ್ಯಾಸ'ರ ಮೇಲಿನ ಸಹಜ ನಿಯಂತ್ರಣವೇ ಕ್ರಮೇಣ ಅವರಿಗೆ 'ದೊರೆತನ'ವನ್ನು ತಂದಂತೆ ಕಾಣುತ್ತದೆ. ಹೀಗಾಗಿ ಈ ಪಾಳೆಯಪಟ್ಟು ತನ್ನ ಬಡಕಟ್ಟು ಸ್ವರೂಪದಿಂದ ಮೇಲೇಳದೆ, ಶಿಷ್ಟತೆಯನ್ನು ಮೈಗೂಡಿಸಿಕೊಳ್ಳದೆ ಪರಿಶಿಷ್ಟವಾಗಿಯೇ ಉಳಿದದ್ದು. ಹೀಗಾಗಿ ಇದು ಶಿಷ್ಟ

ಪಾಳೆಯಪಟ್ಟಿಗೆ ಸಹಜವಾದ ಸೈನ್ಯ ಮುಂತಾದ ಸವಲತ್ತುಗಳನ್ನು ಹೊಂದಲೇ ಇಲ್ಲವೆನಿಸುತ್ತದೆ. (ಆದರೆ ಇದೇ ಪಶುಪಾಲಕ ಮ್ಯಾಸ ಬುಡಕಟ್ಟು ಮೂಲದಿಂದ ಬಂದ ಚಿತ್ರದುರ್ಗದ ಪಾಳೆಯಪಟ್ಟು, ಈಗಾಗಲೇ ಸ್ಥಾಪಿತವಾಗಿದ್ದ ಬಲಿಷ್ಠ ಶಿಷ್ಟ ವ್ಯವಸ್ಥೆಯೊಂದರ ಉಸ್ತುವಾರಿಯನ್ನು ಪಡೆಯುವುದರ ಮೂಲಕ ಅದು ಬೆಳೆದ ಬಗೆಯೇ ಬೇರೆಯಾಯಿತು.) ಹೀಗಾಗಿ ಚಿತ್ರದುರ್ಗದವರು ಇವರ ಮೇಲೆ ದೌಲತ್ತು ಮಾಡಿದಾಗ ಸಹಿಸಿಕೊಂಡಿರ ಬೇಕಾಯಿತು. ಪ್ರತಿಭಟಿಸಲಾಗದ ಅಸಹಾಯಕತೆಯಿಂದ ಪಾಳೆಯಪಟ್ಟನ್ನೇ ಬಿಟ್ಟುಕೊಟ್ಟು ಆನೆಗೊಂದಿಯಲ್ಲಿಯ ತಮ್ಮ 'ಉಂಬಳಿ'ಯಲ್ಲೇ ಸುಖಪಡಲು ನಿರ್ಧರಿಸಬೇಕಾಯಿತು. ಬಹುಶಃ ಸೈನ್ಯ ಶಕ್ತಿಯ ಕೊರತೆಯ ಕಾರಣಕ್ಕಾಗೇ ಇವರು ಸುತ್ತಿನ ಯಾರ ಶತ್ರುತ್ವವನ್ನೂ ಕಟ್ಟಿಕೊಳ್ಳಲಿಲ್ಲ, ಯುದ್ಧಗಳನ್ನೂ ಮಾಡಲಿಲ್ಲ! ಹೀಗಾಗಿ ಇದ್ದುದರಲ್ಲೇ ತೃಪ್ತಿಪಡುವ ಬುಡಕಟ್ಟು ಗುಣ ಇವರದಾದ್ದರಿಂದ ಪಾಳೆಯಪಟ್ಟಿನ ವಿಸ್ತೀರ್ಣದಂತಹ ಮಹತ್ವಾಕಾಂಕ್ಷೆಯು ಕನಸೇ ಕಾಣಲಿಲ್ಲವೆನಿಸುತ್ತದೆ. ಅನಿವಾರ್ಯವಾದಾಗ ಚಿತ್ರದುರ್ಗದವರೊಂದಿಗೆ ವೈವಾಹಿಕ ಸಂಬಂಧದ ಮೂಲಕ ಪರಿಸ್ಥಿತಿಯನ್ನು ಸುಗಮಗೊಳಿಸಿಕೊಳ್ಳುವ ಪ್ರಯತ್ನಗಳನ್ನು ಮಾಡಿದುದನ್ನು ಇತಿಹಾಸ ಹೇಳುತ್ತದೆ. ಒಟ್ಟಾರೆ - ಸಂಕೀರ್ಣ ಪಾಳೆಯಗಾರಿಕೆ ವ್ಯವಸ್ಥೆ ಹೊಂದದ, ಒಂದು ರೀತಿಯ ಬುಡಕಟ್ಟಿನ 'ಕಟ್ಟೆಮನೆ'ಯ ವ್ಯವಹಾರವನ್ನು ಇವರ ನಡಾವಳಿಗಳಲ್ಲಿ ಕಾಣಬಹುದು.

ಈ ಹಿನ್ನೆಲೆಯಲ್ಲಿ ಹಟ್ಟಿ ಪಾಳೆಯಗಾರರ ಕಾಲದ ನ್ಯಾಯಾಡಳಿತ ವ್ಯವಸ್ಥೆಯನ್ನು ಪರಿಶೀಲಿಸಬಹುದು. ಇವರ ನ್ಯಾಯ ಪದ್ಧತಿಯನ್ನು ವಿವರಿಸುವ ಪಾಳೆಯಗಾರರ ಕಾಲದ ಲಿಖಿತ ದಾಖಲೆಗಳು ಯಾವುವೂ ದೊರೆಯುವುದೇ ಇಲ್ಲ. ನಾಯಕನಹಟ್ಟಿಯ ಬಗ್ಗೆ ದೊರೆಯುವ ಏಕೈಕ ದಾಖಲೆ 'ವಂಶಾವಳಿ' (ಕೆಲವರು ಇದನ್ನೇ ಬಖೈರು ಎಂದು ಕರೆದಿದ್ದರು.) ಯಲ್ಲಿ ಆನೆಗೊಂದಿ ಪಾಳೇಗಾರನ ಸೂಳೆಯನ್ನೇ ಹಾರಿಸಿದ ಹಟ್ಟಿ ಮೂಲದ ಘಟಿಂಗ ಚಿಕ್ಕಮಲ್ಲಪ್ಪನ ಎಯಕ 'ತಲೆ ಹೊಯ್ಯು'ಬಹುದೆಂದು ಹೆದರಿ ಪಲಾಯನ ಮಾಡುವ ಉಲ್ಲೇಖವೊಂದು ದೊರೆಯುತ್ತದೆ. ಪಾಳೆಯಗಾರರ ಕಾಲದಲ್ಲಿ 'ತಲೆಯೊಡೆಸುವ' ಪದ್ಧತಿ ಇದ್ದುದ್ದನ್ನು ಇದು ತಿಳಿಸುತ್ತದೆ.

ಆದರೆ 'ಹಟ್ಟಿ ಕಟ್ಟೆಮನೆ'ಗೆ ಬಂದ ಕೆಲವು ವ್ಯಾಜ್ಯ ತೀರ್ಮಾನಗಳ ದಾಖಲೆಗಳು ದೊರೆಯುತ್ತವೆ. (ಇದರಲ್ಲಿ ಬಹುಪಾಲು ದೇವರಿಗೆ ಸಂಬಂಧಿಸಿದ ಹಕ್ಕಿನ ತಕರಾರುಗಳೇ ಆಗಿವೆ.) ಬುಡಕಟ್ಟಿನ ಕಟ್ಟೆಯ ಮನೆಗಳೇ ಅಂದಿನ ನ್ಯಾಯಾಲಯಗಳಾಗಿದ್ದವು. ಹಟ್ಟಿಯ ಪಾಳೆಯಪಟ್ಟು ಒಂದು ಬುಡಕಟ್ಟು ಕಟ್ಟೆಮನೆಯ ಸತ್ತ್ವವನ್ನೇ ಮೈಗೂಡಿಸಿಕೊಂಡಿರುವುದರಿಂದ 'ಬುಡಕಟ್ಟು ನ್ಯಾಯಪದ್ಧತಿ'ಯೇ ಅಂದಿನ ಪಾಳೆಯಪಟ್ಟಿನ 'ನ್ಯಾಯಪದ್ಧತಿ ವ್ಯವಸ್ಥೆ'ಯೂ ಆಗಿತ್ತು ಎಂದು ಭಾವಿಸಬಹುದು.

ದೊರೆಯೊಂದಿಗೆ ಕಟ್ಟೆಮನೆಯ ಯಜಮಾನ, ನಾಯಕವಾಡಿಯ ಕುಲಸಾವಿರದ ಪ್ರತಿನಿಧಿಗಳು ಒಟ್ಟಾರೆ ಸೇರಿ ವಿಚಾರಣೆ ನಡೆಸಿ, ತೀರ್ಮಾನ ಕೊಡುವ ವ್ಯವಸ್ಥೆ ಇತ್ತು.

ಇದಕ್ಕೆ ನ್ಯಾಯ ಬೇಡುವವರು ಬದ್ಧರಾಗಲೇಬೇಕಿತ್ತು. ಮೀರಿದರೆ ದುಡ್ಡಿನ ದಂಡ, ಕೆಲವು ಬಾರಿ ಜಾತಿಯಿಂದ ಬಹಿಷ್ಕಾರ ಹಾಕುತ್ತಿದ್ದರು. ಇನ್ನು ಕೆಲವು ಬಾರಿ ತಪ್ಪಿತಸ್ಥರೆಂದು ತೀರ್ಮಾನಿಸಿದವರೊಂದಿಗೆ ಕುಲಸ್ಥರು ಯಾವ ರೀತಿಯಲ್ಲೂ ವ್ಯವಹರಿಸಬಾರದೆಂದು ನಿಷೇಧಿಸುತ್ತಿದ್ದರು. 'ನೀರು-ಬೆಂಕಿ'ಯ ನಿಷೇಧವನ್ನೂ ಹಾಕುತ್ತಿದ್ದರು. ಈ ದಂಡನೆಗೆ ಗುರಿಯಾದವರು ಸಾರ್ವಜನಿಕ ಅಥವಾ ಕುಲಸ್ಥರು ಬಳಸುವ ಬಾವಿಯಿಂದ ನೀರು ಸೇದುವಂತಿಲ್ಲ. ಬೆಂಕಿ ಕಡ್ಡಿ ಇಲ್ಲದ ಕಾಲದಲ್ಲಿ ಒಲೆ ಹೊತ್ತಿಸಲು ಬೇರೊಬ್ಬರ ಮನೆಯಿಂದ ಬೆಂಕಿ ಕೆಂಡವನ್ನು ತರಬೇಕಾಗಿತ್ತು, ಬಹಿಷ್ಕಾರಕ್ಕೆ ಒಳಗಾದವರಿಗೆ ಆ ಸೌಲಭ್ಯವೂ ದೊರೆಯುತ್ತಿರಲಿಲ್ಲ; ಜೊತೆಗೆ ಯಾರೂ ಮಾತನಾಡಿಸುತ್ತಿರಲಿಲ್ಲ. ಅವರು ಅನಿವಾರ್ಯವಾಗಿ ಊರು ತೊರೆದು ಹೋಗಬೇಕಾಗಿತ್ತು. ಆಗ ಕುಲಾಚಾರದ ಕಟ್ಟುಗಳು ತುಂಬಾ ಬಿಗಿಯಾಗಿ ಇದ್ದುದರಿಂದ ಬೇರೆ ಊರಿನವರೂ ಅವರನ್ನು ಸೇರಿಸುತ್ತಿರಲಿಲ್ಲ. ಹೀಗೆ ಬಹಿಷ್ಕಾರಕ್ಕೆ ಒಳಗಾಗಿ ಕೆಟ್ಟವರೆಲ್ಲ ಒಂದೆಡೆ ಸೇರುತ್ತಿದ್ದರು. ಅದೇ 'ಕೆಟ್ಟವರ ಹಟ್ಟಿ (ಕೆಟ್ಟೋರಟ್ಟಿ) ಬಿಟ್ಟವರಹಟ್ಟಿ (ಬಿಟ್ಟೋರಟ್ಟಿ)'ಯಾಗುತ್ತಿತ್ತು. ಈಗಲೂ ಅಂತಹ ಅನೇಕ ಹಟ್ಟಿಗಳಿರುವುದನ್ನು ಗುರುತಿಸಬಹುದು (ಆದರೆ ಅವರನ್ನು ಹಿಂದಿನ ರೀತಿಯಲ್ಲಿ ತಿರಸ್ಕಾರವಾಗಿ ನೋಡುವ ದೃಷ್ಟಿ ಕಡಿಮೆಯಾಗಿದೆ, ಆದರೆ ಅಂತಹವರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಲು ಈಗಲೂ ಹಿಂಜರಿಯುತ್ತಾರೆ.) ಬಹಿಷ್ಕಾರಕ್ಕೆ ಗುರಿಯಾದವರನ್ನು 'ಶುದ್ಧ' ಮಾಡಿ ಮತ್ತೆ ಕುಲದೊಳಕ್ಕೆ ಸೇರಿಸಿಕೊಳ್ಳುವ ಪ್ರಕ್ರಿಯೆಯನ್ನು 'ಶುದ್ಧಪತ್ರ' ಮಾಡುವುದು ಎಂಬ ಹೆಸರಿನೊಂದಿಗೆ ಕರೆಯಲಾಗಿದೆ. ಅಂದರೆ ಗೋಗಂಜಿನ ಪ್ರೋಕ್ಷಣೆಯ ಮೂಲಕ ದೋಷ ಕಳೆದು, ದಂಡ ವಿಧಿಸುತ್ತಿದ್ದರು. ಆ ದಂಡವನ್ನು ತೆತ್ತಾಕ್ಷಣ ಬಹಿಷ್ಕಾರ ರದ್ದಾಗುತ್ತಿತ್ತು.

ಅಪರಾಧಿ ತನ್ನ ಪ್ರಾಮಾಣಿಕತೆಯನ್ನು ಸಾಬೀತು ಪಡಿಸಲು 'ಹಾಲು ಹಿಡಿದು ಪ್ರಮಾಣ' ಮಾಡಬೇಕಿತ್ತು. ಪ್ರಮಾಣ ಮಾಡಲು ಹಿಂಜರಿದರೆ ಅಪರಾಧಿಯೆಂದು ತೀರ್ಮಾನಿಸುತ್ತಿದ್ದರು.

ಶಿಷ್ಟ ಪಾಳೆಯಪಟ್ಟುಗಳಲ್ಲಿ ಕಂಡು ಬರುವ 'ಶೂಲದ ಶಿಕ್ಷೆ' ಯಂತಹ, ಪ್ರಾಣ ತೆಗೆಯುವಂತಹ ಶಿಕ್ಷೆಗಳನ್ನು ಬುಡಕಟ್ಟು ನ್ಯಾಯಾಲಯಗಳಾದ ಕಟ್ಟೆಮನೆ ಸಂಸ್ಥಾನಗಳಲ್ಲಿ ವಿಧಿಸುತ್ತಿರಲಿಲ್ಲ. ಕೆಲವೊಮ್ಮೆ ಬಹಳ ಉಗ್ರಕ್ರಮ ಎಂದರೆ ಕೈಕತ್ತರಿಸುವ, ಕವಣೆ ಏಟು ಕೊಡುವ, ಗಡೀಪಾರು ಮಾಡುವ ಶಿಕ್ಷೆಗಳನ್ನು ವಿಧಿಸುತ್ತಿದ್ದರೆಂದು 'ಹಟ್ಟಿ ಸುತ್ತಿನ ಹಿರಿಯರು'

---

1. ನಾಯಕನ ಹಟ್ಟಿಯಂತೆ ಕಟ್ಟೆಮನೆಯಾಗಿದ್ದ ಗೋನೂರಿನಲ್ಲಿ ಸತ್ಯದ ಕಟ್ಟೆ ಎಂದು ಎದುರು ಬದುರಿನಲ್ಲಿ ಎರಡು ಕಟ್ಟೆಗಳಿದ್ದವು. ಈ ಕಟ್ಟೆಗಳ ಬಳಿಯೇ ನ್ಯಾಯತೀರ್ಮಾನಗಳು ಆಗುತ್ತಿದ್ದವು. ಪಾಪ ಮಾಡಿದವರನ್ನು ಪಾಪದ ಕಟ್ಟೆಯ ಬಳಿ ಕೂಡಿಸಿ ದಂಡ ಹಾಕುತ್ತಿದ್ದರಂತೆ. 'ಪ್ರಮಾಣ' ಮಾಡಿ ತನ್ನ ಸತ್ಯಸಂಧತೆಯನ್ನು ಸಾಬೀತು ಮಾಡುವವರು ಸತ್ಯದ ಕಟ್ಟೆಯ ಬಳಿ ಬರುತ್ತಿದ್ದರು. ಇಂದು ಸತ್ಯದ ಕಟ್ಟೆ ಮಾತ್ರ ಉಳಿದಿದೆ, ಪಾಪದ ಕಟ್ಟೆ ಹಾಳಾಗಿದೆ. ಆದರೆ ಈ ಕಟ್ಟೆಮನೆ ಇಂದು ಕ್ರಿಯಾಶೀಲವಾಗಿ ಉಳಿದಿಲ್ಲ.

ಹೇಳುತ್ತಾರೆ.[1]

ಕೆಲವು ಬಾರಿ ತೀರಾ ಉಗ್ರವಾದ ನಿರ್ಣಯ ತೆಗೆದುಕೊಂಡಲ್ಲಿ ಕೈಕತ್ತರಿಸುತ್ತಿದ್ದರು. ಉಳಿದಂತೆ 'ಅಮೃತ' (ಹಾಲು) ಹಿಡಿದು 'ಪ್ರಮಾಣ' ಮಾಡಿಸುತ್ತಿದ್ದರು. ವ್ಯಭಿಚಾರದಂತಹ ಕೃತ್ಯಗಳಲ್ಲಿ ಭಾಗಿಯಾದವರಿಗೆ ಹೆಂಗಸರಿಂದ ಎಲೆ-ಅಡಿಕೆ ಹಾಕಿಸಿ ಉಗಿಸುತ್ತಿದ್ದರು.

ಈ ಪಾಳೆಯಪಟ್ಟು, ಕಟ್ಟೆಮನೆಗಳ ಮುಂದುವರೆದ ನ್ಯಾಯಪದ್ಧತಿಯೆಂಬಂತೆ ಆಯಾ ಪಾಳೆಯಪಟ್ಟಿನ ವಂಶಜರೇ (ಸಂಸ್ಥಾನಿಕರೇ) ಕೆಲವು ಕಟ್ಟು-ಕಟ್ಟಳೆಗಳನ್ನು ಹೇರುವುದರ ಮೂಲಕ ಜನಾಂಗವನ್ನು ಸುಧಾರಿಸುವ ಪ್ರಯತ್ನ ಮಾಡಿರುವುದನ್ನು ರತ್ನಗಿರಿ ಸಂಸ್ಥಾನಕ್ಕೆ ಸೇರಿದ ಕೆಲವು ದಾಖಲೆಗಳು ಶೃತಪಡಿಸುವುದನ್ನು ಇಲ್ಲಿ ಪರಿಶೀಲಿಸುವುದು ಸೂಕ್ತ ಮತ್ತು ಇದು ಹಳೆಯ ನ್ಯಾಯಪದ್ಧತಿಗೆ ಅಮೂಲ್ಯವಾದ ಪೂರಕ ಮಾಹಿತಿಯನ್ನು ಒದಗಿಸುವುದರಿಂದ ಅವುಗಳಿಗೆ ತಮ್ಮದೇ ಆದ ಐತಿಹಾಸಿಕ ಮಹತ್ವ ಇದೆ.

ಕ್ರಿ.ಶ. 1937 ನೇ ಇಸ್ವಿ ಮಾರ್ಚಿ 4ರಂದು ಶ್ರೀಮಾನ್ ಮಹಾಮಂಡಲೇಶ್ವರ ಹರ್ತಿಸಮ್ಮೇಟಿ ಸರ್ಜ ಸಂಸ್ಥಾನ ಶಿರಾ ರತ್ನಗಿರಿ ರಾಜಾ ಸೀತಾರಾಮರಾಜ, ರಾಜಾ ಕೃಷ್ಣಪ್ಪರಾಜರವರು ಹೊರಡಿಸಿದ ಪ್ರಕಟಣೆಯಲ್ಲಿ ತಮ್ಮನ್ನು 'ಬೇಡರು' ಎಂಬ ಆಗೌರವಯುತವಾದ ನಿಕೃಷ್ಟ ಹೆಸರಿನಿಂದ ಕರೆದುಕೊಳ್ಳಕೂಡದು, ವಾಲ್ಮೀಕಿಗಳೆಂದು ಹೇಳಿಕೊಳ್ಳಬೇಕೆಂದು ಒತ್ತಿ ಹೇಳುತ್ತಾ ತಿಳಿಸುವ ಪ್ರಕಟಣೆಯ ಇತರೆ ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಬಹುದು.

1. ಪಾದರಕ್ಷೆ ಪ್ರಯೋಗ ಮಾಡಿದ್ದು ರುಜುವಾತಾದರೆ ಅಂಥವರಿಗೆ 5 ರೂ. ಗಳು ದಂಡ ವಿಧಿಸಬೇಕೆಂದೂ, ಪಾದರಕ್ಷೆಯನ್ನು ಎತ್ತಿದವರಿಗೆ 10 ರೂ. ದಂಡ ವಿಧಿಸತಕ್ಕದ್ದೆಂದೂ ಮತ್ತು ಮತ ಪದ್ಧತಿಯ ಪ್ರಕಾರ ಪ್ರಾಯಶ್ಚಿತ್ತವಾಗತಕ್ಕದ್ದು.
2. ಈ ಮತದಲ್ಲಿ ಬಸವಿಯನ್ನು ಬಿಡಕೂಡದೆಂದು ಹಿಂದೆಯೇ ಸಂಸ್ಥಾನದ ಆಜ್ಞೆಯಾಗಿರುತ್ತದೆ. ಇದಕ್ಕೆ ಮೀರಿ ಬಸವಿಯನ್ನು ಬಿಟ್ಟಿರುವುದಾಗಿ ತಿಳಿದು ಬಂದರೆ ಬಳಕೆ ಭೋಜನ ವಗ್ಗೈರೆಗಳಿಗೆ ಕಟ್ಟು ಮಾಡಿಕೊಂಡು ಮುಂದೆ ಸಂಸ್ಥಾನದಿಂದ ಅಪ್ಪಣೆ ಆದಂತೆ ನಡೆಯಬೇಕು.
3. ಹಿಂದೆ ಇದ್ದ ಈ ಮತದ ಬಸವಿಯರನ್ನು ಯಾರೂ ರಖಾವು ಮಾಡಿಕೊಳ್ಳಬಾರದು. ರಖಾವು ಮಾಡಿಕೊಂಡಲ್ಲಿ ಬಳಕೆ ಭೋಜನಗಳನ್ನು ಮಾಡಕೂಡದು.
4. ಗಂಡ ಸತ್ತವಳು ಹೆತ್ತರೆ ಸಂಸ್ಥಾನದ ತೀರ್ಮಾನದಂತೆ ನಡೆಯಬೇಕು.
5. ಕನ್ನೆಯರು ವಿವಾಹಕ್ಕಿಂತ ಮುಂಚೆಯೇ ಗರ್ಭಿಣಿಯಾದರೆ ಅಂಥವರನ್ನು ಮತದಲ್ಲಿ ಸೇರಿಸಕೂಡದು.
6. ಪತಿಯುಳ್ಳ ಸ್ತ್ರೀಯು ಬೇರೆ ಮತದವರನ್ನಾಗಲಿ, ತನ್ನ ಮತದವರನ್ನಾಗಲಿ ರಖಾವು ಮಾಡಿ ಸಂಸಾರ ಮಾಡತಕ್ಕವರನ್ನು ಮತದಿಂದ ಹೊರಗೆ ಹಾಕಬೇಕು ಮತ್ತು ಗಂಡನಿಗೂ ಇದೇ ಅನ್ವಯಿಸತಕ್ಕದ್ದು.

7. ಚಿಕ್ಕ ವಯಸ್ಸಿನಲ್ಲಿ ಗಂಡಸತ್ತವಳು ವ್ಯಭಿಚಾರ ನಡೆಸುವುದಕ್ಕೆ ಬದಲಾಗಿ ತನ್ನ ಮತದವರಲ್ಲಿಯೂ ಮತ್ತು ತನ್ನ ಮತದವರನ್ನು ಅನುಸರಿಸಿ ಕೂಡಿಕೆ ಉಭಯತ್ರ ರಾಜಿ ಮಾಡಿಕೊಳ್ಳಬಹುದು ಮತ್ತು ಮಕ್ಕಳು ಹೆತ್ತವರಿಗೆ ಕೂಡಿಕೆ ಬರಲಾಗದು. ಈ ಅಪರಾಧಕ್ಕೆ ಅರಮನೆಗೆ 10 ರೂ. ಗಳು. ಕುಲಕ್ಕೆ ಊಟ, ತಾಂಬೂಲ ಕೊಡಬೇಕು.

8. ಅನ್ಯಮತದವರನ್ನು ನಮ್ಮ ಕುಲದಲ್ಲಿಯೇ ಸೇರಿಸಿಕೊಳ್ಳಬಾರದು.

ಹಾಗೂ ಇದೇ ಸಂಸ್ಥಾನಕ್ಕೆ ಸೇರಿದ ರಾಜ ಗೋಪಾಲಸ್ವಾಮಿರಾಜ ಅವರು **29-8-1952**ರಲ್ಲಿ ನಾಯಕವಾಡಿಯ ಮೇಲೆ ಈ ಕೆಳಕಂಡ ನಿಷೇಧಗಳನ್ನು ಹೇರುವ ಮಹಜರು ಪತ್ರ ಸ್ವಾರಸ್ಯಕರ ಮಾಹಿತಿಯನ್ನು ನೀಡುತ್ತದೆ.

''........ಇನ್ನುಅನೇಕರು ಮತ ಮರ್ಯೆದೆಯನ್ನು ದಿಕ್ಕರಿಸಿ ಮತ ವಿಚಾರಕ್ಕೆ ಅಪಮಾನಗೊಳಿಸುವ ಲೈಟು ಹಿಡಿಯುವುದು ಮತ್ತು ಸತ್ತವರ ಗುಂಡಿಗಳನ್ನು ತೆಗೆಯುವುದು ಮತ್ತು ಊಟ ಮಾಡಿದವರ ಎಲೆಗಳನ್ನು ತೆಗೆಯುವುದು ಮತ್ತು ಪಂಜು ಹಿಡಿಯುವುದು ಇ ರೀತಿ ಹೀನ ಕೆಲಸಗಳನ್ನು ಮಾಡುತ್ತಿರುವುದರಿಂದಾ ಪವಿತ್ರಾವಾದ ನಾಯಕ ಮತಕ್ಕೆ ಕೆಟ್ಟ ಹೆಸರು ಬರುತ್ತೆ......'' ಎಂದು ಈ ಕೃತ್ಯಗಳನ್ನು ನಿಷೇಧಿಸುತ್ತಾ, ಉಲ್ಲಂಘಿಸಿದವರಿಗೆ 50 ರೂಪಾಯಿ ದಂಡ ವಿಧಿಸುವುದಾಗಿ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ದೊಡ್ಡ ಹೆಜ್ಜಾಜಿ ಗ್ರಾಮದಲ್ಲಿ ಪ್ರಚುರ ಪಡಿಸಿದ ಗ್ರಾಮ ಮಹಜರು ಪತ್ರ ಹೇಳುತ್ತದೆ.[2]

ಈ ಎರಡು ಪ್ರಕಟಣೆಗಳು ಜನಾಂಗದ ಸಾಮಾಜಿಕ-ಆರ್ಥಿಕ ದುಸ್ಥಿತಿಯನ್ನು ಸಮರ್ಥವಾಗಿ ಬಿಂಬಿಸುತ್ತವೆ. ಈ ಪೀಡೆಗಳನ್ನು ತೊಲಗಿಸಲು ಸಂಸ್ಥಾನ ನ್ಯಾಯಾಲಯದ ಪಾತ್ರ ವಹಿಸಿರುವುದನ್ನು ಕಾಣಬಹುದು.

---

2. ಮಹಜರು ಪತ್ರಕ್ಕೆ ಸಹಿ ಹಾಕಲು ಬರದವರು ತಮ್ಮ ಎಡಗೈ ಹೆಬ್ಬೆಟ್ಟನ್ನು ಸಹ ಬಳಸಿರುವುದಿಲ್ಲ! ಅವರು ಲೇಖನಿ ಕೈಯಲ್ಲಿ ಮುಟ್ಟಿದಕ್ಕೆ ಆ ಪತ್ರ ಬರೆದವನೇ '--' ಹೀಗೆ ಒಂದು ಗೆರೆ ಎಳೆದು ಅವನ ಹೆಸರಿಗೆ ರುಜು ಎಂದು ಬರೆದಿರುತ್ತಾನೆ. ಮತ್ತೊಬ್ಬ ಲೇಖನಿ ಮುಟ್ಟಿದಕ್ಕೆ '2--' ಎಂದು ಬರೆಯುತ್ತಾನೆ. ಹೀಗೆ ಲೇಖನಿ ಮುಟ್ಟುವವರ ಸಂಖ್ಯೆಗೆ ಅನುಗುಣವಾಗಿ ಗೆರೆಗಳ ಸಂಖ್ಯೆ ಬೆಳೆಯುತ್ತಾ ಹೋಗುತ್ತದೆ. ಕೆಲವು ಬರಹಗಾರರು 'ಗೆರೆ' ಬದಲು 'ಗೀಟು' ಶಬ್ದವನ್ನು ಬಳಸಿದ್ದಾರೆ.

ಬಹುಶಃ ಹೆಬ್ಬೆಟ್ಟಿನ ಸಹಿ ಜಾರಿಗೆ ಬರುವುದಕ್ಕೂ ಮೊದಲು ಲೇಖನಿ ಮುಟ್ಟಿದ್ದಕ್ಕೆ ಗೆರೆ ಎಳೆಯುವ ಪದ್ಧತಿಯೇ ಇದ್ದಂತೆ ಕಂಡು ಬರುತ್ತದೆ. ಹೆಬ್ಬೆಟ್ಟನ್ನು ಸಹಿಯಾಗಿ ಯಾವಾಗಿನಿಂದ ಮಾನ್ಯ ಮಾಡಲಾಯಿತು ಎಂಬುದು ತಿಳಿದು ಬರುತ್ತಿಲ್ಲ. ಆದರೆ ಲೇಖನಿ ಮುಟ್ಟಿದಕ್ಕೆ ಗೆರೆ ಎಳೆಯುವ ಪದ್ಧತಿ 70-80 ವರ್ಷದ ಹಿಂದಿನ ದಾಖಲೆಗಳಲ್ಲಿ ನೋಡಬಹುದು. ಅಥವಾ ಇದೊಂದು ಬುಡಕಟ್ಟು ಪದ್ಧತಿಯೇ? ಈ ಬಗೆಗೆ ಕೂಲಂಕುಷ ಅಧ್ಯಯನ ನಡೆಯಬೇಕಾಗಿದೆ.

(ಈ ಲೇಖನ ಸಿದ್ಧಪಡಿಸುವಲ್ಲಿ ಮಾಹಿತಿ ನೀಡಿ ಸಹಕರಿಸಿದ ನೇರ್ಲಗುಂಟೆ ಗ್ರಾಮದ ನಿವೃತ್ತ ಟ್ರಾಫಿಕ್ ಇನ್ಸ್‌ಪೆಕ್ಟರ್ ಬಿ. ಬೋರನಾಯ್ಕ, ನಾಯಕನಹಟ್ಟಿ ಸಮೀಪದ ದೊರೆಗಳಹಟ್ಟಿಯ ಶಿವಪ್ಪನಾಯಕ, ಕೆಲವು ದಾಖಲೆಗಳನ್ನು ನೀಡಿದ ನಾಯಕನಹಟ್ಟಿ ದೊರೆ ಟಿ. ಬಸವರಾಜು ಅವರುಗಳನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.)

* ಜಿ.ಎಸ್. ಪ್ರಸಾದ್‌ರ ಅಭಿನಂದನ ಗ್ರಂಥಕ್ಕೆ



## ಜಾನಪದ ನೆಲೆಯಲ್ಲಿ 'ಹಟ್ಟಿಜಾತ್ರೆ'

ನಾಯಕನಹಟ್ಟಿ ಚಿತ್ರದುರ್ಗ ಜಿಲ್ಲೆಯ ಪೂರ್ವದಂಚಿನ ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ 22 ಕಿ.ಮೀ. ದೂರದಲ್ಲಿದೆ. ಇಲ್ಲಿ ಪ್ರತಿ ವರ್ಷ ಫಾಲ್ಗುಣ ಬಹುಳದಲ್ಲಿ 'ತಿಪ್ಪೇರುದ್ರಸ್ವಾಮಿ' ಎಂಬ ಅವಧೂತನ ಬಹುದೊಡ್ಡ ಜಾತ್ರೆ ಹೋಳಿ ಹುಣ್ಣಿಮೆಯಲ್ಲಿ ನಡೆಯುತ್ತದೆ. ಚಿತ್ತಾ ನಕ್ಷತ್ರದ ತದಿಗೆಯಂದು ಭಾರೀ ರಥೋತ್ಸವವೂ ಜರಗುತ್ತದೆ. ಈ ಜಾತ್ರೆ ಶಿಷ್ಟ-ಪರಿಶಿಷ್ಟಗಳ ಒಂದು ಅದ್ಭುತ ಸಂಗಮವೂ ಆಗಿದೆ. ಈ ಜಾತ್ರೆಯ ಪ್ರಭಾವ, ಅಗಾಧತೆ ಅದೆಷ್ಟು ದೊಡ್ಡದೆಂದರೆ ನಾಯಕನಹಟ್ಟಿಯ ನಾಲ್ಕು ದಿಕ್ಕುಗಳಲ್ಲಿ ನೂರರಿಂದ ಇನ್ನೂರು ಕಿ.ಮೀ.ಗಳವರೆಗೂ ತನ್ನ ವ್ಯಾಪ್ತಿಯನ್ನು ಪಡೆದುಕೊಂಡಿರುವ, ಲಕ್ಷಾಂತರ ಜನಗಳನ್ನು ಸೆಳೆಯುವ, ಎಲ್ಲ ಶ್ರೇಣೀಕೃತ ವರ್ಗಗಳೂ ಇಲ್ಲಿ ಜಾತ್ಯಾತೀತವಾಗಿ ಲಕ್ಷಾಂತರ ಸಂಖ್ಯೆಯಲ್ಲಿ ಸೇರುವ ಒಂದು ಅಪರೂಪದ ಘಟನೆಯೂ ಆಗಿದೆ. ಇಲ್ಲಿ ಬಾಳಿ ಬದುಕಿದ ಈತನ ಬದುಕು ಪವಾಡ ಸದೃಶ ಘಟನೆಗಳಿಂದ ಕೂಡಿದ್ದು, ಜನಮನಗಳಲ್ಲಿ ದಂತಕತೆಯಾಗಿ ಬೆಳೆದಿರುವುದನ್ನು ಕಾಣಬಹುದು. ಆಶ್ಚರ್ಯಕರವೆಂಬಂತೆ ಈತನನ್ನು ಕುರಿತ ಲಿಖಿತ ಮಾಹಿತಿ ಏನೇನೂ ದೊರೆಯದಿದ್ದರೂ ಜಾನಪದದಲ್ಲಿ ಮಾತ್ರ ಸಮೃದ್ಧ ಮಾಹಿತಿಗಳು ದೊರೆಯುತ್ತವೆ. ಇತಿಹಾಸ ಮೌನವಾದಾಗ ಜಾನಪದ ಮಾತನಾಡುತ್ತದೆ. ಹೀಗಾಗಿ ಈತನನ್ನು ಜಾನಪದದ ನೆಲೆಯಿಂದ ನೋಡುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಹಟ್ಟಿಯ ನೆಲೆಯನ್ನು ಮೊದಲು ಸ್ಥಾಪಿಸಿದವರು 'ನಾಯಕ'ರಾದುದರಿಂದ ಇದು ಸಹಜವಾಗಿ 'ನಾಯಕನಹಟ್ಟಿ' ಎನಿಸಿಕೊಂಡಿತು. ಆದ್ದರಿಂದ ಇವರನ್ನು 'ಹಟ್ಟಿ ಪಾಳೆಯಗಾರರು ಅಥವಾ ಹಟ್ಟಿನಾಯಕರು' ಎಂದೇ ಗುರುತಿಸಲಾಗಿದೆ. ನಾಯಕನಹಟ್ಟಿ ಸ್ಥಳನಾಮ ಸಂಕ್ಷಿಪ್ತಗೊಂಡು 'ಹಟ್ಟಿ' ಎಂದೇ ಹೆಸರಾದುದರಿಂದ, ಇಲ್ಲಿ ನಡೆಯುವ ಜಾತ್ರೆ ಗ್ರಾಮೀಣರ ಬಾಯಲ್ಲಿ 'ಪರಿಸೆ'ಯಾಗಿ, 'ಹಟ್ಟಿ ಪರಿಸೆ' ಎನಿಸಿಕೊಂಡಿದೆ.

ಹೋಳಿ ಹುಣ್ಣಿಮೆಯಲ್ಲಿ ನಡೆಯುವ ಈ ಜಾತ್ರೆ-ಈ ಸುತ್ತಿನಲ್ಲಿ 'ಹಟ್ಟಿಹುಣ್ಣಿಮೆ' ಎಂದೇ ಹೆಸರಾಗಿದೆ. ಶಿಷ್ಟರಲ್ಲಿ 'ತಿಪ್ಪೇರುದ್ರಸ್ವಾಮಿ' ಎಂದು ಸಂಸ್ಕೃತೀಕರಣಗೊಂಡಿರುವ ಈತನ ಹೆಸರು ಜನಪದರಲ್ಲಿ ಆತ್ಮೀಯವಾಗಿ 'ತಿಪ್ಪೇಸ್ವಾಮಿ, ತಿಪ್ಪಯ್ಯ' ಎಂದೇ ಚಲಾವಣೆಯಲ್ಲಿದೆ. ಈ ಸುತ್ತಿನ ಸುಮಾರು ನೂರು ಕಿಲೋಮೀಟರ್‌ನ ಫಾಸಲೆಯಲ್ಲಿ 'ತಿಪ್ಪೇಸ್ವಾಮಿ' ಹೆಸರುಳ್ಳ ಸಾವಿರಾರು ಜನ ಎಲ್ಲ ಜಾತಿ, ಬುಡಕಟ್ಟುಗಳಲ್ಲೂ ಸಿಗುತ್ತಾರೆ

ಎನ್ನುವುದನ್ನು ಗಮನಿಸಿದರೆ ತಿಪ್ಪೇಸ್ವಾಮಿ ಜನಮನದ ಆರಾಧ್ಯದೇವತೆ. ಅತ್ಯಂತ ಜನಪ್ರಿಯ ದೇವರು ಎಂಬುದು ಮನದಟ್ಟಾಗುತ್ತದೆ. ಈ ನಿಟ್ಟಿನಲ್ಲಿ ಹೆಂಗಸರೂ ಹಿಂದೆ ಬಿದ್ದಿಲ್ಲ, ತಿಪ್ಪೇಸ್ವಾಮಿಯಷ್ಟೇ ಸಂಖ್ಯೆಯ ತಿಪ್ಪಮ್ಮಗಳೂ ಸಿಗುತ್ತಾರೆ. ಹಟ್ಟಿಯಲ್ಲಿ ನೆಲಸಿದ ಈತನನ್ನು ಹಟ್ಟಿ+ಅಪ್ಪ >ಹಟ್ಟಿ ಅಪ್ಪ >ಹಟ್ಟೆಪ್ಪ ಎಂದೂ ಕರೆಯುವುದರಿಂದ 'ಹಟ್ಟೆಪ್ಪ' ಹೆಸರಿನ ಅನೇಕರು ಸಿಗುತ್ತಾರೆ. ಕೆಲವರು ಹಟ್ಟಿಯೊಂದಿಗೆ 'ರುದ್ರ' ನನ್ನೂ ಸೇರಿಸಿ 'ಹಟ್ಟಿರುದ್ರಪ್ಪ'ಗಳೂ ಆಗಿದ್ದಾರೆ. ಈ ಭಾಗದ ಸಾವಿರಾರು ಕುಟುಂಬಗಳಿಗೆ ತಿಪ್ಪೇಸ್ವಾಮಿ ಮನೆದೇವರು, ಮನದ ದೇವರು.



ಈ ಅವಧೂತನಿಗೆ ಈ ಹೆಸರು ಬಂದುದರ ಬಗ್ಗೆಯೂ ಒಂದು ಸ್ವಾರಸ್ಯಕರವಾದ ಐತಿಹ್ಯವಿದೆ. ಈತ ಮೊದಲು ಹಟ್ಟಿಗೆ ಬಂದಾಗ ತಿಪ್ಪೇಗುಂಡಿಗಳಲ್ಲಿ ಇರುತ್ತಿದ್ದನಂತೆ, ಅನೇಕ ಅವಧೂತರು ಹೀಗೆ ಕೊಳ-ಕೊಳಕಾಗಿ ಇರುತ್ತಿದ್ದ ಕತೆಗಳೊಂದಿಗೆ ಈತನ ಕತೆಯನ್ನೂ ಹೋಲಿಸಿ ನೋಡಬಹುದು. ಹೀಗಾಗಿ 'ತಿಪ್ಪೆ'ಯಲ್ಲಿ ಇರುತ್ತಿದ್ದ ಈ 'ಸ್ವಾಮಿ'ಯನ್ನು ಅವರು ಸಹಜವಾಗಿ 'ತಿಪ್ಪೇಸ್ವಾಮಿ' ಎಂದು ಕರೆದಿದ್ದರೆ ಆಶ್ಚರ್ಯವಿಲ್ಲ.'ತಿಪ್ಪೇರುದ್ರಸ್ವಾಮಿ' ಶಿಷ್ಟ ಹೆಸರು ಶೈವೀಕರಣಗೊಂಡ ಕತೆಯನ್ನು ಹೇಳುವಂತಿದೆ. ಹೀಗೆ ಹೆಸರೇ ತನಗೆ ತಾನೇ ಒಂದು ಸಂಸ್ಕೃತಿಯನ್ನು ಧ್ವನಿಸುವುದನ್ನು ಗ್ರಹಿಸಬಹುದು. ಹೆಸರಿನ ಮೂಲದ ಅಧ್ಯಯನವೂ ಅನೇಕ ನಿಗೂಢ ಆಯಾಮಗಳನ್ನು ಬಿಚ್ಚಬಹುದು ಎಂಬುದಕ್ಕೆ ತಿಪ್ಪೇಸ್ವಾಮಿ ಅಷ್ಟೇ ಅಲ್ಲ ಕರ್ನಾಟಕದ ಸುಪ್ರಸಿದ್ಧ ಸಾಂಸ್ಕೃತಿಕ ವೀರರ ಕತೆಗಳೂ ಇಂತಹ ಸಾಂಸ್ಕೃತಿಕ ಕುತೂಹಲಗಳನ್ನು ಗರ್ಭೀಕರಿಸಿಕೊಂಡು ಶೈವೀಕರಣದ ಸೋಗುಹಾಕಿಕೊಂಡಿರುವುದನ್ನು ಗಮನಿಸಬಹುದು.

ಮಾದಿಗರ ಮಾದಪ್ಪ ಮಲೆಮಾದೇಶ್ವರನಾಗಿ, ಹೊಲೆಯರ ಮಂಟೇಸ್ವಾಮಿ ಧರೆಗೆ ದೊಡ್ಡವರಾಗಿ ಶೈವೀಕರಣಗೊಂಡ ಕತೆಗಳ ಹಿನ್ನೆಲೆಯಲ್ಲೇ ತಿಪ್ಪೇಸ್ವಾಮಿಯ ಹುಟ್ಟನ್ನು ಪರಿಶೀಲಿಸಬಹುದು.

ತಿಪ್ಪೇಸ್ವಾಮಿಯನ್ನು ಪಂಚಗಣಾಧೀಶ್ವರರಲ್ಲಿ ಒಬ್ಬನೆಂದೂ, ಕಲ್ಯಾಣದಿಂದ ಹೊರಟವನೆಂದೂ ಕೆಲವು ಕೃತಿಗಳು ಹೇಳುವ ಸತ್ಯಾಸತ್ಯತೆಯನ್ನು ಪರಿಶೀಲಿಸಬಹುದು. ಹಟ್ಟಿಯ ಪಾಳೆಯಪಟ್ಟು ಅಸ್ತಿತ್ವಕ್ಕೆ ಬಂದುದೇ 16ನೇ ಶತಮಾನದ ಕೊನೆಯಲ್ಲಿ. ಬಹುಶಃ ತಿಪ್ಪೇಸ್ವಾಮಿ 17ನೇ ಶತಮಾನದ ಆರಂಭದಲ್ಲಿ ಬದುಕಿರಬಹುದು-ಎಂದಾಗ ಬಸವಣ್ಣನ ಕಾಲದ ಕಲ್ಯಾಣದ ಕಾಲ ಕಾಲ್ಪನಿಕವಾದುದು ಎನ್ನದೆ ವಿಧಿಯಿಲ್ಲ. ನಾಯಕನಹಟ್ಟಿ ಪಾಳೆಯಗಾರರ ವಂಶಾವಳಿಯೂ ಈ ಅವಧೂತ ಬದುಕಿದ್ದ ಬಗ್ಗೆ ತುಟಿ ಪಿಟಿಕ್ ಎನ್ನುವುದಿಲ್ಲ! ಆದರೆ ಅದೇ ಹಟ್ಟಿ ವಂಶಕ್ಕೆ ಸೇರಿದ ಮ್ಯಾಸಬೇಡರ ಸಾಂಸ್ಕೃತಿಕ ವೀರರಾದ ಜಗಳೂರು ಪಾಪನಾಯಕ, ಗಾದಿರಿಪಾಲನಾಯಕರ ಬಗ್ಗೆ ವಂಶಾವಳಿಯಲ್ಲಿ ಉಲ್ಲೇಖ ದೊರೆಯುತ್ತದೆ ಹಾಗೂ ಜನಪದಗೀತೆಯೊಂದು

'ಹಟ್ಟೀಯ ತಿಪ್ಪಯ್ಯ ಜಗಲೂರು ಪಾಪಯ್ಯ
ಸಿಕ್ಕೇರಿ ಕೋಡಿ ಬಸುವಯ್ಯ-ಇವ್ರು ಮೂವಾರು
ಲೆತ್ತನ್ಯಾಡ್ಯಾರೆ ಕೆರಿಯಾಗೆ'

ಎಂದು ಹೇಳುವುದರಿಂದ ಇವನು ಬಹುಶಃ ಜಗಲೂರು ಪಾಪನಾಯಕನ ಕಾಲದವನೇ ಇರಬೇಕು ಎಂದು ತರ್ಕಿಸುವುದು ಸರಿಯಾಗುತ್ತದೆ.

ಹಟ್ಟಿಪಾಳೆಯಗಾರ ಬೋಡಿಮಲ್ಲಪ್ಪನಾಯಕ ತಿಪ್ಪೇಸ್ವಾಮಿಗೆ ದೊರೆತನವನ್ನೇ ಧಾರೆ ಎರೆದ ದಂತಕತೆ ಬಹು ಮುಖ್ಯವಾದ ಘಟನೆ, ಇದರ ಉಲ್ಲೇಖ ಈಗ ದೊರೆತಿರುವ ಹಟ್ಟಿ ಪಾಳೆಯಗಾರರ ವಂಶಾವಳಿಯಲ್ಲಿ ಖಂಡಿತಾ ಇರಬೇಕಾಗಿತ್ತು, ಅಲ್ಲಿ ಇಲ್ಲದಿರುವುದು ಅನೇಕ ಅನುಮಾನಗಳಿಗೆ ಕಾರಣವಾಗುತ್ತದೆ. ಬಹುಶಃ ತಿಪ್ಪೇಸ್ವಾಮಿಯ ಮಹಿಮೆಯನ್ನು ಪ್ರಚುರಪಡಿಸಲು ಶಿಷ್ಯರ್ಯಾರೋ ಹುಟ್ಟುಹಾಕಿದ ಕಟ್ಟುಕತೆಯೂ ಇದಿರಬಹುದು ಎನಿಸುತ್ತದೆ. ಜಾನಪದ ಮೂಲದಲ್ಲಿ ಈ ಕತೆಗೆ ಸಮರ್ಥನೆ ದೊರೆಯುವುದಿಲ್ಲ. ಇಂಥದೇ ಇನ್ನೊಂದು ಪ್ರಕರಣ-ಮಕ್ಕಳಿಲ್ಲದ ಹೈದರಾಲಿ ಹರಕೆ ಮಾಡಿಕೊಂಡಿದ್ದರಿಂದ ಹುಟ್ಟಿದ ಮಗನಿಗೆ ತಿಪ್ಪುಸುಲ್ತಾನ್ ಎಂದು ಹೆಸರಿಟ್ಟುದು ಟಿಪ್ಪುಸುಲ್ತಾನ್ ಆಯಿತೆಂದು, ಹೊರಮಠದ ಸಮಾಧಿಮಂಟಪ ಗುಂಬಜ್ ಆಕಾರದಲ್ಲಿರುವುದರಿಂದ ಅದನ್ನು ಹರಕೆ ತೀರಿಸಲು ಹೈದರಾಲಿಯೇ ಕಟ್ಟಿಸಿದನೆಂದು ಹೇಳುವ ಕತೆಯನ್ನೂ ಜನಪದ ಮೂಲಕ್ಕೆ ಆರೋಪಿಸುವುದು ಕೂಡ ನಡೆದಿದೆ. ಆದರೆ ಈ ಸಮಾಧಿಮಂಟಪವನ್ನು ಚಿತ್ರದುರ್ಗದ ದೊರೆ ಭರಮಣ್ಣನಾಯಕನ (ಕ್ರಿ.ಶ. 1689-1721) ಬಳಿ ಅಧಿಕಾರಿಗಳಾಗಿದ್ದ ಗುಂಟನೂರು ಮಲ್ಲಪ್ಪ, ನರಸಪ್ಪಯ್ಯ ಕಟ್ಟಿಸಿದರೆಂದು ಸ್ಪಷ್ಟವಾದ ದಾಖಲೆಯೂ ದೊರೆತ ಮೇಲೆ-ಈ ಕತೆಗಳನ್ನು ಕಲ್ಪಿತ ಎನ್ನದೆ

ವಿಧಿಯಿಲ್ಲ. ಅಲಿಖಿತವಾದದ್ದನ್ನೆಲ್ಲಾ ಜಾನಪದ ಮೂಲಕ್ಕೆ ಆರೋಪಿಸುವ ಬುದ್ಧಿವಂತರ ಈ ಸೋಗನ್ನು 'ಕೃತಕ ಜಾನಪದ' ಎಂದು ವರ್ಗೀಕರಿಸಬೇಕಾಗುತ್ತದೆ. ಈ ಘಟನೆಗಳ ಕಾಲ್ಪನಿಕ ಚಿತ್ರಗಳನ್ನು ಬಿಡಿಸಿ ಮಠದ ಆವರಣದಲ್ಲಿ ಇಡಲಾಗಿದ್ದು, ಜಾನಪದ ಮೂಲದ ಸೋಗು ಹಾಕಿದ ಇವು ಜನಪದರ ಬಳಿಗೆ ಶಿಷ್ಟ ಮೂಲದಿಂದ ಹೋಗುವ ಈ ಪ್ರಕ್ರಿಯೆ 'ಶಿಷ್ಟ ಜಾನಪದ'ದ ಕೃತಕ ಮುಖವನ್ನು ತೋರುತ್ತದೆ.

ತಿಪ್ಪೇಸ್ವಾಮಿಗೆ ಆರೋಪಿಸುವ ಶೈವ ಮುಖವಾಡದ ಬಗ್ಗೆ ಈ ಕೆಳಗಿನ ಜನಪದ ಗೀತೆಗಳು ಅನೇಕ ಶಂಕೆಯನ್ನು ಹುಟ್ಟು ಹಾಕುತ್ತವೆ-

ಲಿಂಗ ಜಂಗುಮರಿಗೆ ಒಳಮಠವೆ ಇರುಲೆಂದು
ಬ್ಯಾಡಾರ ಸಂಗಾಕೆ ಹೋದಾನೆ - ತಿಪ್ಪಯ್ಯ
ಹೊರಮಠದಲ್ಲಿವರು ಇರುಲೆಂದು

ಬ್ಯಾಡಾರ ಸಂಗಾಕೆ ಹೋದಾನೆ ತಿಪ್ಪಯ್ಯ
ಮದ್ದೂ ಮಾಂಸಗಳ ಮಾಡಿಂದ-ಹೊರುಮಠಕೆ
ಎಡಿಯೇ ತಿಪ್ಪಯ್ಯಗೆ ಇರುಲೆಂದ.

ಈ ಪದಗಳು ಇತಿಹಾಸದ ಕಟುಸತ್ಯವನ್ನು ಹೇಳುವಂತಿವೆ. ಬ್ಯಾಡರ ಸಂಗಕ್ಕೆ ಹೊರಮಠಕ್ಕೆ ಹೋದ ತಿಪ್ಪಯ್ಯ ಅಲ್ಲೇ ನೆಲೆಗೊಂಡು ಸಮಾಧಿಯಾದುದೂ, ಅದನ್ನು ಇಂದಿಗೂ ಬೇಡ ಪೂಜಾರಿಗಳೇ ಪೂಜಿಸುತ್ತಿರುವುದೂ ಏನನ್ನೂ ಹೇಳುತ್ತದೆ? ಮದ್ದುಮಾಂಸದ ಎಡೆಬೇಡುವ ಈ ತಿಪ್ಪಯ್ಯನನ್ನು ಯಾವ ಮೂಲದವನೆನ್ನಬೇಕು? ಮೇಲಿನ ಪದಗಳು ಅವನನ್ನು ಬೇಡಮೂಲಕ್ಕೆ ಸೆಳೆಯುತ್ತಿಲ್ಲವೇ?

ಇದನ್ನು ಬುಡಕಟ್ಟು ಮತ್ತು ಶಿಷ್ಟಗಳ ಸಾಂಸ್ಕೃತಿಕ ಮುಖಾಮುಖಿ ಎನ್ನಲೇ? ಪಟ್ಟಿ ಪಾಳೆಯಗಾರರು ಇವನನ್ನು ಬೇಡಮೂಲದವನೆಂದು ನಿರ್ಲಕ್ಷಿಸಿದರೇ? ಇವನು ವೀರಶೈವ ಮೂಲದವನಾಗಿದ್ದರೆ ಮನ್ನಣೆ ದೊರೆಯದೆ ಇರುತ್ತಿತ್ತೇ? ಇನ್ನೊಂದು ಮೂಲದ ಪ್ರಕಾರ ಈತನನ್ನು ಮಾದಿಗರು ಎಂದು ಊಹಿಸುತ್ತಾರೆ. ಇದನ್ನು ಸಮರ್ಥಿಸುವಂತೆ ಈತನ ರಥೋತ್ಸವದಲ್ಲಿ ಮಾದಿಗರು ಬಂದು 'ಗಿಣ್ಣನ ಎಡೆ' ಹಾಕಿದ ನಂತರವೇ ತೇರು ಮುಂದೆ ಹರಿಯುವುದು. ಮಾದಿಗರ ಮನೆಯಲ್ಲಿ ಊಟ ಮಾಡುತ್ತಿದ್ದ ಈತನನ್ನು ಕಂಡ ಶಿಷ್ಯ ಫಣಿಯಪ್ಪ ಗುರುವಿನ ಮೇಲೆ ಹೇಸಿಕೊಂಡು ಮನೆಗೆ ಬಂದು ನೋಡಿದರೆ ಅಲ್ಲಿ ಲಿಂಗಪೂಜೆಯಲ್ಲಿ ನಿರತನಾಗಿದ್ದ ಪವಾಡ ಕತೆ ಯಾವ ಸತ್ಯವನ್ನು ತನ್ನ ಉದರದಲ್ಲಿ ಧರಿಸಿದೆ? ಇಂದು ವೀರಶೈವ ಸಾದರ ಆರಾಧ್ಯಗುರುವಾದ ಮರುಳಸಿದ್ಧ ಮೂಲತಃ ಮಾದಿಗರವನೆಂದು ಎಲ್ಲರಿಗೂ ತಿಳಿದಿರುವ ಸತ್ಯ. ಅದಕ್ಕೆ ಸಾದರ ಕೋಮಿನವರನ್ನು 'ಸಾದರೋ ಮಾದಿರೋ' ಎನ್ನುವುದು. ಕಾಲಾಂತರದಲ್ಲಿ ಮಾದೇಶ್ವರ, ಮಂಟೇಸ್ವಾಮಿ, ಮರುಳಸಿದ್ಧರಂತೆ ತಿಪ್ಪಯ್ಯನೂ ಶೈವೀಕರಣಕ್ಕೆ ಒಳಗಾಗಿರಬಾರದೇಕೆ? ಹೀಗೆ ಅನೇಕ ಪ್ರಶ್ನೆಗಳು ಪ್ರಶ್ನೆಗಳಾಗೇ ಉಳಿದುಬಿಡುತ್ತವೆ.

ಐತಿಹಾಸಿಕ ಸತ್ಯಗಳು ಪವಾಡಗಳಾಗಿಯೋ, ಪುರಾಣಕತೆಗಳಾಗಿಯೋ, ಒಗಟುಗಳಾಗಿಯೋ ಮುಸುಕುಹಾಕಿ ಬಿಡುತ್ತವೆ. ಜಾನಪದದ ಕೀಲಿಕೈ ಮೂಲಕ ಇತಿಹಾಸದ ಮಾಯಾಂಗನೆಯ ಮುಸುಕನ್ನು ತೆಗೆಯಬೇಕು.

ಬೋಡಿ ಮಲ್ಲಪ್ಪನಾಯಕನ ಕಾಲದಲ್ಲಿ ಕಟ್ಟಿದ್ದೆಂದು ವಂಶಾವಳಿಯಲ್ಲಿ ಸ್ಪಷ್ಟವಾಗಿ ಉಲ್ಲೇಖಿತವಾಗಿರುವ ಹಿರೇಕೆರೆಯ ನಿರ್ಮಾಣದ ಪವಾಡವನ್ನು ಜಾನಪದ ತಿಪ್ಪೇಸ್ವಾಮಿಗೇ ಆರೋಪಿಸಿಬಿಡುತ್ತದೆ. ರಾಜಸತ್ತೆ ನಿರ್ಲಕ್ಷಿಸಿದ ಸಂತನನ್ನು ಜಾನಪದ ಜೀವಂತಗೊಳಿಸಿದೆಯೇ? ಕೆರೆಕಟ್ಟುವ ಕೆಲಸ ಮಾಡಿದ ಕಾರ್ಮಿಕರು ಸಂಜೆ ತಮ್ಮ ಮುಂದೆ ಮರಳುಗುಡ್ಡೆ ಮಾಡಿ ಕುಳಿತಾಗ, ತಿಪ್ಪೇಸ್ವಾಮಿ ಅದಕ್ಕೆ ಬೆತ್ತಮುಟ್ಟಿಸಿ 'ಮಾಡಿದವರಿಗೆ ನೀಡು ಭಿಕ್ಷೆ' ಎಂದಾಗ ಅವರವರ ಶ್ರಮಕ್ಕೆ ತಕ್ಕ ಹಣ ದೊರೆಯುತ್ತಿತ್ತಂತೆ! ಕಾಯಕ ತತ್ವವನ್ನು ಜಾನಪದ ಈ ರೀತಿ ಗುರುತಿಸಿ ಗೌರವಿಸಿದೆಯೇ? ಜಾನಪದ ಜನತೆಯ ನಾಯಕನನ್ನು ಗೌರವಿಸುತ್ತಿದೆಯೇ? ಈ ಪವಾಡ ಮುಂದುವರೆದು ಕೆರೆ ಕಟ್ಟುವ ಕಾಯಕದಲ್ಲಿ ಭಾಗಿಗಳಾದ ಬಸಿರಿ ಹೆಂಗಸರಿಗೆ, ಹೊಟ್ಟೆಯೊಳಗಿರುವ ಮಗುವಿಗೂ ಸೇರಿದಂತೆ ಎರಡು ಪಟ್ಟು ಕೂಲಿ ದೊರೆಯುವ ಸಂಗತಿ ಹೇಳುತ್ತದೆ. ಅದರ ಪಳೆಯುಳಿಕೆ ಎಂಬಂತೆ ಈ ಕೆರೆಯ ಮಾಗಾಣೆಯಲ್ಲಿ ಕೆಲಸ ಮಾಡಿದ ಬಸಿರು ಹೆಂಗಸರಿಗೆ 'ಬಸಿರುಪಟ್ಟು' ಎಂದು ಎರಡು ಪಟ್ಟು-ಕೂಲಿಕೊಡುವ ಪರಿಪಾಠ ಇಂದಿಗೂ ನಡೆದುಕೊಂಡು ಬಂದಿರುವುದು ಏನನ್ನು ಹೇಳುತ್ತದೆ? ಇಲ್ಲಿ ಜಾನಪದ ಮಾನವೀಯ ಕಾರಣಕ್ಕಾಗಿ ಮಿಡಿದಿದೆ.

ಶಿಷ್ಯ ಘಣೆಯಪ್ಪನೊಂದಿಗೆ ಇದ್ದಾಗ ನಡೆಸುವ ಪವಾಡಗಳೂ ಇವನ ವ್ಯಕ್ತಿತ್ವವನ್ನು ಬಿಡಿಸಿಡುವುದರೊಂದಿಗೆ, ಜಾನಪದ ಪವಾಡಗಳಿಗೂ ಸ್ಪಂದಿಸುವ ರೀತಿ ಗೋಚರವಾಗುತ್ತದೆ. ಅವನನ್ನೊಬ್ಬ ಅಸಾಧಾರಣ ವ್ಯಕ್ತಿಯನ್ನಾಗಿ ರೂಪಿಸಲು ಪವಾಡಗಳ ಮೂಲಕ ಜಾನಪದವು ರೋಮಾಂಚಿತಗೊಳ್ಳುವ ಪರಿ ಜನಪದ ಗೀತೆಗಳಲ್ಲಿ ವ್ಯಕ್ತವಾಗಿದೆ.

ತಿಪ್ಪೇಸ್ವಾಮಿ ಯಾವ ತಾತ್ವಿಕ ಮಾರ್ಗಕ್ಕೆ ಸೇರಿದವನು ಎಂಬುದು ಜಿಜ್ಞಾಸೆಯಾಗಿಯೇ ಉಳಿದಿದೆ. ಅವನು ವಚನಗಳನ್ನು ರಚಿಸಿಲ್ಲ, ತತ್ವಪದಗಳನ್ನು ರಚಿಸಿಲ್ಲದಿರುವುದು ಸಾಂಸ್ಕೃತಿಕ ಆಶ್ಚರ್ಯಗಳಲ್ಲೊಂದಾಗಿಯೇ ಉಳಿದಿದೆ. ಶಿಷ್ಟ ಸಂಸ್ಕೃತಿ ಆರೋಪಿಸುತ್ತಿರುವಂತೆ ಅವನೊಬ್ಬ 'ತಿಪ್ಪೇರುದ್ರಸ್ವಾಮಿ' ಅಲ್ಲ, ಅವನೊಬ್ಬ ಜನಪದ ಸಂಸ್ಕೃತಿಯ ಸ್ನಿಗ್ಧ-ಮುಗ್ಧ, ಭಂಗಿ-ಮಾಂಸದ ಅವಧೂತ 'ತಿಪ್ಪಯ್ಯ'ನೇ ಇರಬೇಕೆಂದು ಇತಿಹಾಸದ ಮರೆಗಳಲ್ಲಿ ಅಸ್ಪಷ್ಟಗೊಂಡ ಹೆಜ್ಜೆಗಳು ಹೇಳುವಂತಿಲ್ಲವೇ? ಹೊರಮಠದ ಬಳಿ ಜಾತ್ರೆಯ ಸಂದರ್ಭದಲ್ಲಿ ಭಂಗಿಯ ಗುಂಗಿನ ಸಾವಿರಾರು ಸಾಧು-ಸಂತರು ನೆರೆದರೆ, ಬಿಡಿ ದಿನಗಳಲ್ಲೂ ತಂಬೂರಿ ಹಿಡಿದ ಸಾಧು-ಸಂನ್ಯಾಸಿಗಳು ಹತ್ತಾರು ಸಂಖ್ಯೆಯಲ್ಲಿ ಇದ್ದೇ ಇರುತ್ತಾರೆ.

ಇತಿಹಾಸ ದಾಖಲಿಸಲು ಮರೆತ ಘಟನೆಗಳನ್ನು ಜಾನಪದ ಐತಿಹ್ಯಗಳ ರೂಪದಲ್ಲಿ ಜೀವಂತಗೊಳಿಸುತ್ತದೆ. ಚಿತ್ರದುರ್ಗದ ಲಿಖಿತ ಚರಿತ್ರೆ ಮರೆತ ಒನಕೆ ಓಬವ್ವ ಜಾನಪದದಲ್ಲಿ ಜೀವಂತಗೊಂಡಂತೆ; ಹಟ್ಟಿ ತಿಪ್ಪಯ್ಯನೂ ಜೀವಂತವಾಗಿರುವುದೂ ಜಾನಪದದಲ್ಲೇ ಎಂಬುದಕ್ಕೆ ಅವನ ಪವಾಡ ಕತೆಗಳೇ ಸಾಕ್ಷಿಯಾಗಿವೆ. ಹಟ್ಟಿ ತಿಪ್ಪಯ್ಯ, ಹಟ್ಟಿಜಾತ್ರೆ ಜನಮನದಲ್ಲಿ

ನಾಣ್ಣುಡಿಯಾಗಿ ಬೆರೆತುಹೋಗಿದೆ ಎಂಬುದನ್ನು-'ತಿಪ್ಪೇಸ್ವಾಮಿ ಪರಿಸೊತ್ತಿಗೆ ತಿಪ್ಪೆಗುಂಡೆಲ್ಲ ನೀರು' ಎಂಬ ಮಾತೇ ಹೇಳುತ್ತದೆ. ಈ ಸುತ್ತಿನಲ್ಲಿ ಹೊಸದಾಗಿ ಮದುವೆಯಾದ ಜೋಡಿಗಳು 'ಹಟ್ಟಿ ಪರಿಸೆ ತೇರಿನ ಕಳಶ' ನೋಡಲೇಬೇಕು ಎಂಬ ಸಂಪ್ರದಾಯವಿದೆ. ಹಟ್ಟಿಯ ತೇರು ನಮ್ಮ ಜನಪದದಲ್ಲಿ ಬೆರೆತು ಹೋಗಿರುವುದನ್ನು ಈ ಹೆಣ್ಣಿನ ಕಣ್ಣಿನ ಗ್ರಹಿಕೆಯ ಮೂಲಕ ತಿಳಿಯಬಹುದು-ಮಗಳನ್ನು ಮದುವೆ ಮಾಡಿ ಗಂಡನ ಮನೆಗೆ ಕಳಿಸಿದ ತಾಯಿ-'ಹುಚ್ಚೀನೆ ತಾಯಿ ಮರುಳೀನೆ ನಾಯ್ಕನಟ್ಟಿ ಉಚ್ಚಾಯ ನೋಡಿ ಮರಿಯಾಕೆ' ಎನ್ನುವಲ್ಲಿ ಆಕೆಯ ತಾಯಿ ಪ್ರೇಮ ವ್ಯಕ್ತವಾಗುವುದರೊಂದಿಗೆ 'ನಾಯ್ಕನಹಟ್ಟಿಯ ಉಚ್ಚಾಯ (ಸಣ್ಣತೇರು)' ತನ್ನ ಪ್ರಾದೇಶಿಕತೆಯೊಂದಿಗೆ ಬೆರೆತಿರುವುದನ್ನು ಕಾಣಬಹುದು.



ಜಾತ್ರೆಯಲ್ಲಿ ಹರಿಯುತ್ತಿರುವ ರಥದ ಮೇಲೆ ಬಾಳೆಹಣ್ಣು, 'ಬೆಲ್ಲ-ಮೆಣಸು-ಮಂಡಕ್ಕಿ'. ದವನ ಸೂರು ಬಿಡುವುದು ಸರ್ವೇ ಸಾಮಾನ್ಯ ದೃಶ್ಯ. ರಥದ ಮೇಲೆ ಸೂರಿದ ಬಾಳೆಹಣ್ಣು ನೆರೆದ ಜನಗಳ ಮೇಲೆ ಬೀಳುವಾಗಲೇ ಅದನ್ನು 'ಪ್ರಸಾದ'ವೆಂದು ಹಿಡಿಯಲು ಮುಗಿ ಬೀಳುತ್ತಾರೆ. ನೆಲದ ಮೇಲೆ ಬಿದ್ದ ಮೆಣಸನ್ನು ಆರಿಸಿಕೊಂಡುಹೋಗಿ ಪ್ರಸಾದದ ರೀತಿಯಲ್ಲಿ ಬಳಸುತ್ತಾರೆ.

ತಿಪ್ಪೇಸ್ವಾಮಿಗೆ ಜಾತ್ರೆಯ ಸಂದರ್ಭದಲ್ಲಿ 'ಹಣ್ಣು-ಕಾಯಿ'ಯ ಕಾಣಿಕೆಗಿಂತ ಹೆಚ್ಚಾಗಿ ಕೊಬ್ಬರಿ ಸುಡುವ ಹರಕೆಗಳೇ ಹೆಚ್ಚು. ಜಾತ್ರೆಯಲ್ಲಿ ಸಾವಿರಾರು ಕ್ವಿಂಟಾಲ್‌ಗಳ ಕೊಬ್ಬರಿಯ ದಹನವಾಗುತ್ತದೆ. ಅವಧೂತರ ಜಾತ್ರೆಗಳಲ್ಲಿ ಮಾತ್ರ ವಿಶಿಷ್ಟವೆಂಬಂತೆ ಬಳಕೆಯಾಗುವ 'ಕೊಬ್ಬರಿ' ಏನನ್ನು ಸಂಕೇತಿಸುತ್ತದೆ? ಕಾಯಿ-ಹಣ್ಣಿನ ಸ್ಥಿತಿ ನಂತರದ ಪಕ್ವತೆಯನ್ನು ಸಂಕೇತಿಸುವಂತೆ. ಎಲ್ಲ ಶ್ಲೇಷೆಯನ್ನು ಕಳೆದುಕೊಂಡಂತೆ ನೀರು ಹಿಂಗಿಸಿಕೊಂಡ ಕೊಬ್ಬರಿ ಸ್ಥಿತಿ 'ಅವಧೂತ ಸ್ಥಿತಿ'ಯನ್ನು ಸಂಕೇತಿಸುತ್ತಿದೆಯೇ? ಸುಟ್ಟಕೊಬ್ಬರಿಯ ಧೂಳಿತವನ್ನೇ ವಿಭೂತಿಯಂತೆ ಬಳಸುತ್ತಾರೆ.

ಮತ್ತೊಂದು ಹೇಳಿಕೆಯ ಪ್ರಕಾರ ಸ್ವಾಮಿಗಳು ರಾಯದುರ್ಗದಿಂದ ಬರುವಾಗ ಶಿಷ್ಯ ಫಣಿಯಪ್ಪ ಕಟ್ಟಿಗೆಯ ತುದಿಗೆ ಕೊಬ್ಬರಿ ಸಿಕ್ಕಿಸಿ, ಹಚ್ಚಿ, ಆದರ ಬೆಳಕಿನಲ್ಲಿ ಕರೆದುಕೊಂಡು ಬಂದ ಘಟನೆಯನ್ನು ಸಂಕೇತಿಸುತ್ತದೆ ಎನ್ನುವ ಐತಿಹ್ಯವೂ ಇದೆ.

ನಾಡಿನ ನಾನಾ ಭಾಗಗಳಿಂದ ವೈವಿಧ್ಯಮಯವಾದ ಜನಪದ ಕಲಾವಿದರು ಬಂದು ತಮ್ಮ ಕಲಾ ಪ್ರದರ್ಶನ ನೀಡುತ್ತಾರೆ. ನಂದಿಕೋಲು ಕುಣಿಸುವ, ಕರಡಿ ಮಜಲು ಬಾರಿಸುವ, ಕೋಲು ಹಾಕುವ, ಭಜನೆ ಮಾಡುವ ನೂರಾರು ತಂಡಗಳು ಬಂದಿರುತ್ತವೆ. ಒಟ್ಟಾರೆ ಇಲ್ಲೊಂದು ಪುಟ್ಟ ಜಾನಪದ ಮೇಳವೇ ನೆರೆದಿರುತ್ತದೆ.

ದೊಡ್ಡ ಪರಿಸೆ ನಡೆದ ಒಂದು ವಾರದ ನಂತರ 'ಮರಿ ಪರಿಸೆ' ನಡೆಯುತ್ತದೆ. ದೊಡ್ಡ ಪರಿಸೆಯಲ್ಲಿ ಭಾಗವಹಿಸಲು ಸಾಧ್ಯವಾಗದ ಆರ್ಥಿಕ ಕಷ್ಟದಲ್ಲಿರುವ ಬಡಜನತೆಯನ್ನು ದೃಷ್ಟಿಯಲ್ಲಿ ಇಟ್ಟುಕೊಂಡೇ ಈ ಮರಿಪರಿಸೆ ಹುಟ್ಟಿಕೊಂಡಿರಬೇಕು. ಇದು ಬಡಜನತೆಗೆ ಸ್ಪಂದಿಸುವ ಗುಣ ಇಟ್ಟುಕೊಂಡಿರುವುದರಿಂದಲೇ ತಿಪ್ಪೇಸ್ವಾಮಿ ಜನಸಾಮಾನ್ಯರ ದೈವವಾಗಿ ಉಳಿದಿದ್ದಾನೆ.

ಜಾತ್ರೆಗೆ ಹೋಗದೆ ಹಳ್ಳಿಯಲ್ಲೇ ಉಳಿದ ಜನ ಜಾತ್ರೆಗೆ ಹೋದ ಬಂಧುಗಳು ತರುವ ಬೆಂಡು-ಬತ್ತಾಸಿನ 'ಮೈತಿಂಡಿ'ಗಾಗಿ ಕಾಯುತ್ತಾರೆ. ಜಾತ್ರೆಗೆ 'ಬೇಟೆ' ತಂದವರು, ಅಲ್ಲಿ ಭೋಜನ ಮಾಡಿ ಉಳಿದಿದ್ದನ್ನು ಊರಿಗೆ ವಾಪಸ್ ಕೊಂಡೊಯ್ಯುವಂತಿಲ್ಲ, ಊರು ತಲುಪುವ ಮುನ್ನ ಮಧ್ಯದಲ್ಲೇ 'ಪರುವು' ಮಾಡಿ ಮುಗಿಸಿಬಿಡುತ್ತಾರೆ.

ಜಾತ್ರೆಗೆ ಹೋಗಲು ಸಾಧ್ಯವೇ ಆಗದ ಸಂದರ್ಭದಲ್ಲಿ, ಅಂದು ಮನೆಯಲ್ಲಿ ನೆಲ-ಕಾರಣೆ ಮಾಡಿ, ನಾಯ್ಕನ ಹಟ್ಟಿ ಇರುವ ದಿಕ್ಕಿಗೆ 'ಇದಿರೆತ್ತಿ' ಎಡೆಹಾಕಿ, ಕಾಯಿ ಒಡೆದು ಕೈ ಮುಗಿಯುವ ಮೂಲಕವೂ ಹಟ್ಟಿ ಒಕ್ಕಲಿನ ಜನ ತಮ್ಮ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ. ಅಂತೂ ತಿಪ್ಪೇಸ್ವಾಮಿ ಮಧ್ಯ ಕರ್ನಾಟಕದಿಂದ ಹಿಡಿದು ಪೂರ್ವಪಂಚಿನ ಪ್ರದೇಶದವರೆಗೂ ಜಾತ್ಯಾತೀತವಾಗಿ ಆವರಿಸಿಕೊಂಡಿರುವ ಜನಪದದೈವ, ಸಾಂಸ್ಕೃತಿಕ ವೀರ ಎಂಬುದರಲ್ಲಿ ಎರಡು ಮಾತಿಲ್ಲ.

* ಘಟ್ಟಿ ಹೊಸಳ್ಳಿಯ ಗಟ್ಟಿಗ (ಸಂಸ್ಮರಣ ಗ್ರಂಥ, 2002)

* ವಿಜಯ ಕರ್ನಾಟಕ (ನಾಯಕನಹಟ್ಟಿ ಜಾತ್ರೆ ವಿಶೇಷ ಪುರವಣಿ, 2003)

# ಜನಪದ ಸಾಹಿತ್ಯದಲ್ಲಿ 'ಮದಕರಿ' ಪಾಳೆಯಗಾರರು

ಚಿತ್ರದುರ್ಗ ಎಂದಾಕ್ಷಣ ನೆನಪಾಗುವುದು- ಹೆಬ್ಬಂಡೆಗಳಿಂದ ಕೂಡಿದ ಏಳು ಸುತ್ತಿನ ಕೋಟೆ, ಮದಕರಿ ನಾಯಕನ ಸಿಂಹಸದೃಶ ವ್ಯಕ್ತಿತ್ವ. ಚಿತ್ರದುರ್ಗವನ್ನು ಆಳಿ-ಬಾಳಿದ ಪಾಳೆಯಗಾರರ ಶೌರ್ಯ-ಪರಾಕ್ರಮಗಳ ಸಾಹಸ ಕಥೆ ಕಣ್ಣಮುಂದೆ ಹಾದು ಹೋಗುತ್ತದೆ. ಗಂಡುಮೆಟ್ಟಿನ ನಾಡಿನಲ್ಲಿ ಜನಿಸಿದ ಅವರ ಪ್ರತಾಪ-ಪರಾಕ್ರಮಗಳನ್ನು ಚಿತ್ರಿಸುವ ಸಾವಿರಾರು ಹಾಡುಗಳು ಇಂದಿಗೂ ಜನ-ಮನದಲ್ಲಿ ಅಚ್ಚಳಿಯದೆ ನೆಲೆ ನಿಂತಿವೆ. ಈ ಹಾಡುಗಳೆಲ್ಲಾ ಈ ಭಾಗದ ಅತ್ಯಂತ ಜನಪ್ರಿಯ ಪ್ರಕಾರಗಳಾದ ಕೋಲುಪದಗಳಲ್ಲಿ ಮತ್ತು ತ್ರಿಪದಿಗಳಲ್ಲಿ ಸಿಗುತ್ತವೆ. ಗೀತ ಸಾಹಿತ್ಯದಲ್ಲಿನ ಇವರ ಸಾಹಸಮಯ ಬದುಕನ್ನು ಇತಿಹಾಸ - ಜಾನಪದಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಅಗತ್ಯ ಎನಿಸುತ್ತದೆ.

ಮಧ್ಯ ಕರ್ನಾಟಕದ ಪೂರ್ವದಂಚಿಗೆ, ಆಂಧ್ರಪ್ರದೇಶಕ್ಕೆ ಹೊಂದಿಕೊಂಡಿರುವ ಚಿತ್ರದುರ್ಗದ ಇತಿಹಾಸ ಕ್ರಿ.ಪೂ. 3ನೇ ಶತಮಾನದಿಂದಲೇ ಪ್ರಾರಂಭವಾದರೂ ನಿಜವಾದ ಪ್ರಸಿದ್ಧ-ಪ್ರಖ್ಯಾತಿಗಳನ್ನು ಪಡೆದುದು ಪಾಳೆಯಗಾರರ ಕಾಲದಲ್ಲಿ. ಬೆಮ್ಮತ್ತನೂರು. ಚಿಂತರಕಲ್ಲು, (ಕೋಲು ಪದಗಳಲ್ಲಿ ಇಂದಿಗೂ ಚಿತ್ರದುರ್ಗವನ್ನು ಚಿತರಕಲ್ಲು ಎಂದೇ ಕರೆಯಲಾಗಿದೆ.) ಎಂದು ಇತಿಹಾಸದಲ್ಲಿ ಕಾಣಿಸಿಕೊಳ್ಳುತ್ತಿದ್ದುದು. ಪಾಳೆಯಗಾರರ ಕಾಲದಲ್ಲಿ ಚಿತ್ತರ(ಕಲ್ಲು)ದುರ್ಗವಾಗಿದ್ದುದು ಇದು ಚಿತ್ರದುರ್ಗವಾಗಿದೆ.

ವಿಜಯನಗರದ ಅರಸರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಪಾಳೆಯಪಟ್ಟುಗಳಲ್ಲಿ ಚಿತ್ರದುರ್ಗ ಪ್ರಮುಖವಾದುದು. ಚಿತ್ರದುರ್ಗದ ಸುತ್ತಿನಲ್ಲಿ ಹರಪನಹಳ್ಳಿ, ನಿಡಗಲ್ಲು, ರಾಯದುರ್ಗ, ಮತ್ತೋಡು, ತರೀಕೆರೆ, ಬಿದನೂರು ಮುಂತಾದ ಅನೇಕ ಪಾಳೆಯಪಟ್ಟುಗಳು ಇದ್ದವು. ವಿಜಯನಗರದ ಅರಸರಿಗೆ ಕಪ್ಪಕಾಣಿಕೆಗಳನ್ನು ಕೊಟ್ಟುಕೊಂಡು ಇದ್ದ ಇವರು ವಿಜಯನಗರ ಪತನಾನಂತರ ತಮ್ಮನ್ನು ಸ್ವತಂತ್ರರೆಂದು ಘೋಷಿಸಿಕೊಂಡರು. ಸಣ್ಣಪುಟ್ಟ ಪಾಳೆಯಪಟ್ಟುಗಳಿಗೆ ಮಗ್ಗುಲು ಮುಳ್ಳಾಗಿದ್ದ ಚಿತ್ರದುರ್ಗದ ಮೇಲೆ ಎಲ್ಲ ಪಾಳೆಯಗಾರರಿಗೂ ಕಣ್ಣು ಕಿಸುರು. ಹೀಗಾಗಿ ಮನುಷ್ಯ ಸಹಜವಾದ ಅಸೂಯೆಯಿಂದ ಈ ಪಾಳೆಯಪಟ್ಟುಗಳಲ್ಲಿ ಆಗಾಗ್ಗೆ ಘರ್ಷಣೆಗಳು ಸಂಭವಿಸುತ್ತಲೇ ಇದ್ದವು. ನೆರೆಯ ಪಾಳೆಯಗಾರರಿಗೆ ಸಿಂಹಸ್ವಪ್ನವಾಗಿದ್ದ ಚಿತ್ರದುರ್ಗದವರ ಸಾಹಸ, ಪರಾಕ್ರಮಗಳು ಸಹಜ ಹಾಡುಗಳಾಗಿ ಜನಗಳ ನಾಲಿಗೆಗಳಲ್ಲಿ ನಲಿದಾಡಿದವು.

ಈ ಪಾಳೆಯಗಾರರನ್ನು ಕುರಿತ ಹಾಡುಗಳಲ್ಲಿ ಏಕಮೇವಾದ್ವಿತೀಯವಾಗಿ ಮೆರೆಯುವ ಹೆಸರೆಂದರೆ ಮದಕೇರಿನಾಯಕನದು. ಚಿತ್ರದುರ್ಗದ ಇತಿಹಾಸದಲ್ಲಿ ಆಗಿಹೋದ ಮದಕೇರಿ ನಾಯಕರೂ ಬಹಳ ಮಂದಿ ಇದ್ದಾರೆ. ಆಳಿದ ಹನ್ನೊಂದು ಮಂದಿಯಲ್ಲಿ ಇವರೇ ಐವರು ಇದ್ದಾರೆ! ಮದಕರಿ ನಾಯಕ ಎಂಬ ಹೆಸರೇ ಸಾಹಸ, ಶೌರ್ಯ, ಪರಾಕ್ರಮಗಳಿಗೆ ಮತ್ತೊಂದು ಹೆಸರು ಎಂಬಂತಿದೆ.

ಕ್ರಿ.ಶ. 1589-1602ರ ಗಡ್ಡದ ಮದಕರಿ ನಾಯಕ (ಒಂದನೇ ಓಬಣ್ಣನ ನಾಯಕ ಅಥವಾ ದಳವಾಯಿದ ಓಬಣ್ಣನಾಯಕ), ಕ್ರಿ.ಶ. 1652-1674ರ ಇಮ್ಮಡಿ ಮದಕರಿ ನಾಯಕ, ಕ್ರಿ.ಶ. 1686-1689ರ ಮುಮ್ಮಡಿ ಮದಕರಿ ನಾಯಕ (ಲಿಂಗಣ್ಣ ನಾಯಕ), ಕ್ರಿ.ಶ. 1721-1749ರ ಹಿರೇ ಮದಕರಿ ನಾಯಕ, ಕ್ರಿ.ಶ. 1754-1779ರ ಕಡೇ ಮದಕರಿ ನಾಯಕ ಹೀಗೆ ಇವರೇ ಐದು ಮಂದಿ![1] ವಾಡಿಕೆಯಲ್ಲಿ ಮತ್ತು ಅನೇಕ ಹಳೆಯ ದಾಖಲೆಗಳಲ್ಲಿ ಇವರನ್ನು 'ಮದಕರಿ ನಾಯಕ' ಎಂದೇ ಉಲ್ಲೇಖಿಸಲಾಗಿದ್ದರೂ, ಇವರೆಲ್ಲಾ 'ಮದಕರಿ ನಾಯಕ'ರೆಂದೇ ಜನಪ್ರಿಯರಾಗಿದ್ದಾರೆ.

ಗೀತೆಗಳಲ್ಲಿನ ಅಂತರಂಗವನ್ನು ಬಗೆದು ನೋಡಿದಾಗ ಈ ಹಾಡುಗಳೆಲ್ಲಾ ಹಿರೇ ಮದಕರಿ ನಾಯಕ ಮತ್ತು ಕಡೇ ಮದಕರಿ ನಾಯಕರು ಮಾಡಿಸಿದ ಕಾರ್ಯ, ಮೆರೆದ ಶೌರ್ಯಗಳನ್ನು ಕುರಿತವುಗಳೇ ಆಗಿವೆ. ಮದಕರಿ ನಾಯಕ ನಾಮಾಂಕಿತರನ್ನು ಹೊರತು ಪಡಿಸಿದರೆ ಬೇರೆ ನಾಯಕರನ್ನು ಕುರಿತ ಹಾಡುಗಳು ಇಲ್ಲವೆನ್ನುವಷ್ಟು ಕಡಿಮೆ. ಆದರೆ ಕೆಲವರ ಸಾಹಸಗಳ ಬಗ್ಗೆ ದಂತಕತೆಗಳೂ ಹುಟ್ಟಿಕೊಂಡಿವೆ, ಕೆಲವರು ಧಾರ್ಮಿಕ ಜನಪದ ಸಾಹಿತ್ಯದಲ್ಲಿ ಪ್ರಸ್ತಾಪಿತರಾಗಿದ್ದಾರೆ. ಆದರೆ ಮೊದಲ ಮೂವರು ಮದಕರಿ ನಾಯಕರ ಬಗ್ಗೆ ಯಾವ ಹಾಡುಗಳೂ ದೊರೆಯುವುದಿಲ್ಲ.

ಚಿತ್ರದುರ್ಗದ ಮೊಟ್ಟ ಮೊದಲ ಪಾಳೆಯಗಾರ ಕಾಮಗೇತಿ ತಿಮ್ಮಣ್ಣನಾಯಕ (ಕಿ.ಶ. 1568-1589)ನಿಂದ 'ಮದಕರಿ' ಎಂಬ ಅಭಿದಾನ ಹುಟ್ಟಲು ಕಾರಣವಾದ ಕತೆ ರೋಚಕವಾಗಿದೆ.

ವಿಜಯನಗರದ ಅರಸರು ತಿಮ್ಮಣ್ಣನಾಯಕ ಪ್ರಬಲಿಸುತ್ತಿರುವ ಸುದ್ದಿ ಕೇಳಿ, ಅವನನ್ನು ಮಟ್ಟ ಹಾಕಲು ವೀರಸಾಳೋ ನರಸಿಂಗನಾಯಕ ಎಂಬುವವನನ್ನು ಕಳಿಸಿದಾಗ, ಅವನಿಗೆ ಚಳ್ಳೆಹಣ್ಣು ತಿನ್ನಿಸಲು ಆಲೋಚಿಸಿದ ತಿಮ್ಮಣ್ಣನಾಯಕ ಅವನ ಖಾಸಾ ಕುದುರೆಯನ್ನು ಅವನಿಗೆ ಗೊತ್ತಾಗದಂತೆ ಹಾರಿಸಿಕೊಂಡು ಬರಬೇಕೆಂದು ಅವನ ಲಾಯಕ್ಕೆ ಹೋಗುತ್ತಾನೆ. ಕುದುರೆ ಗಾಬರಿಯಾಗಿ ಹೇಷಾರವ ಮಾಡಿದಾಗ ಕಾವಲುಗಾರ ಎದ್ದು ಸಡಿಲವಾಗಿದ್ದ

---

1. ಉಳಿದ ಮದಕರಿ ನಾಮೇತರರು ಚಿತ್ರದುರ್ಗವನ್ನು ಆಳಿದ ವಿವರಗಳು ಹೀಗಿವೆ. ಮತ್ತಿ ತಿಮ್ಮಣ್ಣನಾಯಕ (ಕ್ರಿ.ಶ. 1568-89), ಒಂದನೇ ಕಸ್ತೂರಿ ರಂಗಪ್ಪನಾಯಕ (ಕ್ರಿ.ಶ. 1602-52), ಇಮ್ಮಡಿ ಓಬಣ್ಣನಾಯಕ (ಕ್ರಿ.ಶ. 1674-75), ಚಿಕ್ಕಣ್ಣನಾಯಕ (ಕ್ರಿ.ಶ. 1675-86), ಚಿಚ್ಚುಗತ್ತಿ ಭರಮಣ್ಣನಾಯಕ (ಕ್ರಿ.ಶ. 1749-54).

ಗೂಟವನ್ನು ಕಿತ್ತು, ಅಲ್ಲೇ ಹುಲ್ಲಿನಲ್ಲಿ ಕಾಣದಂತೆ ಅಡಗಿಕೊಂಡಿದ್ದ ತಿಮ್ಮಣ್ಣನಾಯಕನ ಅಂಗೈಗೇ ಗೂಟ ಬಡಿಯುತ್ತಾನೆ. ದೊರೆ ಕಮಕ್-ಕಿಮಕ್ ಎನ್ನಲಿಲ್ಲ ! ನಂತರ ಚಾಕುವಿನಿಂದ ತನ್ನ ಹಸ್ತವನ್ನೇ ತುಂಡರಿಸಿಕೊಂಡು ಕುದುರೆಯನ್ನು ತರುತ್ತಾನೆ. ಅವರು ಗೂಟದಲ್ಲಿ ಸಿಕ್ಕಿಕೊಂಡ ತುಂಡು ಹಸ್ತವನ್ನು ನೋಡಿ ಅವನ ಪರಾಕ್ರಮಕ್ಕೆ ತಲೆದೂಗುತ್ತಾರೆ. ಮರುದಿನ ತಿಮ್ಮಣ್ಣನಾಯಕ ಕರವರತಿ ಸರಕ್ಕೆ ನೀರು ಕುಡಿಯಲು ಬಂದ ಮದಿಸಿದ ಆನೆಯನ್ನು, ಕಾಲಿನಿಂದ ಬಿಲ್ಲು ಮೆಟ್ಟಿಕೊಂಡು ಅದರ ಹಣೆಗೆ ಬಾಣಪ್ರಯೋಗ ಮಾಡಿ ಸಾಯಿಸುತ್ತಾನೆ. ಆಗ ವಿಜಯನಗರದ ಅರಸರು ತಿಮ್ಮಣ್ಣನಾಯಕನನ್ನು 'ಮದಕರಿ' ಎಂಬ ಬಿರುದಿನೊಂದಿಗೆ ಗೌರವಿಸಿದರು ಎಂಬುದು ಐತಿಹ್ಯ.



ಆದರೆ ಇನ್ನೊಂದು ಐತಿಹ್ಯದ ಪ್ರಕಾರ ದಿಲ್ಲಿಯ ಬಾದಶಹನಲ್ಲಿದ್ದ ಮದಿಸಿದ ಆನೆಯನ್ನು ಆ ವಂಶದ ಪೂರ್ವಜನೆಂದು ಭಾವಿಸಲಾದ ಚಿತ್ರನಾಯಕನೆಂಬುವನು ಪಳಗಿಸಿದ್ದಕ್ಕಾಗಿ ಈ ಬಿರುದು ಬಂತು ಎಂಬುದು ಇನ್ನೊಂದು ಐತಿಹ್ಯ.

ಆದರೆ ಈ ಐತಿಹ್ಯಗಳಿಗೆ ಯಾವುದೇ ಐತಿಹಾಸಿಕ ದಾಖಲೆಗಳ ಬೆಂಬಲ ಇಲ್ಲದಿರುವುದು ಗಮನಿಸಿವರೆ ಇವು ದುರ್ಗದ ಅಭಿಮಾನಿಗಳಾರೋ ಕಟ್ಟಿದ ಸುಂದರ ಕಟ್ಟುಕತೆಗಳಾಗಿಯೂ ಕಾಣಿಸುತ್ತವೆ.

ಚಿತ್ರದುರ್ಗದ ಪಾಳೆಯಗಾರರ ಮೂಲ ನಿವಾಸಿಗಳು ಆಂಧ್ರದ 'ಮದ್ದಿಕೆರ'[2] ಗ್ರಾಮದಿಂದ ಬಂದಿರಬಹುದಾದ್ದರಿಂದ, ಆ ಮೂಲಸ್ಥಳದ ನೆನಪಾಗಿ ಆ ಗ್ರಾಮನಾಮಕ್ಕೆ (ಮದ್ದಿಕೆರ: ಮದಿಕೆರಿ: ಮದಕೇರಿ) 'ನಾಯಕ' ಎಂಬ ವ್ಯಕ್ತಿನಾಮ ಸೇರಿಸಿ 'ಮದಿಕೇರಿ ನಾಯಕ' ಎಂದು ಬಳಸಿರುವ ಸಾಧ್ಯತೆಯೇ ಹೆಚ್ಚಾಗಿ ಕಾಣುತ್ತದೆ.

ಕೆಲವೊಮ್ಮೆ ಇತಿಹಾಸದಲ್ಲಿ ಬಿಟ್ಟುಹೋದ ಅಮುಖ್ಯ ಸಂಗತಿಗಳನ್ನು ಗುರುತಿಸಲು ಜಾನಪದವೂ ಇತಿಹಾಸದ ಪುನಾರಚನೆಯಲ್ಲಿ ನೆರವಾಗುವುದುಂಟು.

ಚಿಕ್ಕಗತ್ತಿ ಭರಮಣ್ಣನಾಯಕ (ಕ್ರಿ.ಶ. 1689-1721)ನ ದಂಡು, ಚಳ್ಳಕೆರೆ ತಾಲ್ಲೂಕಿನ ಚಿನ್ನಮ್ಮನಾಗತಿಹಳ್ಳಿಯಲ್ಲಿರುವ ಕಾಡುಗೊಲ್ಲರ ದೈವವಾದ 'ಕ್ಯಾತೇಲಿಂಗ' (ಕೇದಾರಲಿಂಗ)ನನ್ನು ವಶಪಡಿಸಿಕೊಳ್ಳಲು ಹೋದ ಸುದೀರ್ಘ ಹಾಡು 'ಕ್ಯಾತೇಲಿಂಗನ ಸೋಬಾನೆ ಪದ'ಗಳಲ್ಲಿ ಕಾಣಿಸಿಕೊಳ್ಳುತ್ತದೆ. ಆದರೆ ಯಾವ ಕಾರಣಕ್ಕಾಗಿ ಭರಮಣ್ಣನಾಯಕ ಈ ದೇವರನ್ನು ವಶಪಡಿಸಿಕೊಳ್ಳಲು ಹೋದನೆಂದು ಸ್ಪಷ್ಟವಾಗದಿದ್ದರೂ, ಬಹುಶಃ ಬಲಿಷ್ಠರಾಗಿದ್ದ ಗೊಲ್ಲರ ಸೊಕ್ಕನ್ನು ಬಗ್ಗು ಬಡಿಯಲು ಅವರ ದೇವರನ್ನು ವಶಪಡಿಸಿಕೊಳ್ಳುವುದೇ ಸರಿಯಾದ ದಾರಿ ಎಂದು ಭಾವಿಸಿರಬಹುದೇ? ದೇವರ ರಕ್ಷಣೆ ಹೊಣೆ ಹೊತ್ತ ಕರಿಯಣ್ಣ -

ಬ್ಯಾಡಾರ ದಂಡು ಬೇಲ್ಗುಂಟ ಬರುವಾಗ<br>
ಬೆಳ್ಳಿಯ ಕವಣೆ ಬಲಗೈಲಿ-ಕರಿಯಣ್ಣ<br>
ಜಂಗೂಸಿ ಹೊಡೆದ ತಲಿ ನೂರು

ಒಬ್ಬಾನೆ ಕರಿಯಣ್ಣ ದಿಬ್ಬುಗುಂಟ ಬರುವಾಗ<br>
ಕಬ್ಬಕ್ಕಿ ಹಿಂಡುಗವುದಂಗೆ-ಬ್ಯಾಡರ ದಂಡು<br>
ಒಬ್ಬನ ಕೊಟೆ ಕಾದಿ ಮಡಿದಾರು

ಎಂದು ಜನಪದ ಕವಿ ಅತ್ಯಂತ ಶಕ್ತಿಶಾಲಿಯಾದ ಕಾವ್ಯಚಿತ್ರ ಕೊಡುತ್ತಾನೆ. ಆದರೆ ಕರಿಯಣ್ಣನನ್ನು ಕೊಂದು ದೇವರನ್ನು ವಶಮಾಡಿಕೊಂಡ ಭರಮಣ್ಣ ನಾನಾ ಕಷ್ಟ-ನಷ್ಟ

---

2. ಈ ವಾದವನ್ನು ಮೊದಲು ಮಂಡಿಸಿದವರು ಚಿತ್ರದುರ್ಗದ ಇತಿಹಾಸ ಸಂಶೋಧಕರಾದ ಪ್ರೊ॥ ಬಿ.ರಾಜಶೇಖರಪ್ಪನವರು. ಆದರೆ ಈ ಸಾಧ್ಯತೆಯೂ ಇರಲಾರದೆಂದು ಇತ್ತೀಚೆಗೆ (1996) ನಾನು ಪ್ರೊ॥ ಬಿ.ರಾಜಶೇಖರಪ್ಪನವರೊಂದಿಗೆ ಮದ್ದಿಕೆರೆಗೆ ಹೋದಾಗ ಅನಿಸಿತು. ಆ ಊರಿನಲ್ಲಿ 'ಮದ್ದಿಕೆರಮ್ಮ'ನ ದೇವಸ್ಥಾನವಿದೆ. ಅದರ ಮೂರ್ತಿಯನ್ನು 'ಮುದ್ದಿಚೆಟ್ಟು' (ಬೀಟೆಗಿಡ)ವಿನಿಂದ ಮಾಡಿರುವುದರಿಂದ ಆಕೆಗೆ 'ಮದ್ದಮ್ಮ' ಎಂಬ ಹೆಸರು ಬಂದಿದ್ದು, ಆ ದೇವಸ್ಥಾನದ ಹಿಂಭಾಗಕ್ಕೇ ಹೊಂದಿಕೊಂಡು ಇರುವ ಕೆರೆಯ ಹೆಸರೂ ಸೇರಿಕೊಂಡು 'ಮದ್ದಿಕೆರೆ' ಎಂಬ ಗ್ರಾಮನಾಮ ಹುಟ್ಟಿಕೊಂಡಂತಿದೆ. ಆದರೆ ಈ ಮೂಲದಿಂದ ಮದಕರಿ ಪಾಳೆಯಗಾರರು ಹೊರಟಿರಬಹುದೆಂಬುದನ್ನು ಸಮರ್ಥಿಸಲು ಅಲ್ಲಿ 'ವ್ಯಾಸಬೇಡ' ಕುಟುಂಬಗಳೇ ಇಲ್ಲ! ಅಲ್ಲಿರುವವರೆಲ್ಲಾ ಗೊಲ್ಲರು- ಅದೂ ಊರು ಗೊಲ್ಲರು. ಅವರಲ್ಲಿ ಅನೇಕರು 'ಮದ್ದಿಕೆರಪ್ಪ' ಎಂಬ ಹೆಸರು ಇಟ್ಟುಕೊಂಡಿದ್ದಾರೆ.

ಪಟ್ಟು, ಮತ್ತೆ ಗೊಲ್ಲರಿಗೆ ದೇವರನ್ನು ವಹಿಸಿಕೊಟ್ಟು, ಆ ದೇವರ ಪರಮಭಕ್ತನಾಗುತ್ತಾನೆ. ಬಹುಶಃ ಈ ಕತೆ ಪೂರ್ವಕಾಲದಿಂದಲೂ ಬೇಡರಿಗೂ - ಗೊಲ್ಲರಿಗೂ ಇದ್ದ ವೈಷಮ್ಯದ ಕತೆಯನ್ನು ಮತ್ತೆ ಸಾಂಕೇತಿಕವಾಗಿ ಹೇಳುವುದರೊಂದಿಗೆ ಇತಿಹಾಸದ ಕತ್ತಲೆಯ ಮೇಲೆ ಈ ಜನಪದ ಚಿತ್ರ ಬೆಳಕು ಚೆಲ್ಲುತ್ತದೆ.

ಪಾಳೆಯಗಾರರು ತಮ್ಮ ನಾಡಿನ ಗಡಿಗಳನ್ನು ಜೀವದ ಹಂಗು ತೊರೆದು ರಕ್ಷಿಸಿಕೊಳ್ಳುತ್ತಿದ್ದರು. ಇದನ್ನು ಅವರು ತಮ್ಮ ಪ್ರತಿಷ್ಠೆಯ ಪ್ರಶ್ನೆ ಎಂದು ಭಾವಿಸುತ್ತಿದ್ದರು. ತಮ್ಮ ಸಾರ್ವಭೌಮತೆಗೆ ಭಂಗ ಬಂದಾಗಲೆಲ್ಲಾ ಸಿಂಹದಂತೆ ಸಿಡಿದೇಳುತ್ತಿದ್ದರು.

ಪಾಳೆಯಗಾರರ ಪರಾಕ್ರಮ-ಪ್ರತಿಷ್ಠೆಗಳ ಸಂಕೇತದಂತಿರುವ ಚಿತ್ರದುರ್ಗ ನಾಡನ್ನು ಕಟ್ಟಿಸಿದ ಕತೆ ಹಲವು ಹತ್ತು ರೀತಿಯಲ್ಲಿ ವ್ಯಕ್ತವಾಗಿದೆ.

ಮೇಲು ದುರುಗವು ನೋಡೆ ಗಾರೆ ಬಾಗಿಲು ನೋಡೆ
ಹೋಗಿ ಮಾತಾಡೋ ಗಿಣಿ ನೋಡೆ ಮದಕೇರಣ್ಣನ
ಭಾರಿ ನಡುಗಾರೆ ಮನಿ ನೋಡೆ

ಏಳು ಸುತ್ತಿನ ಕ್ವಾಟೆ ಹೇಳಿ ಕಟ್ಟಿಸಿದನಯ್ಯ
ಚಿತ್ರಕಲ್ಲು ದುರುಗದ ನಾಡೆ ಮದಕೇರಪ್ಪ
ಅವನು ಏಳುಸುತ್ತಿನ ಕೋಟೆ ಒಳಗವ್ನೆ

-ಎಂದು ಕೋಟೆಯನ್ನು ಕುರಿತು ಮುಕ್ತಕಂಠದಿಂದ ಹಾಡಿ ಹೊಗಳುವಲ್ಲಿ ಅಭಿಮಾನ ತುಂಬಿ ತುಳುಕುತ್ತದೆ.

ಏರಲಾಗದ ಗುಡ್ಡ ಏರ್ತಾರೆ ತುರುಕರು
ಏರೀ ಮತ್ತಿಳಿಯ ದಾರಿ ಅರಿಯಾರು ತುರುಕರು
ನೀರಿಗೆ ಬಾಯ ಬಿಡುತಾರೆ

-ಎಂದು ಏಳು ಸುತ್ತಿನ ಕೋಟೆಯ ಅಭೇದ್ಯತೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಎದ್ದೇಳೋ ಮದಕೇರಿ ಎಷ್ಟೊತ್ತು ಮಲಗಿದ್ದಿ
ಪಾಲೆ ಬಂದಾವೆ ನಿಮ್ಮ ಚದರೀಗೆ

-ಎಂಬ ನುಡಿ ತುಂಬಾ ಜನಪ್ರಿಯವಾಗಿ ಮತ್ತೆ ಮತ್ತೆ ಬಳಕೆಯಾಗುವುದನ್ನು ನೋಡಬಹುದು. ದೇವರನ್ನು ನಿದ್ರೆಯಿಂದ ಏಳಿಸುವ 'ಸುಪ್ರಭಾತದ ಪ್ರಾರ್ಥನೆ'ಯನ್ನು ನೆನಪಿಗೆ ತರುವುದರೊಂದಿಗೆ 'ರಾಜಾ ಪ್ರತ್ಯಕ್ಷ ದೇವತಾ'ಎಂದು ಆ ಜನ ಭಾವಿಸಿದ್ದನ್ನು ಇಲ್ಲಿ ತೋರಿಸುತ್ತದೆ. ದೊರೆಯ ಬಗೆಗಿನ ಅವರ ಅಭಿಮಾನ ಯಾವ ಮಟ್ಟದಲ್ಲಿದೆಯೆಂದರೆ

ಹಟ್ಟಿಯ ಕಲ್ಲು ಕಾಣೋ ಪಟ್ಟಣದ ದೊರೆ ಕಾಣೊ
ಪುಟ್ಟ ಮುತ್ತು ಕಾಣೋ ಮದಕೇರಿ! ನೀನಿರುವ
ಪಟ್ಟಣಕಿನ್ನೇನು ಭಯವಿಲ್ಲ.

- ಎಂದು ಹೃದಯ ತುಂಬಿ ಹಾಡುತ್ತಾರೆ.

ಇವರು ಫಿರಂಗಿಗಳನ್ನು ಮಾನವ ಹೆಸರಿನಿಂದ ಕರೆಯುತ್ತಾ ಅವಕ್ಕೆ ಜೀವ ತುಂಬುವ ಪರಿ ಅನನ್ಯನವಾದುದು. -

ಮಾರಮನೆಂಬೋದು ಮೀರಿದ ಫಿರಂಗಿ
ಹುಚ್ಚನುಮನೆಂಬೋದು ಹೆಚ್ಚೀದ ಫಿರಂಗಿ
ಎತ್ತೀರಿ ಮೇಲೆ ಬಿಡ್ಯಾಕೆಂದ.

ಈ ಬಗೆಯ ಫಿರಂಗಿ ವಿವರಗಳು ಐತಿಹಾಸಿಕ ದಾಖಲೆಗಳಲ್ಲಿ ದೊರೆಯುವುದೇ ವಿರಳ.

ದುರ್ಗದ ದೊರೆಗಳು ತಮ್ಮ ಸಾಹಸ, ಶೌರ್ಯ, ಪರಾಕ್ರಮಗಳಿಂದ ಎಲ್ಲೆಲ್ಲೂ ಕೋಟೆಗಳನ್ನು ಕಟ್ಟಿ ಅವುಗಳಿಗೆ ತಮ್ಮ ಹೆಸರುಗಳನ್ನೇ ಇಟ್ಟಿರುವುದು ಅವರ ಸಾಧನಾ ಶಕ್ತಿಯ ದ್ಯೋತಕಗಳಾಗಿವೆ.

ಹಿರಿಯೋನು ತಮ್ಮಣ್ಣನಾಯ್ಕ ಚಿಕ್ಕೋನು ಮದಕರಿನಾಯ್ಕ
ನಡುವೋನೆ ಜಂಪಳನಾಯ್ಕ ಅವರೆಲ್ಲೆಲ್ಲಿ ಗೆದ್ದಿದಾರೆ
ಅಲ್ಲೆಲ್ಲ ಕೋಟೆಗಳ ಕಟ್ಟಿಸ್ಯಾರೆ

ಚಿತ್ರನಾಯಕನ ಹಳ್ಳಿ, ತಿಮ್ಮಣ್ಣನಾಯಕನ ಕೋಟೆ (ಟಿ.ಎನ್. ಕೋಟೆ) ಮದಕರಿ ನಾಯಕನ ಕೋಟೆ, ಜಂಪಣ್ಣನಾಯಕನ ಕೋಟೆ (ಜೆ.ಎನ್.ಕೋಟೆ), ಭರಮಣ್ಣ ನಾಯಕನ ದುರ್ಗ (ಬಿ. ದುರ್ಗ) - ಹೀಗೆ ಚಿತ್ರದುರ್ಗದ ಸುತ್ತ ಅನೇಕ ಕೋಟೆಗಳನ್ನು

ರಾಗಿಯ ಹಿಟ್ಟ ಚೆಲ್ಲಿ ಚೆಲ್ಲಿ ಕಟ್ಟಿಸ್ಯವ್ರೆ
ಸುತ್ತಾನೆ ಕೋಟೆಗಳ ಓತ್ಮೋತ್ತಿ ಕಟ್ಟಿಸ್ಯವ್ರೆ

- ಎಂದು ಹೇಳುತ್ತಾ 'ದುರುಗ ದುರುಗೆಂದ್ರೆ ಇದೆಂಥಾ ದುರುಗಾವೆ ಕಳ್ಳಿ ಕಡಿದರೆ ಕಳ್ಳಿ ಚಿಗುತಾವೆ' ಎನ್ನುವಂತೆ ಬೆಳೆಯುವ ದುರ್ಗದ ಕೋಟೆಯ ಬಗ್ಗೆ ಇಟ್ಟುಕೊಂಡಿರುವ ಅಭಿಮಾನ ಅಪೂರ್ವವಾದುದು.

ಈಟೀಟಿ ಹುಡುಗರು ಚೀಟಿ ಚೆಲ್ಲಣದೋರು
ಕೋಟೆ ಕೊಡಿರಣ್ಣಾ ಕಊಲಿಗೆ ಅಂದಾರೆ
ತಲೆಹೋದ್ರು ದುರ್ಗ ಕೊಡೆನೆಂದ್ರು

- ಎಂದು ಹಾಡುತ್ತಾ 'ಥಾಕತ್ತಿದ್ದರೆ ಕೋಟೆಯ ಕೊಡುವುದಕ್ಕೆ ಒಳ್ಳೆ ರಂಡೇರೋ ಮುಂಡೇರೋ ಗೆದ್ದು ತಕ್ಕಳ್ಳಿ ದುರುಗಾವ' ಎಂದೂ ಸವಾಲು ಹಾಕುತ್ತಾರೆ. ತಮ್ಮ ರಾಜನನ್ನು

ಹೆಬ್ಬಿದಿರು ಬಿದರಲ್ಲ ಗುಬ್ಬಿ ನಾಟಕವಲ್ಲ
ಒಬ್ಬ ನಿಂಗಣ್ಣಾ ನೀನು ದೊರೆಯಲ್ಲ! ದುರುಗದ
ಹೆಬ್ಬುಲಿ ಕೂಟೆ ಸರಸಾವೆ

- ಎಂದು ತಮ್ಮ ಅಭಿಮಾನವನ್ನು ಪರಿಪರಿಯಾಗಿ ತೋಡಿಕೊಳ್ಳುತ್ತಾರೆ.

ಎಂಥ ಬಹದ್ದೂರ ನೋಡಣ್ಣಾ ಮದಕೇರಿ ಭೂಪ
ಎಂಥ ಸರದಾರ ನೋಡಣ್ಣಾ
ಅವನೆಂಥ ಮನಿಗಾರ ಚಿತ್ರಕಲ್ಲ ಮೆದಕೇರಿ ಭೂಪ
ಎಂಥ ಮನಿಗಾರ ನೋಡಣ್ಣಾ
ಸೀರ್ಕವ ಗೆದ್ದ ಚಿನ್ನದುಂಗುರ ಗೆದ್ದ
ಮಾತಿನಲ್ಲಿ ಗೆದ್ದ ಮಲೆನಾಡು ಜರ್ಮಾಲೆಯ
ರೀತೀಲಿ ಗೆದ್ದನು ದುರುಗಾವ !
ಈಟೀಟಿ ಹುಡುಗರು ಬೀಟಿ ಚಿಲ್ಲಣದೋರು
ಚಿಂತರ ಕಲ್ಲಾಗೆ ಹಗೆ ಯಾರು! ಮೆದಕೇರಣ್ಣಾಗೆ
ನಿಂತೆ ಸಲಾಮು ಕೊಡುತಾರೆ.

- ಎಂದು ಹಾಡಿ ಹೊಗಳುತ್ತಾರೆ. ಒಂದು ಕಾಲಕ್ಕೆ ಚಿತ್ರದುರ್ಗ 'ಚಿಂತರಕಲ್ಲು' ಎಂದು ಕರೆಸಿಕೊಳ್ಳುತ್ತಿದ್ದ ಕುರುಹು ಇಂದಿನ ಜನಪದ ಗೀತೆಯಲ್ಲಿ ಹಾಗೇ ಉಳಿದು ಬಂದಿರುವುದನ್ನೂ ಇಲ್ಲಿ ಗಮನಿಸಬಹುದು.

ಜನಪದ ಸಾಹಿತ್ಯದಲ್ಲಿ ದಟ್ಟವಾಗಿ ವ್ಯಾಪಿಸಿಕೊಂಡು, ನಾಡ ಹಾಡಾಗಿ ಉಳಿದವರೆಂದರೆ ಮಾಯಕೊಂಡದಲ್ಲಿ ಮಡಿದ ಹಿರೇಮದಕರಿ ನಾಯಕ, ಹೈದರಾಲಿಯ ಕುತಂತ್ರಕ್ಕೆ ಬಲಿಯಾದ ಕಟ್ಟ ಕೊನೆಯ ರಾಜಾವೀರ ಮದಕರಿನಾಯಕ.

ಹಿರೇ ಮದಕರಿ ನಾಯಕ (ಕ್ರಿ.ಶ. 1721-49) ತನ್ನ ಸಾಹಸ, ಪರಾಕ್ರಮ, ಧೀರ ನಿಲುವುಗಳ ಮೂಲಕ ನಮ್ಮ ಮನಸ್ಸನ್ನು ಸೂರೆಗೊಳ್ಳುತ್ತಾನೆ. ಮಾಯಾಕೊಂಡದ ಕಾಳಗದಲ್ಲಿ ಹೋರಾಡುತ್ತಲೇ ಮಡಿಯುವ ಅವನ ಚಿತ್ರ ನಮ್ಮ ಜನಪದರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಮಲೆನಾಡಿನ ಕೆಳದಿಯ ಅರಸರೂ, ಹರಪನಹಳ್ಳಿಯ ಪಾಳೆಯಗಾರ ಸೋಮಶೇಖರ ನಾಯಕ, ರಾಯದುರ್ಗದ ಕೃಷ್ಣಪ್ಪ ನಾಯಕ, ಸವಣೂರಿನ ನವಾಬ ಹಕೀಂಖಾನರು ಒಟ್ಟಾಗಿ ಸೇರಿ ಚಿತ್ರದುರ್ಗ ಸಂಸ್ಥಾನಕ್ಕೆ ಸೇರಿದ ರಾಮಗಿರಿ ಕೋಟೆಯನ್ನು ಮುತ್ತಿದಾಗ-

ಹೆಬ್ಬುಲಿ ಬಂದೈತೆ ಕೋ ಗಾದಿರಿಮಲೆ ಹೆಬ್ಬುಲಿ ಬಂದೈತೆ
ತಬ್ಬಿಬ್ಬು ಬೀಳಬೇಡ ತಬಕಾದ ಗಾದಿರ್ಹೆಬ್ಬುಲಿ ಬಂದೈತೆ

- ಎಂಬಂತೆ ಹೋರಾಡಿ ಹಿರೇ ಮದಕರಿನಾಯಕ ಅವರ ಮುಖಭಂಗ ಮಾಡಿದ. ಅವರು ಸೇಡನ್ನು ತೀರಿಸಿಕೊಳ್ಳಲು ಮತ್ತೆ ಬಲವಾದ ಸೈನ್ಯದೊಂದಿಗೆ ಮಾಯಕೊಂಡದ ಕೋಟೆಗೆ ಸತತವಾಗಿ ಮೂರು ತಿಂಗಳು ಲಗ್ಗೆ ಹಾಕಿದರು.

ಆಗ ಯುದ್ಧಕ್ಕೆ ಹೊರಟ ಹಿರೇ ಮದಕರಿ, ಮನೆ ದೇವತೆ ಏಕನಾಥೇಶ್ವರಿಯ ವರ ಕೇಳಿದಾಗ -

ಕಿತ್ರೀಯ ಕಾರ್ಯವು ಕೈಗೂಡುವುದಿಲ್ಲೆಂದು
ನೆತ್ತಿಯ ಪುಷ್ಪಾವ ಕೊಟ್ಟಾಳೋ ॥ಕೋಲು॥

ನೀ ಹೋದರೆ ತಿರುಗಿ ಬರುವುದುಂಟೆ ದೊರೆಯೆ
ನಿನ್ನ ಆಯುಸವು ಇಲ್ಲಿಗೆ ಸಮನೆಂದಳು

ಆದರೂ ಹೆದರದೆ ಮುನ್ನುಗ್ಗಿದಾಗ -

ತುಪ್ಪ ಸಕ್ಕರೆ ಹುಯ್ದು ಬುತ್ತಿಕಟ್ಟುವಾಗ
ಬೆಕ್ಕಡ್ಡವಾದವಲ್ಲೋ ಶಂಕರಿಶಂಖಿ
ಬೆಕ್ಕಡ್ಡವಾದವಲ್ಲೋ

ಈ ಅಪಶಕುನಕ್ಕೂ ಹೆದರದ ಧೀರ ಮೆದಕೇರಿ
ಮುಂದಕ್ಕಿಕ್ಕಿದ ಕಾಲು ಹಿಂದಕ್ಕಿಕ್ಕಿದರೆ
ಹೆಂಬೇಡಿ ಎನ್ನುವರೋ

- ಎಂಬ ದಿಟ್ಟ ನಿರ್ಧಾರದಿಂದ ರಣಾಂಗಣಕ್ಕೆ ಹೋಗುತ್ತಾನೆ.

ಉಕ್ಕಡುವ ಬಿಡುವಾಗ ಏನೆಂದೆ ಮೆದಕರಿಭೂಪ
ಉಕ್ಕೀನ ಕುದುರೆ ನಡೆಮುಂದೆ ! ಮಾಯಕೊಂಡದ
ಉಕ್ಕಡಕು ನಮಗು ಋಣವಿಲ್ಲ.

- ಎಂಬ ವಿಷಾದದೊಂದಿಗೆ ಪ್ರಾರಂಭಿಸಿದರೂ ಅವನ ಪ್ರಯತ್ನಗಳೆಲ್ಲ ವಿಫಲವಾಗುತ್ತವೆ. ಕೊನೆಗೆ ಹರಪನಹಳ್ಳಿಯ ಸೋಮಶೇಖರ ನಾಯಕನಿಗೂ, ಹಿರೇಮದಕರಿ ನಾಯಕನಿಗೂ ಆನೆಯ ಮೇಲೆ ನಡೆದ ಹೋರಾಟದಲ್ಲಿ -

'ಸಿತ್ತೆ ಮಳೆ ಸುರಿದಂತೆ ಹತ್ತಿ ಬಂದವು ಬಾಣ
ಸೂರಿದಿಗನ ರವೆಯ ಕಾಣವೆ'

- ಎಂಬ ರಣಾಂಗಣದ ಭೀಕರ ಚಿತ್ರವನ್ನು ಜನಪದಕವಿ ಕಣ್ಣಿಗೆ ಕಟ್ಟಿದಂತೆ ಕೊಡುತ್ತಾನೆ. ಆದರೇನು -

ಬಿದ್ದನು ಮೆದಕರಿ ಭೂಪ ಬಿಳಿ ಅಂಗಿ ಮೇಲಾಗಿ
ವಜ್ಜರದ ಬಾಕೆ ಅಡಿಯಾಗಿ! ಮೆದಕೇರಿ ಭೂಪ
ಬಿದ್ದನು ಸೂರ‍್ಯಗೆ ಎದುರಾಗಿ

ಹಾಳಾದ ಮಾಯಿಕೊಂಡ ಹೊಡ್ಯೆತೆ ರಣಗಂಬ
ಆಗಲಿಲ್ಲ ಅಡಿಗೆ ಊಣಲಿಲ್ಲ! ಮೆದಕೇರಣ್ಣ
ಆಗ ಬೇಗದಲಿ ಸೆರೆ ಹೋದ

ದಂಡಿನ ಸುದ್ದಿ ಹೇಳೋರಿಲ್ಲಾ
ಹಿಂದಕ್ಕೆ ತಿರುಗಿ ಬಂದೋರಿಲ್ಲಾ
ಮಾಯಕೊಂಡ್ದ ಲಡಾಯಿದೊಳೆ
ಮಾಯವಾಯ್ತು ದಂಡು

ಹೀಗೆ ಮದಕರಿ ನಾಯಕನ ಕೈಮೀರಿ ಹೋಗುತ್ತಿರುವುದು ವಿಧಿ ವಿಲಾಸವೇ ಸರಿ. ಅದಕ್ಕೇ ಹೇಳುತ್ತಾರೆ. ಎಷ್ಟು ಮಂದಿ ಮಾರ್ಬಲವಿದ್ದರೇನು ಬಂತು?

ಯಾಳ್ಯವು ಬಂದಾಗ ಯಾರಿಲ್ಲವಣ್ಣ
ಮದಕೇರಿ ಭೂಪ ಬಂದು ತಿರುಗಿ ದುರುಗ ಹೊಗಲಿಲ್ಲ.

- ಎಂದು ಜನ ಉದ್ಗಾರ ತೆಗೆಯುತ್ತಾರೆ. ಕೊನೆಗೆ ಯುದ್ಧದ ಗಾಯಗಳಿಂದ ಹಿರೇ ಮದಕರಿನಾಯಕ ರಣಭೂಮಿಯಲ್ಲೇ ಅಸು ನೀಗುತ್ತಾನೆ.

ಮಾಯಕೊಂಡದ ಮಟ್ಟಿಯ ಮೇಲೆ
ಮಾಯವಾದನು ಮದಕರಿ ಭೂಪ
ಮಾಯಕೊಂಡದಾಗ ಮಾಗುಡಿ ಬಯಲಾಗೆ
ರಣಭೂಮ್ಯಾಗೇ ಸಮಾಧಿ ಮಾಡಿದರೋ

ಧೀರ ಮೆದಿಕರಿ ಭೂಪ ದೊರೆಪುರುಷ ರಾಮಣ್ಣ
ಮಲೆನೂರು ಮದ್ದಾನೆ ಭರ‍್ಮಣ್ಣ ಬರುವಾಗ
ಹುಲಿ ತನ್ನ ಗವಿಗೆ ನಡೆದೀತು

-ಎಂದು ಜನಪದ ಕವಿ ಧ್ವನಿಪೂರ್ಣ ಮುಕ್ತಾಯ ಮಾಡುತ್ತಾನೆ. ಹಿರೇ ಮದಕರಿ ನಾಯುಕನ ತಮ್ಮ (ಮಗ?) ಇಮ್ಮಡಿ ಕಸ್ತೂರಿ ರಂಗಪ್ಪನಾಯಕ ತನ್ನ ಅಣ್ಣನಿಗೆ ರುದ್ರಭೂಮಿ ಯಾದ ಮಾಯಾಕೊಂಡವನ್ನು ಮತ್ತೆ ದಕ್ಕಿಸಿಕೊಂಡದ್ದೇ ಒಂದು ದೊಡ್ಡ ಕತೆ.

ಹಿರೇ ಮದಕರಿ ನಾಯಕನ ನಂತರ ಧೀರೋದಾತ್ತವಾಗಿ ಆಳಿ ಬಾಳಿದವನು (ಕಟ್ಟ ಕೊನೆಯ) ರಾಜಾವೀರ ಮದಕರಿ ನಾಯಕ.

ಕೋಲು ಕೋಲಣ್ಣ ಕೋಲೆ
ಧೂಳಿನಲಿ ಹೊರಟನು ದರುಮಾರಿ ಕೊಮಾರ
ರಣದಲ್ಲಿ ಶೂರಧೀರ ವಜ್ಜುರ

ಎಂದು ಅವನನ್ನು ವಜ್ರಕ್ಕೆ ಹೋಲಿಸುತ್ತಾ

ಚಾವಡಿಗೆ ಚಂದ್ರಾಮ ಕುಲದಲ್ಲಿ ಬೇಡಾರ ಹುಡುಗ
ತುರುಕರಿಗೆಲ್ಲ ಮದವೈರಿ! ಮೆದಕೇರಿ
ಆನೆ ಹಿಂದಕೆ ಬಾರೋ ಹನುಮಂತ

ಎಂದು ವರ್ಣಿಸುತ್ತಾರೆ.

'ತೂಲಹಳ್ಳಿ ಲಡಾಯಿ', 'ಜರಿಮಲೆ ಕದನ'ಗಳಲ್ಲದೆ ಅನೇಕ ಯುದ್ಧಗಳಲ್ಲಿ ಅದ್ಭುತ ಪರಾಕ್ರಮ ಮೆರೆಯುತ್ತಾನೆ. ಹೈದರಾಲಿಯೇ ಹೆದರಿ ಹಿಮ್ಮೆಟ್ಟುವಂಥ ಸಾಹಸವನ್ನು ಪ್ರದರ್ಶನ ಮಾಡುತ್ತಾನೆ. ಆದರೆ ಪರಿಸ್ಥಿತಿಯ ಅನಿವಾರ್ಯತೆಗೆ ಸಿಕ್ಕು ತಾನು ದ್ವೇಷಿಸುವ ಹೈದರಾಲಿಯೊಂದಿಗೇ ಒಪ್ಪಂದ ಮಾಡಿಕೊಳ್ಳುತ್ತಾನೆ! ಮತ್ತೊಮ್ಮೆ ಹೈದರಾಲಿಯನ್ನು ವಿರೋಧಿಸಿ ಮರಾಠರಿಗೆ ಬೆಂಬಲ ಕೊಡುತ್ತಾನೆ. ಮಹಾನ್ ವೀರನಾದರೂ ಅವನ ದ್ವಂದ್ವ ವ್ಯಕ್ತಿತ್ವದ ದ್ವಿಮುಖಿ ರಾಜನೀತಿಯೇ ಅವನಿಗೆ ಮುಳುವಾಗುತ್ತದೆ.

ಯುದ್ಧದ ಆಹ್ವಾನವನ್ನು ಜನಪದ ಕವಿ 'ಕತ್ತಿ ಕಊಗ್ಯಾವೆ ಜಗಳಾಕೆ' ಎಂದು ಪರಿಣಾಮಕಾರಿಯಾಗಿ ಚಿತ್ರಿಸುತ್ತಾನೆ.

ಅಣ್ಣ ಮೆದಕೇರಿ ಹಾಲನ್ನ ಉಣುವಾಗ
ಮಣ್ಣು ಚೆಲ್ಯಾರು ತುರುಕರು! ಮೆದಕೇರಣ್ಣ
ಹಾಲನ್ನಕೆ ನನ್ಗೆ ಋಣವಿಲ್ಲ! ತರುಕರ
ಕತ್ತಿಗೆ ನನ್ಗೆ ಋಣವೈತೆ.

ಕಟ್ಟೆಯ ಹತ್ತೆಮ್ಮೆ ಈಯಲಾದೋ
ಹತ್ತೆಮ್ಮೆ ಮದಕರಿಗೆ ಋಣವಿಲ್ಲ! ತುರುಕರ
ಕತ್ತಿ ಬಾಯಿಗೆ ಋಣವಾದ
ಚಿತ್ರಕಲ್ಲು ಹುಲಿಗೆ ಮೋಸ ತಿಳಿಯಾವು

ನಿರ್ಣಾಯಕವಾದ ಈ ಯುದ್ಧದಲ್ಲಿ ಅವನು

ಹೆಂಡರನು ಕರೆಸಿದ ಮಕ್ಕಳನು ಕರೆಸಿದ
ನಿಮ್ಮ ಬುದ್ಧಿ ನಿಮ್ಮ ಕೈಯೊಳಗೇ
ಒಳೆಯನು ತಗಿಯೆಂದ ಬಣ್ಣದ ಸರ ಹರಿಯೆಂದ
ನೀಸೆಂದ ಮುಂಡೆ ಕ ೂಳುಗಳ

- ಎಂದು ಅಂತ್ಯಕರ್ಮಗಳನ್ನೂ ಮಾಡಿಸುತ್ತಾನೆ. ಅವನ ಚಂದ್ರಾಯುಧವೂ ಅವನ ಸೂಳೆಯ ಮೋಸದಿಂದ ಶತ್ರುಗಳ ಕೈವಶವಾದಾಗ ಅವನ ಅರ್ಧಶಕ್ತಿಯೇ ಕುಂದಿ ಹೋಗುತ್ತದೆ ಎಂದು ಜನಪದ ಕವಿ ಕಲ್ಪನೆಯ ಮೂಲಕ ವೈಭವೀಕರಿಸುತ್ತಾನೆ.

ಬೆಳ್ಳಿ ಸತ್ತಿಗೆ ಹಸಿರು ಬಣ್ಣದ ಬೆತ್ತ
ಜಗಳೂರು ಪಾಪಯ್ಗೆ ಕಳಿವೇನು! ನನ ಮಗ
ಭಲವಂತ ಮೆದಕೇರಿ ಉಳಿದಾರೆ

ಹಿಟ್ಟಿನ ಆರತಿ ಕಟ್ಟಿನ ಬೇವಿನ ಸೀರೆ
ಉಚ್ಚಂಗಿ ಎಲ್ಲಮ್ಗೆ ಉಡಿಸೇನು! ನನ ಮಗ
ದೊರೆನಾಯ ಮೆದಕೇರಿ ಉಳಿದರೆ

- ಎಂದು ಆತನ ತಾಯಿ ಹರಕೆ ಹೊರುತ್ತಾಳೆ. ಆದರೆ ಅನಿವಾರ್ಯ ಪರಿಸ್ಥಿತಿಯಲ್ಲಿ ಹೈದರನ ಸೆರೆಯಾಳಾಗಿ ಶ್ರೀರಂಗಪಟ್ಟಣದ ಸೆರೆಮನೆಗೆ ಹೋಗಬೇಕಾಗುತ್ತದೆ.

ಎಷ್ಟು ಮರೆಯಲಿ ಬಹುದೊ ನಿನ್ನ
ಬಹಳ ಪಂಥದಲ್ಲಿ ಗೆದ್ದೆಲ್ಲೋ ಪ್ರಮಡ ರಣಧೀರ ||ಪ||

ಕುರುಗೋಡು ಕುಂದಿರ್ಪೆ ಅದಿವಪ್ಪನ ಕೋಟೆ
ಧೂಳ ಲಗ್ಗೆಯಲಿ ಗೆದ್ದೆಲ್ಲೋ

ಊರನು ಕಟ್ಟಿಸಿರುವ ಧೀರಲ್ಲಿಹೋದನೆ
ಕಾಮನ ಬಾವಿ ಕೆರುವರ್ತಿ ಕಟ್ಟಿಸಿರುವ
ಧೀರ ಮೆದಕರಿ ಸೆರೆಹೋದ

ಪಟ್ಟಣದ ಕಟ್ಟಿಸಿರುವ ಶೆಟ್ಟೆಲ್ಲಿಗ್ಹೋದನೆ
ಉಚ್ಚಂಗಿ ಹೊಂಡ ಮೇಲ್ದುರ್ಗ! ಕಟ್ಟಿಸಿರುವ
ಶೆಟ್ಟಿ ಮೆದಕರಿ ಸೆರೆಹೋದ

- ಹೀಗೆ ಗೃಹ ಬಂಧನದಲ್ಲಿಟ್ಟು ಮದಕರಿಗೆ ಹೈದರಾಲಿ ನಾನಾ ಆಮಿಷಗಳನ್ನು ಒಡ್ಡುತ್ತಾನೆ. ಆದರೆ ಮದಕರಿ ಬಗ್ಗಲಿಲ್ಲ. ದುರ್ಗವನ್ನು ಮತ್ತೆ ಪಡೆಯಲಾರದೆ ಅವನ ಸೆರೆಯಲ್ಲೇ ಅವನನ್ನು ದ್ವೇಷಿಸುತ್ತಾ ನವೆಯುವ ಬದಲು ಸಾಯುವುದೇ ಲೇಸೆಂದು

ಕಾರಾಗೃಹದಲ್ಲಿ ಕಠಾರಿಯಿಂದ ತಿವಿದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. (ಮತ್ತೊಂದು ದಾಖಲೆಯ ಪ್ರಕಾರ ವಿಷಪ್ರಾಶನದಿಂದ ಸಾಯುತ್ತಾನೆ.)

ಕಟ್ಟೆಯ ಹಿಂದಲ ಬುಟ್ಟಿ ನವಣೆತೆನೆ
ಹಾಲುಗಟ್ಟುತಲೆ ಗಿಣಿಮುಟ್ಟಿ! ಮದಕೇರಣ್ಣಗೆ
ಹರೆವ್ಯೇ ಬರದಲೆ ಶಿವ ತಲೆಹೊಯ್ದು
ಆನೆ ಬಿತ್ತು ಅಂಗಳಕೆ ಕುದ್ರೆ ಬಿತ್ತು ದಂಡಿನಾಗೆ
ಸಂಚಿ ಬಿತ್ತು ಕಂಚಿ ಹೊಳೆಯಾಗ! ಮದಕೇರಿ
ತಾನ್ ಬಿದ್ದ ಚಿತ್ರಕಲ್ಲು ಕೋಟೆಯಾಗೆ
ಕರಿಯ ಮಣ್ಣೆ ನೀನು ಯಾರ್‍ಯಾರ ಒಲಿಗೊಂಡೆ
ಗೀರು ಗಂಧದ ದೊರೆಮಗನ! ಮದಕೇರಣ್ಣನ
ಕರಿಯ ಮಣ್ಣೆ ಒಲಿಕೊಂಡ್ತು

ಹೀಗೆ ಚಿತ್ರದುರ್ಗದ ಸಾರ್ವಭೌಮತೆಗೋಸ್ಕರ ಹಂಬಲಿಸುತ್ತಲೇ ಕೊನೆ ಮದಕರಿ ನಾಯಕನ ಬದುಕು ಕೊನೆಗೊಂಡಿತು. ಪಾಳೆಯಗಾರರ ಛಲ, ಧೀಮಂತಿಕೆ, ಮಹತ್ವಾಕಾಂಕ್ಷೆಯ ಹಂಬಲಗಳು ತಲತಲಾಂತರದಿಂದ ಜನಮನಗಳಲ್ಲಿ ಕತೆಗಳಾಗಿ, ಐತಿಹ್ಯಗಳಾಗಿ, ಹಾಡಗಳಾಗಿ ಉಳಿದಿವೆ.*

---

* ಮದಕರಿ ನಾಯಕನ ಹೆಸರನ್ನು ಹೊತ್ತು ಆಳಿದರೂ ಆಳದಂತಿದ್ದ ಕಟ್ಟಕೊನೆಯ ವ್ಯಕ್ತಿ ಚಿತ್ರದುರ್ಗದ ಇತಿಹಾಸದಲ್ಲಿ ಕಾಣಿಸುತ್ತಾನೆ. ಆತನೇ ದೊಡ್ಡಮದಕರಿನಾಯಕ (ಸುಕ್ರಿಶ 1740-1825). ಕೊನೆಯ ಪಾಳೆಯಗಾರ ರಾಜಾವೀರ ಮದಕರಿನಾಯಕ (ಕ್ರಿ.ಶ. 1754-1779)ನ ದಾಯಾದಿ ಸಂಬಂಧಿಯಾದ ಈತ ಅತ್ಯಂತ ದುರದೃಷ್ಟಶಾಲಿ. ಈ ರಾಜಾವೀರ ಮದಕರಿನಾಯಕನಿಗೆ ದೊರೆತ ಸಿಂಹಾಸನಕ್ಕೆ ಮೊದಲು ಉತ್ತರಾಧಿಕಾರಿಯಾಗಿದ್ದವನು. ಆದರೆ ಗಂಡೋಬಮ್ಮ ನಾಗತಿಯ ಕುತಂತ್ರ, ಮಹತ್ವಾಕಾಂಕ್ಷೆಗಳಿಂದ ಪಟ್ಟವನ್ನು ಕಳೆದುಕೊಂಡವನು. ಹೈದರಾಲಿ ರಾಜಾವೀರ ಮದಕರಿನಾಯಕನೊಂದಿಗೆ ಈತನನ್ನೂ ಶ್ರೀರಂಗಪಟ್ಟಣಕ್ಕೆ ಸೆರೆಹಿಡಿದುಕೊಂಡು ಹೋಗುತ್ತಾನೆ. ಆದರೆ ಸೆರೆಯಲ್ಲಿದ್ದ ರಾಜಾವೀರ ಮದಕರಿನಾಯಕನ ಮಗ ಭರಮಣ್ಣ, ಸಹೋದರ ಪರಶುರಾಮಪ್ಪ ಪಾರಾಗುವ ವಿಫಲ ಪ್ರಯತ್ನದಲ್ಲಿ ಸೆರೆಸಿಕ್ಕಿ ನೇಣಿಗೆ ಹಾಕಲ್ಪಡುತ್ತಾರೆ. ರಾಜಾವೀರ ಮದಕರಿನಾಯಕನೂ ಸೆರೆಯಲ್ಲೇ ಮರಣವಪ್ಪುವುದರೊಂದಿಗೆ ಆತನ ಸಂತತಿ ಕೊನೆಗೊಳ್ಳುತ್ತದೆ.

ಆಗ ದೊಡ್ಡಮದಕರಿನಾಯಕ ತಾನೊಬ್ಬನೇ ಸೆರೆಮನೆಯಲ್ಲಿದ್ದು ಸಾಧಿಸುವುದೇನು ಎಂದು ಹೈದರಾಲಿಯ ರಾಜಿಗೆ ಒಪ್ಪಿ, ಅವನ ವಿಶ್ವಾಸ ಸಂಪಾದಿಸಿ ದುರ್ಗವನ್ನು ಮರಳಿ ಪಡೆಯುವ ಪ್ರಯತ್ನ ಮಾಡುತ್ತಾನೆ. ಅನೇಕ ಯುದ್ಧಗಳಲ್ಲಿ ಹೈದರನ ಪರವಾಗಿ ಹೋರಾಡಿ ಜಯ ಗಳಿಸಿಕೊಡುತ್ತಾನೆ. ಆರ್ಕಾಟ್‌ನಲ್ಲಿ ಬ್ರಿಟಿಷ್ ಪಡೆಗಳನ್ನು, ಅಧಿಕಾರಿ ಕರ್ನಲ್ ಬೇಲಿಯನ್ನು ಎದುರಿಸಿ ಹೋರಾಡುತ್ತಾನೆ. ಕೊನೆಗೆ ಹೈದರಾಲಿ ದೊಡ್ಡ ಮದಕರಿನಾಯಕನನ್ನೇ ಮುಗಿಸಲು ಸಂಚು ಮಾಡಿದಾಗ ಕೊಚ್ಚಿಯಿಂದ ತಪ್ಪಿಸಿಕೊಂಡುಹೋಗಿ ಅನಂತಶಯನ (ತಿರುವಂತನಪುರ)ದ ಕಿರೀಟ
ರಾಮರಾಯನ ಆಶ್ರಯಪಡೆದು, ಮೈಸೂರು ಹುಲಿ ಎಂದು ಮೀಸೆ ತಿರುವುತ್ತಿದ್ದ ಟಿಪ್ಪುವಿನ ಮೀಸೆಯನ್ನೇ ಮಣ್ಣು ಮಾಡುತ್ತಾನೆ. ಟಿಪ್ಪುವನ್ನು ಕೊಲ್ಲುವ ಸದವಕಾಶ ದೊರೆತರೂ, ಟಿಪ್ಪುವಿನ ಯಾಚನೆಯಿಂದ ಅವನನ್ನು ಕ್ಷಮಿಸಿ ಇತಿಹಾಸವನ್ನು ಮತ್ತೆ ಹಳೆಯ ಜಾಡಿನಲ್ಲೇ ಕೊಂಡೊಯ್ಯುತ್ತಾನೆ.

ಋಣ :

1. ಜನಪದ ಗೀತೆಗಳನ್ನು ಕ.ರಾ.ಕೃರವರ 'ಚಿತ್ರಕಲ್ಲು ಮದಕರಿ', 'ಪಾಳೆಯಗಾರರ ಪದಗಳು' ಮತ್ತು ಡಾ॥ ಅಂಬಳಿಕೆ ಹಿರಿಯಣ್ಣನವರ 'ಕಾಡುಗೊಲ್ಲರ ಜನಪದ ಗೀತೆಗಳು', ಅಲ್ಲದೆ ನನ್ನ ಸ್ವಂತ ಸಂಗ್ರಹದಿಂದ ಉಲ್ಲೇಖಿಸಿದ್ದೇನೆ.
2. ರಾಜಕೀಯ ಚಿತ್ರಣದ ಮಾಹಿಗಾಗಿ ಹುಲ್ಲೂರು ಶ್ರೀನಿವಾಸ ಜೋಯಿಸರ 'ಐತಿಹಾಸಿಕ ಲೇಖನಗಳು'. ಲಕ್ಷ್ಮಣ್ ತೆಲಗಾವಿಯವರ 'ಚಿತ್ರದುರ್ಗ ನಾಯಕ ಅರಸರು ರಾಜಕೀಯ ಚಿತ್ರ' ಎಂಬ ಲೇಖನವಲ್ಲದೆ, ಬಿ. ರಾಜಶೇಖರಪ್ಪನವರು–ಚಿತ್ರದುರ್ಗದ ಪಾಳೆಯಗಾರರಾದ ದೊಡ್ಡ ಮದಕರಿ ನಾಯಕರ ವಂಶಸ್ಥರಾದ ಚಳ್ಳಕೆರೆಯಲ್ಲಿರುವ ಪಿ. ಆರ್. ವೀರಭದ್ರ ನ ಾಯಕ ಮತ್ತು ರಾಜಾನಾಯಕ (ಕಾಟಪ್ಪನಹಟ್ಟಿ ರಾಜಣ್ಣ) ಮತ್ತು ದೊಡ್ಡಮದಕರಿನಾಯಕರ ದಾಯಾದಿ ವಂಶಸ್ಥರಾದ ಅರೇಹಳ್ಳಿಹಟ್ಟಿಯ ಶ್ರೀನಿವಾಸನಾಯಕರ ಮನೆಗಳಿಂದ ಸಂಗ್ರಹಿಸಿದ ದಾಖಲೆಗಳನ್ನು ನನಗೆ ಒದಗಿಸಿದ್ದಾರೆ.

* ಕಾಯಕ, 1994-95
* ಜಾನಪದ-96 (ಜಾನಪದ ಅಕಾಡೆಮಿ. ಬೆಂಗಳೂರು)
* ದುರುಗ ಜಾನಪದ, 1999.



---

ಟಿಪ್ಪುವಿನ ನಂತರ ಬಂದ ಇಂಗ್ಲೀಷರು, ದುರ್ಗವನ್ನು ಇವನಿಗೆ ವಹಿಸಿಕೊಡಲು ತಿಳಿಸಿದರೂ ದಿವಾನ್ ಪೂರ್ಣಯ್ಯನ ಕುತಂತ್ರದಿಂದ ಅದೂ ಮರೀಚಿಕೆಯಾಗೇ ಉಳಿಯುತ್ತದೆ. ಕೊನೆಗೆ ರಾಜ್ಯಪಡೆಯುವ ಹಂಬಲದಲ್ಲೇ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಪಟ್ಟಣದಲ್ಲಿ ಕೊನೆಯುಸಿರು ಎಳೆಯುತ್ತಾನೆ. ಆತನ ಸಮಾಧಿ ಅಲ್ಲೇ ಇದೆ. ರಾಜನಲ್ಲದಿದ್ದರೂ ರಾಜನಂತೆ, ಮುಕುಟವಿಲ್ಲದಿದ್ದರೂ ಮಹಾರಾಜನಾಗಿ ಮೆರೆದ ಈತನ ಕತೆಯೊಂದಿಗೆ ಚಿತ್ರದುರ್ಗದ ಚರಿತ್ರೆ ಒಂದು ಘಟ್ಟಕ್ಕೆ ಬಂದು ನಿಲ್ಲುತ್ತದೆ. ಈತನನ್ನು ಹಾಗೂ ಈತನ ಪರಾಕ್ರಮ, ರಾಜನೀತಿ ಕುರಿತು ಅನೇಕ ಕತೆಗಳು ಪ್ರಚಾರದಲ್ಲಿದೆ.

# ಪಾಳ್ಳೇಗಾರ ವೇಷ

ಪಾಳ್ಳೇಗಾರ ವೇಷ ಇತಿಹಾಸವನ್ನು ಪ್ರತಿನಿಧಿಸುವ ಒಂದು ಜನಪದ ಕಲೆ. ಹಿಂದು-ಮುಸ್ಲಿಂ ಭಾವೈಕ್ಯದ ಪ್ರತೀಕವಾಗಿರವ 'ಪೀರಲಹಬ್ಬ'ದಲ್ಲಿ ಮನರಂಜನೆಗಾಗಿ ಹಾಕುವ ಒಂದು ಪ್ರಮುಖ ವೇಷ. ಗತಕಾಲದಲ್ಲಿ ನಮ್ಮನ್ನು ಆಳುತ್ತಿದ್ದ ಪಾಳೆಯಗಾರರನ್ನು ನೆನಪಿಗೆ ತರುವ, ಈ ಕಲೆಯ ಹುಟ್ಟಿಗೆ ಕಾರಣವಾದ ಚರಿತ್ರೆ ಅನೇಕ ಸ್ವಾರಸ್ಯಕರ ಸಂಗತಿಗಳನ್ನು ಒಳಗೊಂಡಿದೆ. ಇತಿಹಾಸದ ಸಂಗತಿಯೊಂದು ಹೇಗೆ ವರ್ತಮಾನದಲ್ಲಿ ಕಲಾರೂಪವನ್ನು ತಳೆಯಬಹುದು ಎಂಬುದಕ್ಕೆ ಸಾಕ್ಷಿಯೂ ಆಗಿದೆ.

'ಪಾಳೆಗಾರರ ಹುಟ್ಟು ವಿಜಯನಗರ ಸಾಮ್ರಾಜ್ಯದ ಬೆಳವಣಿಗೆಯೊಂದಿಗೆ ತಳಕು ಹಾಕಿಕೊಂಡಿದೆ. ಹೀಗಾಗಿ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ಜೊತೆ ಜೊತೆಗೇ ಬೆಳೆದು ಬಂದವರು. ವಿಜಯನಗರದ ಅರಸರು ತಮ್ಮ ಗಡಿನಾಡುಗಳನ್ನು ರಕ್ಷಿಸಲು, ಆಗಾಗ್ಗೆ ಅಲ್ಲಲ್ಲಿ ಉಂಟಾಗುತ್ತಿದ್ದ ದಂಗೆ, ಪುಂಡಾಟಿಕೆಗಳನ್ನು ಅಡಗಿಸಲು ನೇಮಿಸಿದ ಪ್ರತಿನಿಧಿಗಳೇ ಈ ಪಾಳೆಯಗಾರರು'.

ಪಾಳೆಯಗಾರರೆಂದರೆ ಸಾಮಾನ್ಯವಾಗಿ 'ಬ್ಯಾಡ' ಜನಾಂಗಕ್ಕೆ ಸೇರಿದವರೆಂಬ ತಿಳುವಳಿಕೆ ಇದೆ. ಆದರೆ ಬೇರೆ ಜನಾಂಗಕ್ಕೆ ಸೇರಿದವರೂ ಪಾಳೆಯಗಾರರಾಗಿ ಆಳಿರುವುದನ್ನು ಇತಿಹಾಸದಲ್ಲಿ ನೋಡಬಹುದು. ಮಧುಗಿರಿ, ಮಿಡಿಗೇಶಿ, ಚೆನ್ನರಾಯನದುರ್ಗದ ಪಾಳೆಯಗಾರರು (ನೊಣಬ) ಲಿಂಗಾಯಿತ ಜನಾಂಗದವರಾಗಿದ್ದು, ಹೊಸದುರ್ಗದ ಬಳಿ ಇರುವ ಶ್ರೀರಾಮಪುರದ (ಇದನ್ನು ಹಿಂದೆ 'ಬೂದಿಹಾಳು' ಎಂದು ಕರೆಯುತ್ತಿದ್ದರು.) ಪಾಳೆಯಗಾರರು ಗೊಲ್ಲ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಇದಕ್ಕೆ ಕಾರಣ ಹಿಂದೆ ವಿಜಯನಗರದ ಅರಸರು ಆಯಕಟ್ಟಿನ ಸ್ಥಳಗಳಿಗೆ ಬೇಟೆಯಲ್ಲಿ ಅದ್ವಿತೀಯ ಸಾಹಸ ಮೆರೆಯುತ್ತಿದ್ದ ಸಹಜ ಯುದ್ಧ ಪ್ರಿಯರಾದ ಮ್ಯಾಸಬೇಡ ಜನಾಂಗಕ್ಕೆ ಹೆಚ್ಚಿನ ಆದ್ಯತೆ ಕೊಟ್ಟಿರುವಂತೆ ಕಾಣುತ್ತದೆ.

ಆದರೆ ವಿಜಯನಗರದ ಪತನಾನಂತರ ಈ ಪಾಳೆಯಗಾರರು ತಮ್ಮನ್ನು ಸ್ವತಂತ್ರರೆಂದು ಘೋಷಿಸಿಕೊಂಡರು. ತಮ್ಮನ್ನು ಅರಸರೆಂದು ಕರೆದುಕೊಂಡರು. ಇದ್ದಕ್ಕಿದ್ದಂತೆ ಪ್ರಾಪ್ತವಾದ ಈ ರಾಜಕೀಯ ಸಾಮಾಜಿಕ ಸ್ಥಾನಮಾನಗಳು ಮ್ಯಾಸಬೇಡ ಜನಾಂಗದಲ್ಲಿ ಒಂದು ಹೊಸ ಜಾತಿ ಪ್ರಕ್ರಿಯೆಗೆ ಕಾರಣವಾದುದು ಕುತೂಹಲಕರವಾದ ಅಂಶ. ಇಂದು 'ಪಾಳೆಯಗಾರ'ರೆಂದು ತಮ್ಮನ್ನು ಉನ್ನತ ಸಾಮಾಜಿಕ ಸ್ತರದಲ್ಲಿ ಗುರುತಿಸಿಕೊಳ್ಳುವ ಬೇಡರು

ಮೂಲತಃ ಮ್ಯಾಸಬೇಡರೇ. ಆದರೆ ವಿಜಯನಗರದ ಅರಸರ ಕಾಲದಲ್ಲಿ ಸೃಷ್ಟಿಯಾದ ಆಡಳಿತಾತ್ಮಕ 'ಪಾಳೆಯಗಾರ' ಪದವಿಯ ಅಂತಸ್ತಿನಿಂದ ಸಾಮಾಜಿಕವಾಗಿ ಮೇಲುಸ್ತರಕ್ಕೆ ಏರಿದ ಈ ಬೇಡರು ತಮ್ಮನ್ನು 'ಪಾಳೆಯಗಾರ' ಎಂಬ ಹೊಸ ಜಾತಿ (Caste) ಹೆಸರಿನಿಂದ ಗುರುತಿಸಿಕೊಳ್ಳತೊಡಗಿದರು.

ಹೀಗಾಗಿ ಮ್ಯಾಸಬೇಡರೊಂದಿಗೆ ಹಿಂದೆ ಇದ್ದ ವೈವಾಹಿಕ ಸಂಬಂಧಗಳನ್ನು ರದ್ದು ಮಾಡಿಕೊಂಡು, ಉನ್ನತ 'ಪಾಳೆಯಗಾರ' ಸಾಮಾಜಿಕ ಅಂತಸ್ತಿನ ಬಂಧುಗಳೊಂದಿಗೆ ಮಾತ್ರ ವ್ಯವಹರಿಸತೊಡಗಿ ಒಂದು ಹೊಸ ಜಾತಿಯನ್ನೇ ಹುಟ್ಟು ಹಾಕಿದರು. ಚಿತ್ರದುರ್ಗದ ಪಾಳೆಯಗಾರರು ಮೂಲತಃ 'ಕಾಮಗೇತಲ ಕುಲ'ಕ್ಕೆ ಸೇರಿದ ಮ್ಯಾಸಬೇಡರಾಗಿದ್ದರೆಂಬುದನ್ನು ಅವರ 'ಕಾಮಗೇತಿ ಕಸ್ತೂರಿ ಕುಲತಿಲಕ' ಬಿರುದೇ ಹೇಳುತ್ತದೆ. ಹಿಂದೆ ಹೇಳಿದಂತೆ ಬೇರೆ ಜಾತಿಗಳಲ್ಲಿ ಪಾಳೆಯಗಾರರು ಇದ್ದಾಗ್ಯೂ ಕ್ರಮೇಣ ಈ 'ಪಾಳೆಯಗಾರರು' ಎಂಬ ಶಬ್ದ ಜಾತಿ ಸೂಚಕವಾಗಿ 'ಬೇಡ' ಜನಾಂಗಕ್ಕೆ ಮಾತ್ರ ಸೀಮಿತವಾದಂತೆ ಬಳಕೆಯಾಗಿರುವುದು ಕಂಡುಬರುತ್ತದೆ. ಈ ಬೇಡರು ಆಳುವ ವರ್ಗಕ್ಕೆ ಸೇರಿದ್ದರಿಂದ ತಮ್ಮನ್ನು 'ನಾಯಕರು' ಎಂದೂ ಕರೆದುಕೊಳ್ಳುತ್ತಿದ್ದರು. ಕ್ರಮೇಣ ಈ ಶಬ್ದವೂ 'ಮುಖ್ಯಸ್ಥ' ಎನ್ನುವ ಅರ್ಥವನ್ನು ಕಳೆದುಕೊಂಡು 'ಗೌಡ' ಶಬ್ದದಂತೆ ಜಾತಿ ಸೂಚಕವಾಯಿತು. ಹೀಗಾಗಿ ಇಂದು ಉನ್ನತ ಸಾಮಾಜಿಕ ಸ್ತರದಲ್ಲಿ ಗುರುತಿಸಿಕೊಳ್ಳುವ (ಹಿಂದಿನ ಆಳುವ ವರ್ಗಕ್ಕೆ ಸೇರಿದ) 'ಪಾಳೆಯಗಾರರ'ಲ್ಲದೆ ನಾಯಕ (ಬ್ಯಾಡ) ಜನಾಂಗಕ್ಕೆ ಸೇರಿದ ಎಲ್ಲಾ ಕೋಮಿನವರೂ (ಮ್ಯಾಸ ನಾಯಕರು, ಊರು ನಾಯಕರು) ತಮ್ಮನ್ನು 'ನಾಯಕರು' ಎಂದು, 'ಪಾಳೆಯಗಾರರು' ಎಂದು ಕರೆದುಕೊಳ್ಳಬಯಸುತ್ತಾರೆ. ಈ ಶಬ್ದಗಳು ತಮ್ಮ ಪರಂಪರೆಯನ್ನು ಅತ್ಯಂತ ಪ್ರತಿಷ್ಠೆಯಿಂದ ಹೇಳುತ್ತವೆ ಎಂದು ಭಾವಿಸುತ್ತಾರೆ. ಈ 'ಪಾಳೆಯಗಾರ' ಎಂಬ ಪದ ಕ್ರಮೇಣ ದರ್ಪ, ದೌರ್ಜನ್ಯ, ದುರಹಂಕಾರಗಳ ಅರ್ಥವನ್ನು ಧ್ವನಿಸುವ ರೀತಿಯಲ್ಲಿ, ಇಂದು ಚಲಾವಣೆಯಲ್ಲಿರುವುದನ್ನು ಕಾಣಬಹುದು. 'ನನ್ನ ಮೇಲೆ ನಿನ್ನ ಪಾಳೇಗಾರಿಕೆ ತೋರಿಸೋಕೆ ಬರಬೇಡ' ಎಂಬ ಮಾತು ಜನಪದರಲ್ಲಿ ಆಗಾಗ್ಗೆ ಬಳಕೆಯಾಗುವುದನ್ನು ಕಾಣಬಹುದು. ಚಿತ್ರದುರ್ಗದ ಪಾಳೆಯಗಾರರ 'ಹಗಲು ಕಗ್ಗೊಲೆ ಮಾನ್ಯ', 'ಎಪ್ಪತ್ತೇಳು ಪಾಳೆಯಗಾರರ ಮಿಂಡ' ಎಂಬಂತಹ ಬಿರುದುಗಳಲ್ಲಿ ಅವರ ದರ್ಪ, ಪರಾಕ್ರಮ, ಹೆಮ್ಮೆ, ಕ್ರೌರ್ಯಗಳನ್ನು ಗಮನಿಸಬಹುದು. ಹೀಗಾಗಿ ಕಾಲಕ್ರಮೇಣ 'ಪಾಳೆಯಗಾರ' ಎಂಬ ಹೆಸರೇ ದರ್ಪ-ದೌರ್ಜನ್ಯಗಳಿಗೆ ಮತ್ತೊಂದು ಹೆಸರು ಎಂಬಂತೆ ಬೆಳೆದು ಬಂತು.

ಈ ಹಿನ್ನೆಲೆಯಲ್ಲಿ ಗಮನಿಸಿದಾಗ 'ಪಾಳೆಯಗಾರ ವೇಷ' ಅತ್ಯಂತ ಜಬರ್ಾಗಿ ದರ್ಪ-ಆರ್ಭಟಗಳಿಂದ ಬೇರೆಲ್ಲ ವೇಷಗಳಿಗಿಂತ ಹೆಚ್ಚು ಕಳೆಗಟ್ಟುತ್ತದೆ ಮತ್ತು ಎದ್ದು ಕಾಣುತ್ತದೆ. ಆದರೆ ಈ ವೇಷ ಎಂದು, ಯಾರಿಂದ, ಹೇಗೆ ಪ್ರಾರಂಭವಾಯಿತು ಎಂಬುದು ತಿಳಿಯುತ್ತಿಲ್ಲ.

ಒಂದು ಉಲ್ಲೇಖದ (ಕರ್ನಾಟಕ ಜನಪದ ಕಲೆಗಳು, ಪ್ರಕಟಣೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು) ಪ್ರಕಾರ 'ಬ್ರಿಟಿಷರ ಕಾಲದಲ್ಲಿ ಬಲಿಷ್ಠನಾಗಿದ್ದ ಪಾಳೆಯಗಾರನೊಬ್ಬ ಅವರಿಗೆ ಸವಾಲಾಗುತ್ತಾನೆ. ಆಗ ಅವರು ಸಂಚುಮಾಡಿ ಅವನ ಸೂಳೆಯಿಂದ ಅವನಿಗೆ ವಿಷ

ಕುಡಿಸಿ ಸಾಯಿಸಿದರು. ಅವನ ವಂಶಸ್ಥರು ಅವನ ಪ್ರತಾಪ ಪರಾಕ್ರಮಗಳನ್ನು ಹೇಳಲು ಈ ವೇಷ ಹಾಕುತ್ತಾ ಬಂದರು' ಎಂದು ಹೇಳುತ್ತದೆ. ಆದರೆ ಈ ಹೇಳಿಕೆ ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಯಾಕೆಂದರೆ ಪೀರಲ ಹಬ್ಬದ ಸಂದರ್ಭದಲ್ಲಿ ನಾವು ಕಾಣುವ ವೇಷ-ಪಾಳೆಯಗಾರನನ್ನು ಬಂಧಿಸಿಕೊಂಡು ಹೋಗುವಂತಹುದು. ಇಲ್ಲಿ ಅವನ ಕೈಗಳು ಮತ್ತು ಸೊಂಟಕ್ಕೆ ಹಗ್ಗ ಕಟ್ಟಿ ಎರಡೂ ದಿಕ್ಕಿನಿಂದ ಅವನನ್ನು ಹಿಡಿದ ಜನ ಹಿಗ್ಗಾ-ಮುಗ್ಗಾ ಎಳೆಯುತ್ತಿರುತ್ತಾರೆ. 'ಪಾಳೆಯಗಾರ' ಆರ್ಭಟದಿಂದ ಕೂಗುತ್ತಿರುತ್ತಾನೆ. ಉಳಿದಂತೆ ಪಾಳೇಗಾರ ವೇಷದಾರಿಯೇ ತಪ್ಪಡೆ (ತಮಟೆ) ವಾದ್ಯ ನುಡಿತದ ಗತ್ತಿಗೆ ತಕ್ಕಂತೆ ಕುಣಿಯುತ್ತಾನೆ. ಹೀಗಾಗಿ ರಾಜ್ಯದ ಕೆಲವು ಭಾಗದಲ್ಲಿ ಬಹುಶಃ ಈ ಕುಣಿತದ ಕಾರಣಕ್ಕೇ ಇದನ್ನು 'ಪಾಳೆಯಗಾರನ ಕುಣಿತ' ಎಂದು ಕರೆಯುವುದುಂಟು.

ಇಲ್ಲಿ ಅವನ ಪ್ರತಾಪ-ಪರಾಕ್ರಮಗಳನ್ನು ಹೇಳುವುದಕ್ಕಿಂತ ಹೆಚ್ಚಾಗಿ ಒಂದು ಕಾಲಕ್ಕೆ ದರ್ಪ, ದೌರ್ಜನ್ಯದಿಂದ ಮೆರೆದವನನ್ನು ಸೆರೆಹಿಡಿದು ನಾನಾ ರೀತಿ ಹಂಗಿಸಿ-ಭಂಗಿಸಿ ಅವಮಾನ ಮಾಡಿ ಸಂತೋಷ ಪಡುವಂತಹ ಪ್ರವೃತ್ತಿ ಕಾಣುತ್ತದೆ. ಹೀಗಾಗಿ ಇದೊಂದು 'ಅಣಕು ವೇಷ' ಎಂದು ಹಿರಿಯ ಕಲಾವಿದರಾದ ದಿ.ಪಿ.ಆರ್. ತಿಪ್ಪೇಸ್ವಾಮಿ ಅಭಿಪ್ರಾಯ ಪಡುತ್ತಾರೆ.

ಆದರೆ ಈ ವೇಷ ಹಾಕುವ ಬಹುಮಂದಿ ನಾಯಕ ಜನಾಂಗಕ್ಕೇ ಸೇರಿದವರಾಗಿರುವುದರಿಂದ, ತಮ್ಮ ಪರಂಪರೆಯ ಪ್ರತಿಷ್ಠಿತ ವ್ಯಕ್ತಿಯನ್ನು ಹಂಗಿಸುವ ಕೆಲಸವನ್ನು ಮಾಡಲಾರರು. ಪೀರ್ಲ ಹಬ್ಬದ ಸಂದರ್ಭದಲ್ಲಿ ಖುಷಿಗಾಗಿ, ಕೇವಲ ಖುಷಿಗಾಗಿ ಮನರಂಜನೆಗಾಗಿ ಹಾಕುವ ವೇಷ ಎಂದು ಭಾವಿಸಿದ್ದಾರೆ.

ಆದರೆ ಇತ್ತೀಚೆಗೆ ಕೆಲವು (ಪಟ್ಟಣಗಳಲ್ಲಿರುವ) ನಾಯಕ ಜನಾಂಗದವರು ತಮ್ಮ ಜನಾಂಗದ ಪ್ರತಿಷ್ಠಿತ ವ್ಯಕ್ತಿಯಾದ 'ಪಾಳೆಯಗಾರನ ವೇಷ' ಹಾಕಿ ಬೀದಿಯಲ್ಲಿ ಕುಣಿದು ಕುಪ್ಪಳಿಸುವುದು ತಮ್ಮ ಪರಂಪರೆಗೆ. ಘನತೆಗೆ ಮಾಡಿದ ಅವಮಾನ ಎಂದು ಭಾವಿಸುತ್ತಿದ್ದಾರೆ. ಹೀಗಾಗಿ ಅನೇಕ ಜನಪರ ಕಲಾಮೇಳಗಳಲ್ಲಿ ಈ ಕಲೆಯ ಪ್ರದರ್ಶನ ಕೂಡದು ಎಂದು ಪ್ರತಿಭಟಿಸುತ್ತಿದ್ದಾರ. ಆದರೆ ಈ ಭಾವನೆ ಇಲ್ಲದ ಹಳ್ಳಿಗಾಡಿನಲ್ಲಿ ಈಗಲೂ ಈ ಕಲೆ ಪ್ರದರ್ಶಿತವಾಗುತ್ತಿದೆ.

ಆದರೆ ಈ ವೇಷ ಈಗ ಹೊಸ ತಿರುವು ಪಡೆದುಕೊಂಡು, ವಾಲ್ಮೀಕಿ ಜನಾಂಗದ ಸಭೆ-ಸಮಾರಂಭಗಳಲ್ಲಿ, ತಮ್ಮ ಪರಂಪರೆಯನ್ನು ನೆನಪಿಸಿಕೊಳ್ಳುವ ಪ್ರಯತ್ನವಾಗಿ 'ಸ್ತಬ್ಧ ಚಿತ್ರ'ದ ರೂಪದಲ್ಲಿ ಪ್ರದರ್ಶಿತವಾಗುತ್ತಿದೆ. ಹೀಗಾಗಿ ಕೇವಲ ಕೀಟಲೆಯ. ಖುಷಿಯ ಮಾಧ್ಯಮವಾಗಿದ್ದ ಒಂದು ವೇಷ, ನಾಡಿನ ಗರಿಮೆ. ಜನಾಂಗದ ಹಿರಿಮೆಯನ್ನು ತೋರುವ ಒಂದು ಸಂಕೇತವಾಗಿ ಪ್ರದರ್ಶಿತವಾಗುವುದರ ಮೂಲಕ ಕೆಳಹಂತದಿಂದ ಮೇಲು ಹಂತಕ್ಕೆ ಬಡ್ತಿ ಪಡೆಯುವುದರೊಂದಿಗೆ, ನಾಯಕ ಜನಾಂಗದಲ್ಲಿ ತಮ್ಮ ಭವ್ಯ ಪರಂಪರೆಯ ಬಗ್ಗೆ, ಪ್ರೀತಿ, ಅಭಿಮಾನಗಳು ನೆಲಸುವಂತೆ ಮಾಡುವಲ್ಲಿ ಸಾಫಲ್ಯವನ್ನು ಕಾಣುತ್ತಿದೆ.

'ಇತಿಹಾಸ ಚಿತ್ರ'ವೊಂದು ಜನಪದ ಕಲೆಯಲ್ಲಿ ಹೇಗೆ 'ಪ್ರದರ್ಶಕ ಕಲೆ'ಯಾಗಿ ಭಾಗಿಯಾಗಬಲ್ಲದೆಂಬುದನ್ನು 'ಪಾಳೇಗಾರ ವೇಷ' ಪರಿಣಾಮಕಾರಿಯಾಗಿ ನಿರೂಪಿಸುವುದರೊಂದಿಗೆ, ಹೇಗೆ ಜಾನಪದ ಎಲ್ಲವನ್ನೂ ಒಳಗೊಳ್ಳುತ್ತಾ ಹೋಗುತ್ತದೆ ಎಂಬುದಕ್ಕೆ ಒಂದು ಒಳ್ಳೆಯ ನಿದರ್ಶನವೂ ಆಗಿದೆ.*

* ಜನವಾಹಿನಿ, 27-12-94.

---

*ಈಗ ಇದೇ ಹಾದಿಯಲ್ಲಿ 'ಖಾಸಾಬೇಡ ಪಡೆ' ಎಂಬ ಹೊಸ ಜನಪದ ಕಲೆಯೊಂದು ಹುಟ್ಟಿಕೊಂಡಿದೆ. ಪಾಳೆಯಗಾರರ ಕಾಲದಲ್ಲಿ 'ಖಾಸಾ ಬೇಡ ಪಡೆ' ಎಂಬ ಅಂಗರಕ್ಷಕ ಪಡೆಯಿತ್ತು. ಸೆಳ್ಳಹಾಕಿಕೊಂಡು ತಲೆಗೆ ಪೇಟ ಕಟ್ಟಿ, ಹೆಗಲ ಮೇಲೆ ಕಂಬಳಿ ಹಾಕಿಕೊಂಡು: ಕೈಯಲ್ಲಿ ಗಂಡುಗೊಡಲಿ, ಚಂದ್ರಾಯುಧ, ಕುಡುಗೋಲು ಹಿಡಿದಿರುತ್ತಿದ್ದ ಈ ಪಡೆ ಜೀವದ ಹಂಗು ತೊರೆದು ಪಾಳೆಯಗಾರರ ರಕ್ಷಣೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಿದ್ದ ಈ ಪಡೆ ವರ್ಷಕ್ಕೊಮ್ಮೆ ಶತ್ರುಗಳ ತಲೆಗಳನ್ನು ತರಿದು ತಂದು ರಾಶಿ ಹಾಕಿ ಜಗಲಿ ನಿರ್ಮಿಸಿ ಅದರ ಮೇಲೆ ಪಾಳೆಯಗಾರರನ್ನು ಕೂರಿಸಿ ತಮ್ಮ ಭಕ್ತಿಯನ್ನು ಸಮರ್ಪಿಸುತ್ತಿತ್ತು ಎಂಬುದು ಒಂದು ದಂತ ಕತೆ. ಈ ದಂತಕತೆಯನ್ನು ಆಧರಿಸಿ ಈಗ ಈ ಕಲೆ ಹುಟ್ಟಿಕೊಂಡಿದೆ. ತಮಟೆ ವಾದ್ಯದ ಹಿನ್ನೆಲೆಯಲ್ಲಿ ಕೇಕೆ, ಕೂಗು ಹಾಕುತ್ತಾ ಅಬ್ಬರಿಸಿ-ಆರ್ಭಟಿಸುವ ಈ ಪಡೆಯ ಕಲಾ ಪ್ರದರ್ಶನ ಎಂಥವರ ಎದೆಯನ್ನೂ ನಡುಗಿಸುತ್ತದೆ.



# ಚಿತ್ರದುರ್ಗ ಜಿಲ್ಲೆಯ ಜನಪದ ವೀರರು

ಮಧ್ಯ ಕರ್ನಾಟಕದ ಪೂರ್ವದಂಚಿನ ಚಿತ್ರದುರ್ಗ ಜಿಲ್ಲೆ ಹೇಗೆ ತನ್ನ ಪಾಳೆಯಗಾರ ನಾಯಕ ಅರಸರಿಂದ ಇತಿಹಾಸ ಪ್ರಸಿದ್ಧವೋ ಹಾಗೇ ಇಲ್ಲಿ ನೆಲೆಸಿರುವ ಪಶುಪಾಲಕ ಬುಡಕಟ್ಟುಗಳ ದೃಷ್ಟಿಯಿಂದ ಸಾಂಸ್ಕೃತಿಕ ಮಹತ್ವವನ್ನು ಪಡೆದ ಜಿಲ್ಲೆ. ಆಂಧ್ರಪ್ರದೇಶ ಸೇರಿದಂತೆ ತುಂಗಭದ್ರಾ ನದಿಯ ಆಚೆಗಿನ ಕರ್ನಾಟಕದ ವಿವಿಧ ಭಾಗಗಳಿಂದ ಹುಲ್ಲು-ನೀರು ಹುಡುಕುತ್ತಾ ವಲಸೆ ಬಂದ ಅಲೆಮಾರಿ ಪಶುಪಾಲಕ ಬುಡಕಟ್ಟುಗಳಿಗೆ ನೆಲೆಯಾಗಲು ಅವಕಾಶ ಕಲ್ಪಿಸಿದ್ದಲ್ಲದೆ ಮ್ಯಾಸಬೇಡರಂತಹ ಕೆಲವು ದನಗಾಹಿ ಬುಡಕಟ್ಟು ಸಮುದಾಯಗಳು ರಾಜ್ಯ ಸ್ಥಾಪಿಸಲು ನೆರವಾದ ಈ ಜಿಲ್ಲೆ ಕುರುಚಲು ಕಾಡಿನಿಂದ ಕೂಡಿದ ಇಡೀ ಜಿಲ್ಲೆಯ ಭೌಗೋಳಿಕ ವಾತಾವರಣ ಪಶುಪಾಲಕ ಸಂಸ್ಕೃತಿಯ ಅರುಳುವಿಕೆಗೆ ಹೇಳಿ ಮಾಡಿಸಿದಂತಿದೆ. ಹೀಗಾಗಿ ಇಲ್ಲಿಯ ಪಶುಪಾಲಕ ಬುಡಕಟ್ಟುಗಳಲ್ಲಿ ಅನೇಕ ಬಗೆಯ ಸಾಂಸ್ಕೃತಿಕ ವೀರರು, ಈರಗಾರರು ಹುಟ್ಟಿಕೊಂಡಿದ್ದಾರೆ.

ಚಿತ್ರದುರ್ಗ ಈ ಪಶುಪಾಲಕ ಸಂಸ್ಕೃತಿಗಳ ತೂಗು ತೊಟ್ಟಿಲಾದುದು ಸಾಂಸ್ಕೃತಿಕ ಕುತೂಹಲಗಳಲ್ಲೊಂದು. ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿ(ಚಿತ್ರದುರ್ಗದ ಅರಸರು 'ಕಾಮಗೇತಿ' ಎಂಬ ಮ್ಯಾಸಬೇಡ ಬುಡಕಟ್ಟಿಗೆ ಸೇರಿದವರು) ಮೂಲಪುರುಷರು ಅಲೆಮಾರಿ ಪಶುಪಾಲಕ ಸಂಸ್ಕೃತಿಗೆ ಸೇರಿದವರೇ ಆಗಿದ್ದಾರೆ ಎಂಬುದು ಗಮನಾರ್ಹ. ಹೊಸದುರ್ಗ ತಾಲ್ಲೂಕಿನ ಅಂದಿನ ಬೂದಿಹಾಳು-ಇಂದಿನ ಶ್ರೀರಾಮಪುರದಲ್ಲಿ ಆಳಿದ ಪಾಳೆಯಗಾರ ಗೊಲ್ಲ ಸಿರುಮನೂ ಪಶುಪಾಲಕ ಬುಡಕಟ್ಟಿಗೆ ಸೇರಿದವನೇ ಆಗಿದ್ದಾನೆ, ಇವನನ್ನು ಕುರಿತು ಮೂರು ಶಿಷ್ಟ ಕಾವ್ಯಗಳೇ ಹುಟ್ಟಿಕೊಂಡಿವೆ.

ಚಿತ್ರದುರ್ಗ ಜಿಲ್ಲೆಯ ಪೂರ್ವದಂಚಿನುದ್ದಕ್ಕೂ ಅತ್ಯಂತ ದಟ್ಟವಾದ ಮ್ಯಾಸಬೇಡ, ಕಾಡುಗೊಲ್ಲ ಬುಡಕಟ್ಟಿನ ಜನ ವಾಸಿಸುತ್ತಿದ್ದಾರೆ. ಈ ಬುಡಕಟ್ಟುಗಳಷ್ಟೇ ಸಮೃದ್ಧ ಸಾಂಸ್ಕೃತಿಕ ಚರಿತ್ರೆಯುಳ್ಳ, ಒಂದು ಕಾಲಕ್ಕೆ ಬುಡಕಟ್ಟಿನ ರೀತಿಯಲ್ಲಿ ಬದುಕುತ್ತಿದ್ದು, ಈಗ 'ಜಾತಿ'ಯಾಗಿ ಪರಿವರ್ತನೆಗೊಂಡಿರುವ ಕುಂಚಿಟಿ ಒಕ್ಕಲಿಗರು ಈ ಬುಡಕಟ್ಟುಗಳ ವಾಸದ ನೆಲೆಗಳುದ್ದಕ್ಕೂ ಹಾಸುಹೊಕ್ಕಾಗಿ ಬದುಕುತ್ತಿದ್ದಾರೆ. ಅನೇಕ ಸಾಂಸ್ಕೃತಿಕ ಸಾಮ್ಯ ಮತ್ತು ವೈಶಿಷ್ಟ್ಯಗಳನ್ನು ಈ ಮೂರೂ ಸಮುದಾಯಗಳು ಹೊಂದಿದ್ದು ಮೂಲತಃ ಪಶುಪಾಲಕ ಸಂಸ್ಕೃತಿಗೆ ಸೇರಿದವುಗಳೇ ಆಗಿವೆ. ಇವುಗಳ ಸಾಂಸ್ಕೃತಿಕ ಸೂಕ್ಷ್ಮಗಳ ಸಮೀಕ್ಷೆಯ ನಂತರ ಜನಪದ ವೀರರು ರೂಪುಗೊಂಡ

ಬಗೆಯನ್ನು ಪರಿಶೀಲಿಸಬಹುದು. ಇಲ್ಲಿಯವರೆಗೂ ಬೇಟೆ ಸಂಸ್ಕೃತಿಗೆ ಸೇರಿದವರೆಂದು ನಂಬಲಾಗಿದ್ದ, ಹಾಗೆಂದೇ ವ್ಯಾಖ್ಯಾನಕ್ಕೊಳಗಾಗಿದ್ದ ಮ್ಯಾಸಬೇಡರು ಮೂಲತಃ ಪಶುಪಾಲಕ ಸಂಸ್ಕೃತಿಗೇ ಸೇರಿದವರೆಂದು ಇಂದಿಗೂ ಅವರಲ್ಲಿ ಪಳೆಯುಳಿಕೆಯಂತೆ ಉಳಿದಿರುವ ಪಶುಪಾಲಕ ಸಂಸ್ಕೃತಿಯ ಆಚರಣೆಗಳೇ ಹೇಳುತ್ತವೆ. ದೇವರ ಹೆಸರಿನಲ್ಲಿ ದನಗಳನ್ನು ಬಿಡುವುದಲ್ಲದೆ, ತಮ್ಮನ್ನು ಗೋವಿನಿಂದಲೇ ಜನಿಸಿದವರೆಂದು ಭಾವಿಸುತ್ತಾ ಎತ್ತುಗಳನ್ನು 'ಮುತ್ತಯ್ಯ'ಗಳೆಂದು ಗೌರವಿಸುವ, ಅಂಥ ಪವಿತ್ರ ಎತ್ತುಗಳನ್ನು ಕಾಯುವ ಕಾಯಕ ಮಾಡುವವರನ್ನು 'ಕಿಲಾರಿ'ಗಳೆಂದು ಕರೆಯುವ ದಟ್ಟ ಸಂಪ್ರದಾಯಗಳು ಇಂದಿಗೂ ಅವರಲ್ಲಿ ಉಳಿದುಕೊಂಡು ಬಂದಿವೆ. ಮೂಲತಃ 'ಮ್ಯಾಸ' ಎಂಬ ಶಬ್ದದ ನಿಷ್ಪತ್ತಿ ಪಶುಗಳನ್ನು ಮೇಯಿಸುವ ವೃತ್ತಿಯಿಂದ ಬಂದುದಾಗಿದ್ದು ಈ ಶಬ್ದವೇ ಕ್ರಮೇಣ ಮೇಸುವ, ಮ್ಯೇಸು, ಮ್ಯಾಸು ಮ್ಯಾಸ ಎಂದು ರೂಪಾಂತರಗೊಂಡಿದೆ. ಬೇಟೆ, ಪಶುಪಾಲನೆ, ಕೃಷಿ ಇವೆಲ್ಲ ಒಂದರೊಡನೊಂದು ಬೆರೆತು ಸುಮಾರು ಕ್ರಿ.ಶ. 1546ರ ಕಾಲಘಟ್ಟದಲ್ಲಿ ಇವರನ್ನು ಅಧ್ಯಯನ ಮಾಡುವುದರಿಂದ ಯಾರು ಯಾವ ಸಂಸ್ಕೃತಿಗೆ ಸೇರಿದವರೆಂಬ ಗೊಂದಲಗಳಿಗೆ ಕಾರಣವಾಗಿದೆ.

ಮ್ಯಾಸಬೇಡರ ಕಟ್ಟೆಮನೆಗಳು ಮತ್ತು ಪ್ರಮುಖ ದೇವಸ್ಥಾನಗಳೆಲ್ಲ ಹೆಚ್ಚು ಕಡಿಮೆ ಈ ಜಿಲ್ಲೆಯ ವ್ಯಾಪ್ತಿಯೊಳಗೇ ಇವೆ. ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿ ನನ್ನಿವಾಳ ಮತ್ತು ಚಿತ್ರದುರ್ಗ ಜಿಲ್ಲೆಯ ಗೋನೂರು ಮ್ಯಾಸಬೇಡರ ಮೂಲ ಕಟ್ಟೆಮನೆಗಳು. ಗೌರಸಂದ್ರ- ಮಾರಮ್ಮನಿಂದ ಪ್ರಸಿದ್ಧಿಯನ್ನು ಪಡೆದಿದ್ದರೂ ಇದು ಹಿಂದೆ 'ಐವೋಜಿಮಠ' ಎಂದು ಗುರುಸ್ಥಾನ ಪಡೆದಿತ್ತು. ಇದೇ ತಾಲ್ಲೂಕಿನ ಖುದಾಪುರ ಭೈರವನ ನೆಲೆಯಾಗಿ ಹೆಸರಾಗಿದೆ.

ಆಚರಣಾ ಸಮೃದ್ಧಿಯ ಮ್ಯಾಸಬೇಡರಷ್ಟೇ ಸಮೃದ್ಧ ಪಶುಪಾಲಕ ಪರಂಪರೆಯನ್ನು ಹೊಂದಿದ ಇನ್ನೊಂದು ಬುಡಕಟ್ಟು ಕಾಡುಗೊಲ್ಲರದು. ಮ್ಯಾಸಬೇಡರಲ್ಲಿ ಇಲ್ಲದ, ಇದ್ದರೂ ತೀರಾ ಶುಷ್ಕವೆನ್ನಿಸುವ ಸಾಹಿತ್ಯ ಸಮೃದ್ಧಿಗೆ ಅಪವಾದವೆಂಬಂತೆ ಕಾಡುಗೊಲ್ಲರಲ್ಲಿ ಮತ್ತು ಕುಂಚಿಟಿಗರಲ್ಲಿ ನಿಬ್ಬೆರಗಾಗುವಂತಹ ಸಮೃದ್ಧಿಯನ್ನು ಕಾಣಬಹುದು. ಕಾಡುಗೊಲ್ಲ ಬುಡಕಟ್ಟಿನ ಸಾಂಸ್ಕೃತಿಕ ವೀರರಾದ ಎತ್ತಪ್ಪ, ಜುಂಜಪ್ಪನವರನ್ನು ಕುರಿತು ಎರಡು ಜನಪದ ಮಹಾಕಾವ್ಯಗಳೇ ಹುಟ್ಟಿಕೊಂಡಿವೆ. ಈರಗಾರರನ್ನು ಕುರಿತು ಅಸಂಖ್ಯ ಖಂಡಕಾವ್ಯಗಳಿವೆ.

ಈ ಬುಡಕಟ್ಟಿನ ಮೂಲಕಟ್ಟೆ ಮನೆಗಳಾದ ಕರಿಯೋಬೇನಹಳ್ಳಿ, ತಾಳವಟ್ಟಿಗಳು ಹಿರಿಯೂರು ತಾಲ್ಲೂಕಿನಲ್ಲಿದ್ದರೆ, ಬೇಚರಕ್ ಆಗಿರುವ ರಾಮನಹಳ್ಳಿ ಚಿತ್ರದುರ್ಗ ತಾಲ್ಲೂಕಿನಲ್ಲಿದೆ. ಈ ಎರಡೂ ಬುಡಕಟ್ಟಿನ ಮೂಲಕಟ್ಟೆ ಮನೆಗಳು ಹಾಗೂ ಅವುಗಳಿಂದ ಬೇರೆ ಬೇರೆ ಸ್ಥಳಗಳಲ್ಲಿ ಮಾಡಿಕೊಂಡಿರುವ ಕಟ್ಟೆಮನೆಗಳು ಸಾಂಸ್ಕೃತಿಕವಾಗಿ ನಿಷ್ಕ್ರಿಯವಾಗಿವೆ, ಕೇವಲ ನಾಮಕಾವಸ್ತೆಗೆ ಉಳಿದಿವೆ.

ಕಾಡುಗೊಲ್ಲರ ಪಂಚಲಿಂಗಗಳ ಮೂಲಸ್ಥಾನಗಳೂ ಈ ಜಿಲ್ಲೆಯಲ್ಲೇ ಇವೆ. ಹಿರಿಯೂರು ತಾಲ್ಲೂಕಿನ ಕಡ್ಲಹಳ್ಳಿಯಲ್ಲಿ- ಪಾತೇಲಿಂಗ, ಇಕ್ಕನೂರಿನಲ್ಲಿ-ಕಾಟಂಲಿಂಗ; ಚಳ್ಳಕೆರೆ ತಾಲ್ಲೂಕಿನ

ಚಿನ್ನಮ್ಮನಾಗತಿಹಳ್ಳಿಯಲ್ಲಿ-ಕ್ಯಾತೇಲಿಂಗ. ಚಿತ್ರದುರ್ಗ ತಾಲ್ಲೂಕಿನ ಬೇಚರಕ್ ರಾಮಣಹಳ್ಳಿಯಲ್ಲಿ ರಾಮಲಿಂಗ. ಹೊಳಲ್ಕೆರೆ ತಾಲ್ಲೂಕಿನಲ್ಲಿ ಚಿತ್ರಲಿಂಗಗಳು ಇವೆ. ಇವುಗಳಲ್ಲಿ ಕಾಟಲಿಂಗ, ಪಾತೇಲಿಂಗ. ಚಿತ್ರಲಿಂಗಗಳಿಗೆ ಮ್ಯಾಸಬೇಡರು ಒಕ್ಕಲಾಗಿ ನಡೆದುಕೊಳ್ಳುತ್ತಾರೆ. ಆಚರಣೆ ಮತ್ತು ಸಾಹಿತ್ಯಗಳ ಸಮಾನ ಸಮೃದ್ಧಿಯನ್ನು ಹೊಂದಿರುವ ಕುಂಚಿಟಿ ಒಕ್ಕಲಿಗರ ಬಹುತೇಕ ನೆಲೆಗಳು ಪಕ್ಕದ ತುಮಕೂರು ಜಿಲ್ಲೆಯ ಶಿರಾ, ಮಧುಗಿರಿ ತಾಲ್ಲೂಕುಗಳಲ್ಲಿ ಮತ್ತು ಆಂಧ್ರದ ಮಡಕಶಿರಾ ತಾಲ್ಲೂಕಿನಲ್ಲಿ ಹರಡಿಕೊಂಡಿದ್ದರೂ, ಗೊಲ್ಲ-ಬೇಡ ಬುಡಕಟ್ಟುಗಳಲ್ಲಿನ ಪಶುಪಾಲಕ ಸಂಸ್ಕೃತಿಯೇ ಇವರ ಮೂಲ ಸಂಸ್ಕೃತಿ ಆಗಿದೆ.

'ಎಲ್ಲಿ ಹುಲ್ಲು ನೀರು ಇದೆಯೋ ಅದೇ ನಮ್ಮ ಮನಿ-ಮಾರು' ಎಂಬ ಇಂಥ ಪಶುಪಾಲಕ ಸಂಸ್ಕೃತಿಯ ಈ ಮೂರು ಸಮುದಾಯಗಳು ಮೂಲತಃ ಶೈವ ಪರಂಪರೆಗೆ ಸೇರಿದವರೆ ಆಗಿದ್ದರೂ ವೈಷ್ಣವ ದೈವಗಳ ಆರಾಧನೆಯೂ ಮಿಳಿತಗೊಂಡು 'ಶೈವ-ವೈಷ್ಣವ'ಗಳ ದಿವ್ಯ ಸಂಗಮವಾಗಿರುವುದನ್ನು ಕಾಣಬಹುದು.

ಈ ಸಮುದಾಯಗಳ ಮೂಲವೃತ್ತಿಯಾದ ಪಶುಪಾಲನೆಗೋಸ್ಕರ ತಮ್ಮ ಸರ್ವಸ್ವವನ್ನು ತೆತ್ತುಕೊಂಡು ಹುತಾತ್ಮರಾದವರೇ ಆ ಜನಾಂಗದ ಸಾಂಸ್ಕೃತಿಕ ವೀರರಾಗಿ, ಕಣ್ಮಣಿಗಳಾಗಿ, ಈರಗಾರರಾಗಿ, ಜನಪದ ವೀರರಾಗಿ ರೂಪುಗೊಂಡ ಕಥನಗಳೇ ಆಯಾ ಬುಡಕಟ್ಟುಗಳ ನಡೆದುಬಂದ ಹಾದಿಯನ್ನು ತಿಳಿಸುವ ಸಾಂಸ್ಕೃತಿಕ ಕಥನಗಳೂ, ಚರಿತ್ರೆಯೂ ಆಗಿವೆ. ಕೆಲವು ವೀರರು ಅಲೆಮಾರಿ ಬುಡಕಟ್ಟುಗಳಿಗೊಂದು ಸಾಂಸ್ಕೃತಿಕ ಸಂವಿಧಾನವನ್ನು ರೂಪಿಸಿ ಜನಾಂಗದ ಸಾಂಸ್ಕೃತಿಕ ವೀರರೂ ಆಗಿದ್ದಾರೆ. ಈ ಜನಾಂಗದ ವೀರರೆಲ್ಲ ತಮ್ಮ ಪಶುಗಳೊಂದಿಗೆ ಹುಲ್ಲು-ನೀರು ಹುಡುಕುತ್ತಾ ಬೇರೆ ಬೇರೆ ಪಾಳೆಯಪಟ್ಟಿನ ಪ್ರದೇಶಗಳನ್ನು, ಹುಲ್ಲುಗಾವಲುಗಳನ್ನು ದಾಟುತ್ತಾ ಹೋದಂತೆ ಉಂಟಾದ ಸಂಘರ್ಷ, ಕದನ, ಬೇಡ ಹೆಣ್ಣುಗಳ ಮೋಹಪಾಶವನ್ನು ಧಿಕ್ಕರಿಸಿ ತಲೆಯೊಡಿಸಿಕೊಂಡು ಸತ್ತವರ, ಹುಲಿ-ಹಂದಿ-ತೋಳಗಳಂತಹ ಪ್ರಾಣಿಗಳೊಂದಿಗೆ ಹೋರಾಡಿ ಸತ್ತವರ ಕತೆಗಳೇ ಆಗಿವೆ. ಯಜಮಾನ ಸಂಸ್ಕೃತಿಯೊಂದಿಗೆ ಜನಪದ ಸಂಸ್ಕೃತಿ ನಡೆಸಿದ ಮುಖಾಮುಖಿಯ ಪ್ರತೀಕದಂತೆ ಕಾಣುವ ಈ ಕಥನಗಳು ಆಯಾ ಬುಡಕಟ್ಟುಗಳ ಸಾಂಸ್ಕೃತಿಕ ಕೋಶಗಳೂ ಆಗಿವೆ. ಈಗಾಗಲೇ ಮ್ಯಾಸ ಬುಡಕಟ್ಟಿನ ಪಶುಪಾಲಕ ವೀರರನ್ನು ಗಮನಿಸಿದ್ದೇವೆ.

ಇಂತಹ ವಿಶಿಷ್ಟ ಪಶುಪಾಲಕ ಪರಂಪರೆಯ ಹಿನ್ನೆಲೆಯಲ್ಲಿ ಬಂದ ಇನ್ನೂ ಕೆಲವು ಜನಪದ ವೀರರ ಕಥನಗಳನ್ನು ಗಮನಿಸಬಹುದು.

**ಕಾಡುಗೊಲ್ಲರ ವೀರರು :**

ಎತ್ತಪ್ಪ: ಕಾಡುಗೊಲ್ಲ ಜನಾಂಗದ ಮೊದಲ ಸಾಂಸ್ಕೃತಿಕ ವೀರನಾದ ಎತ್ತಪ್ಪ, ಕಾಡುಗೊಲ್ಲರಿಗೊಂದು ಸಾಂಸ್ಕೃತಿಕ ಸಂವಿಧಾನವನ್ನು ರಚಿಸಿಕೊಟ್ಟ ಪಶುಪಾಲಕ ಧರ್ಮವೀರ. 'ಆವಿನ ಗೊಲ್ಲ ಕಾಣೆ ಎತ್ತಯ್ಯನ ನಾಡಿಗೆ ಚೆಲುವ ಕಾಣೆ' ಎಂದು ಹೆಸರಾದ ಎತ್ತಯ್ಯನ ರೂಪಕ್ಕೆ ಮೋಹಿತಳಾದ ಬೇಡರ ಗುಡ್ಡದ ಬೋರಿ ಎತ್ತಯ್ಯನನ್ನು ವಶಪಡಿಸಿಕೊಳ್ಳಲು

ನಾನಾ ಪ್ರಯತ್ನ ಮಾಡಿ ವಿಫಲಳಾಗಿ ತಲೆಯೊಡೆಸುತ್ತಾಳೆ. ಎತ್ತಯ್ಯನ ಸಮಾಧಿ ಚಳ್ಳಕೆರೆ ತಾಲ್ಲೂಕಿನ ತಳಕಿನ ಗುಡ್ಡದಲ್ಲಿದೆ. ಪ್ರತಿವರ್ಷ ದನಗಾಹಿಗಳು 'ಹಾಲು ಹರಿಸೇವೆ' (ಹಾಲರಿಸ್ಯಾವೆ) ಒಪ್ಪಿಸುತ್ತಾರೆ.

ಸೋದರಮಾವಗಳ ಹೊಟ್ಟೆಕಿಚ್ಚಿಗೆ ಬಲಿಯಾದ ಜುಂಜಪ್ಪನ ಮಹಾಕಾವ್ಯದಷ್ಟೇ ಬೃಹತ್ತಾದ ಜನಪದ ಮಹಾಕಾವ್ಯ ಎತ್ತಪ್ಪನನ್ನು ಕುರಿತೂ ಇದೆ. ಹಿರಿಯೂರು ತಾಲ್ಲೂಕಿನ ವೇಣುಕಲ್ಲುಗುಡ್ಡದಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ.

ಮೆಲ್ಲಜ್ಜ: (ಹಿಂದಿನ) ಚಿತ್ರದುರ್ಗ ಜಿಲ್ಲೆಯ ಜಗಲೂರು ತಾಲ್ಲೂಕಿನ ತೋರಣಗಟ್ಟೆಯಲ್ಲಿ ಕೇವಲ 150 ವರ್ಷದ ಹಿಂದೆ ಆಗಿಹೋದ ಮಹಾನ್ ಪಶುಪಾಲಕ. ಶಾಸ್ತ್ರ-ಜ್ಯೋತಿಷ್ಯಗಳನ್ನು ಸುಳ್ಳು ಎಂದು ಖಂಡಿಸಿದ, ತಿರುಪತಿ ಯಾತ್ರೆ ಹೊರಟವರನ್ನು ಬಿಡಿಸಿ ತಾನಿರುವ ಜಾಗವೇ ತಿರುಪತಿ, ವೈಕುಂಠವೆಂದು ತೋರಿಸಿದವನು. ಅನೇಕ ಪವಾಡಗಳನ್ನು ಮೆರೆದವನು.

ಭರಮಗಿರಿ ಈರಣ್ಣ: ತಾನು ಕರೆದ ಗೋವಿನ ಹಾಲು ತುರುಕರು (ಮುಸ್ಲಿಮರು) ಮುಟ್ಟಿದರೆ ಅಪವಿತ್ರವಾಗುತ್ತವೆ ಎಂದು ಕುದಿಯುವ ಹಾಲನ್ನೇ ಕುಡಿದು ಸತ್ತವನು.

ದೇವರ ಮಾರಪ್ಪ: ದೇವರೆಂದರೆ ಗೊಲ್ಲರಿಗೆ ಇರುವಷ್ಟು ಆಸೆ ಇನ್ನಾರಿಗೂ ಇಲ್ಲ. ದೇವರ ಭರಣಿಯನ್ನು ತರಲು ಸರ್ವಸ್ವವನ್ನೂ ಕಳೆದು ಕೊಂಡವನು.

ಹಂದಿಸಿರಿಯಣ್ಣ: ಪಶುಪಾಲನೆಯ ಸಂದರ್ಭದಲ್ಲಿ ಹಂದಿಯಿಂದ ಹತನಾದವನು.

ಸಾಣೇಕೆರೆ ಗಟ್ಟಣ್ಣ: ಕುರಿ ಮೇಯಿಸುವಾಗ ತೋಳಗಳ ಗುಂಪಿಗೆ ಬಲಿಯಾದವನು.

ಬಿಕ್ಕಲಶಿಪ್ಪೆ ಈರಣ್ಣ, ಬಂಜಗೆರೆ ಈರಣ್ಣ, ಮದನಕುಂಟೆ ಯರ್ರಪ್ಪ ಮುಂತಾದ ವೀರರೆಲ್ಲ ಬೇಡ ಹೆಣ್ಣುಗಳ ಪ್ರೀತಿಯನ್ನು ತಿರಸ್ಕರಿಸಿದ್ದರಿಂದ ತಲೆಯೊಡಿಸಿಕೊಂಡು ಸತ್ತವರು. ಗಂಡನ ಶಂಕೆಗೆ ಒಳಗಾಗಿ ಕೊಂಡಬಿದ್ದ ಕಾಟಿವ್ವ, ಪಾತಿವ್ರತ್ಯ ಸಾರಲು ಕೊಂಡ ಸೇರಿದ ಈರತಿಮ್ಮವ್ವನಂತಹ ಮಹಿಳೆಯರು ಇದ್ದಾರೆ. ಮಳೆಗಾಗಿ ತಲೆಯೊಪ್ಪಿಸಿದ ಗೌನಳ್ಳಿ ಕರುವಿನ ಮಲ್ಲಪ್ಪನಂತಹ ದನಗಾಹಿಗಳು ಇದ್ದಾರೆ. ಕಾಡುಗೊಲ್ಲರ ಬಹಳಷ್ಟು ಈರಗಾರರಲ್ಲಿ ವಿಷಾಹಾರಿ ದೇವತೆಗಳೆಂದೇ ಹೆಸರಾದ ಜನಪದ ವೀರರಿದ್ದಾರೆ.

ಕುಂಚಿಟಿ ಒಕ್ಕಲಿಗರ ವೀರರು :

ಕಾಡುಗೊಲ್ಲರಷ್ಟೇ ಸಾಂಸ್ಕೃತಿಕ ಶ್ರೀಮಂತಿಕೆ ಹೊಂದಿದ ಕುಂಚಿಟಿಗರಲ್ಲಿ ಸಮೃದ್ಧವಾದ ಈರಗಾರರ ಪರಂಪರೆ ಇದೆ. ಆದರೆ ಇದು ಇನ್ನೂ ಕನ್ನೆನೆಲವಾಗಿಯೇ ಉಳಿದಿದೆ. ಸಂಶೋಧಕರಿಗಂತೂ ವಿಪುಲ ಅವಕಾಶಗಳಿವೆ (ಈಗಷ್ಟೆ 'ಕುಂಚಿಟಿಗರ ಸಾಂಸ್ಕೃತಿಕ ವೀರ'ರನ್ನು ಕುರಿತ ಅಧ್ಯಯನವನ್ನು ಚಳ್ಳಕೆರೆಯ ಸಿ. ಶಿವಲಿಂಗಪ್ಪ ಪ್ರಾರಂಭಿಸಿದ್ದಾರೆ).

ಈರಬಡಪ್ಪ: ಹಿರಿಯೂರು ತಾಲ್ಲೂಕಿನ ಹೊಸಳ್ಳಿ ಗ್ರಾಮದ ಪಶುಪಾಲಕ. ಬೇಡರ ಹೆಣ್ಣಿನ ಮೋಹವನ್ನು ತಿರಸ್ಕರಿಸಿ ತಲೆಯೊಡಿಸಿಕೊಂಡು ಸತ್ತವನು.

* * *

ಜಲಧಿ ಬಪ್ಪರಾಯ: ದಿಲ್ಲಿಯಿಂದ ದಕ್ಷಿಣದತ್ತ ವಲಸೆ ಹೊರಟ ಜನಾಂಗದ ಪ್ರಾಣ

ಉಳಿಸಲು, ಗಂಗಾ ನದಿಗೆ ದಾರಿ ಕೇಳಿ ತಲೆಯನ್ನೇ ಕತ್ತರಿಸಿ ಆರತಿ ಬೆಳಗಿದ ವೀರ.

**ತಾಯಿ ಮುದ್ದಮ್ಮ:** ತನ್ನ ಹೆಣ್ಣುಮಕ್ಕಳನ್ನು ಅಳಿಯಂದಿರಿಗೆ ಮದುವೆಮಾಡಿಸಲು ನಿರಾಕರಿಸಿದ್ದರಿಂದ ಆಕೆಯ ಸಹೋದರರೇ ತನ್ನ ಮಗನ ತಲೆಯೊಡೆಸಿದಾಗ ಬೇಸತ್ತು ಶರಣೆಯಾಗಿ, ದೇವತೆಯಾದವಳು.

ಪಶುಪಾಲನೆಯಲ್ಲೇ ಸ್ವರ್ಗ ಕಂಡ ಆವಿನ ಕಾಮರಾಯ, ಬರಗೂರು ವೀರಮ್ಮನವರ ನೆಲೆಗಳು ಹಿರಿಯೂರು ತಾಲ್ಲೂಕಿನ ಹರಿಯಬ್ಬೆಯಲ್ಲಿವೆ.

ಇವರೆಲ್ಲ ಆಯಾ ಬುಡಕಟ್ಟುಗಳಲ್ಲಿನ ಗೋತ್ರಗಳ ಆರಾಧ್ಯ ದೈವಗಳಾಗಿ, ಜನಮನದಲ್ಲಿ ಕತೆಗಳಾಗಿ, ಹಾಡಾಗಿ ಉಳಿದಿದ್ದಾರೆ. ಇವರನ್ನೆಲ್ಲ 'ಅಲುಗು' ರೂಪದಲ್ಲಿ ಪೂಜಿಸುತ್ತಿರುವುದರಿಂದ ಇವರನ್ನು 'ಅಲುಗು ವೀರರು' ಎಂದು ಕರೆಯಬಹುದು. ಅಲುಗು ಎಂದರೆ ಕತ್ತಿ.

ಪಶುಪಾಲಕ ವೀರರನ್ನು ಕುರಿತು ಕರ್ನಾಟಕದಲ್ಲೇ ಅತಿಹೆಚ್ಚಿನ ಕಾವ್ಯಗಳ ಹುಟ್ಟಿಗೆ ಕಾರಣವಾದ ಚಿತ್ರದುರ್ಗದ ನೆಲ-ಜಲ-ವಾತಾವರಣಗಳ ವಿಸ್ತೃತ ಅಧ್ಯಯನ ನಡೆಯಬೇಕಿದೆ. ಇನ್ನೂ ಅಜ್ಞಾತದಲ್ಲೇ ಉಳಿದಿರುವ ನೂರಾರು ಪಶುಪಾಲಕ ವೀರರ ಕಥನಗಳನ್ನು ಸಂಗ್ರಹಿಸಿ ವ್ಯವಸ್ಥಿತವಾದ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ. ಬೇಟೆ-ಪಶುಪಾಲಕ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಈಗಾಗಲೇ ನಾನು ಕೈಗೊಂಡಿರುವ ಅಧ್ಯಯನವನ್ನು ಇನ್ನಷ್ಟು ಆಳ-ವಿಸ್ತಾರಗಳೊಂದಿಗೆ, ಹೊಸ ದೃಷ್ಟಿಕೋನಗಳಿಂದ ನೋಡಬೇಕಾದ ಅಗತ್ಯ ತುಂಬಾ ಇದೆ.

ಜನಮನಗಳಲ್ಲಿ ಅಧ್ಯಾತ್ಮ ಚೇತನಗಳಾಗಿ ಚಳ್ಳಕೆರೆ ತಾಲ್ಲೂಕಿನ ಚಲಿಮೆಸ್ವಾಮಿ, ಸಾರ್ವಡೇಶ್ವರ, ಗರೀಬ್‌ಸಾಬಿ, ನಾಯ್ಕನಹಟ್ಟಿ ತಿಪ್ಪೇಸ್ವಾಮಿ, ಕೊಳಾಳು ಕೆಂಚಾವಧೂತ, ಶ್ರೀರಾಮಪುರದ ಪರಪ್ಪಸ್ವಾಮಿ ಮುಂತಾದ ಅವಧೂತರೂ ಚೈತನ್ಯದ ಚಿಲುಮೆಗಳಾಗಿದ್ದಾರೆ. ಲಿಖಿತ ಚರಿತ್ರೆ ನಿರ್ಲಕ್ಷಿಸಿದ, ಮರೆತ ವೀರರನ್ನು ಜಾನಪದ ನಿಜಕ್ಕೂ ಜೀವಂತಗೊಳಿಸಿದೆ. ಒನಕೆ ಓಬವ್ವೆಯಂತಹ ಯಕಶ್ಚಿತ್ ಕಹಳೆಯವನ ಹೆಂಡತಿಯನ್ನು ಜನಪದ ಮರೆತಿಲ್ಲ ಎಂದರೆ ಜಾನಪದ ಪರಂಪರೆಯ ಶಕ್ತಿ ಮಹತ್ವಗಳು ಎಂಥವೆಂದು ಹೇಳಬೇಕಿಲ್ಲ, ಅಲ್ಲವೇ?

(ಚಿತ್ರದುರ್ಗ ಆಕಾಶವಾಣಿ, 2002)



# ಚಳ್ಳಕೆರೆ ತಾಲ್ಲೂಕಿನ ಸಾಂಸ್ಕೃತಿಕ ಮಹತ್ವದ ತಾಣಗಳು

ಸಾಮಾನ್ಯ ಮಾಹಿತಿ

ಚಳ್ಳಕೆರೆ-ತಾಲ್ಲೂಕು ಕೇಂದ್ರ ಜಿಲ್ಲಾ ಕೇಂದ್ರವಾದ ಚಿತ್ರದುರ್ಗಕ್ಕೆ ಪೂರ್ವ ದಿಕ್ಕಿನಲ್ಲಿ 30 ಕಿ.ಮೀ.ಗಳ ಅಂತರದಲ್ಲಿದೆ. ವ್ಯಾಸಮಂಡಲದ ಕೇಂದ್ರ ಚಳ್ಳಕೆರೆ ತಾಲ್ಲೂಕೇ ಆಗಿರುವುದರಿಂದ ಈ ಭಾಗದ ಭೌಗೋಳಿಕ ವಿವರಗಳೊಂದಿಗೆ ಸಾಂಸ್ಕೃತಿಕ ಮಹತ್ವದ ಇತರೆ ತಾಣಗಳ ಪಕ್ಷಿನೋಟ ಈ ಲೇಖನದಲ್ಲಿದೆ.

ಚಳ್ಳಕೆರೆ ತಾಲ್ಲೂಕು ಕರ್ನಾಟಕ-ಆಂಧ್ರಪ್ರದೇಶಗಳ ಗಡಿಯಲ್ಲಿದೆ. ಚಳ್ಳಕೆರೆ ತಾಲ್ಲೂಕಿನ ಉತ್ತರಕ್ಕೆ-ಜಗಲೂರು-ಕೂಡ್ಲಿಗಿ-ಮೊಳಕಾಲ್ಮುರು ತಾಲ್ಲೂಕುಗಳು, ದಕ್ಷಿಣಕ್ಕೆ-ಹಿರಿಯೂರು ತಾಲ್ಲೂಕು, ಪಶ್ಚಿಮಕ್ಕೆ-ಇತಿಹಾಸ ಪ್ರಸಿದ್ಧ ಚಿತ್ರದುರ್ಗ ತಾಲ್ಲೂಕು, ಪೂರ್ವಕ್ಕೆ-ಪಾವಗಡ ತಾಲ್ಲೂಕು ಹಾಗೂ ಆಂಧ್ರಪ್ರದೇಶಗಳಿಂದ ಸುತ್ತುವರೆದಿದೆ. ಈ ತಾಲ್ಲೂಕು 14.3' ಅಕ್ಷಾಂಶ ಮತ್ತು 76.4' ರೇಖಾಂಶಗಳ ನಡುವೆ ಹರಡಿಕೊಂಡಿದೆ.

ಈ ತಾಲ್ಲೂಕು ಸಮುದ್ರ ಮಟ್ಟದಿಂದ 1909 ಅಡಿಗಳ ಎತ್ತರದಲ್ಲಿದ್ದು, ಉಬ್ಬು-ತಗ್ಗುಗಳಿಲ್ಲದ ಸಮತಟ್ಟಾದ ನೆಲವುಳ್ಳ ಬಯಲುಸೀಮೆಯಾಗಿರುತ್ತದೆ. ಇಲ್ಲಿಯ ಹವೆಯನ್ನು ಸೆಂಟ್ರಲ್ ಒಣಹವೆ ಎಂದು ವರ್ಗೀಕರಿಸಿದರೂ, ಸಾಮಾನ್ಯವಾಗಿ ವರ್ಷದ ಎಲ್ಲಾ ದಿನಗಳೂ ಅತಿಹೆಚ್ಚಿನ ಉಷ್ಣದಿಂದ ಕೂಡಿರುತ್ತದೆ. ಬಳ್ಳಾರಿಯ ಸುಪ್ರಸಿದ್ಧ ಬಿಸಿಲು ಪ್ರಾರಂಭವಾಗುವುದು ಇಲ್ಲಿಂದಲೇ, ಹೀಗಾಗಿ ಚಳ್ಳಕೆರೆಗೆ ಬಳ್ಳಾರಿ ಬಿಸಿಲಿನ ಹೆಬ್ಬಾಗಿಲು ಎಂಬ ಹೆಸರು ಇದೆ.

ಇಲ್ಲಿ ಸುರಿಯುವ ಮಳೆಯ ಪ್ರಮಾಣ ಕೂಡ ತುಂಬಾ ಕಡಿಮೆ. ಸಾಮಾನ್ಯ ವಾಡಿಕೆಯ ಮಳೆಯ ಪ್ರಮಾಣ 455.5 ಮಿಲಿ ಮೀಟರುಗಳು, ಆದರೆ ಇದು ವಾರ್ಷಿಕ ಸರಾಸರಿ 330.0 ಮಿಲಿ ಮೀಟರನ್ನು ಮೀರುವುದಿಲ್ಲ. ಆದರೆ ಆಶ್ಚರ್ಯಕರವೆಂಬಂತೆ ಅಂತರ್‌ಜಲ ಪ್ರಮಾಣ ಮಾತ್ರ ಚೆನ್ನಾಗಿದೆ! ಮರಳು ಮಿಶ್ರಿತ ಕೆಂಪು ಮಣ್ಣಿನಿಂದ ಕೂಡಿದ ಈ ನೆಲದ ಜನಪ್ರಿಯ ಬೆಳೆ-ಸೇಂಗಾ (ಕಡಲೆಕಾಯಿ).

ಈ ತಾಲ್ಲೂಕಿನ ಏಕೈಕ ನದಿ-ವೇದಾವತಿ. ಇದು ಹಿರಿಯೂರು ತಾಲ್ಲೂಕಿನ ಶಿಡ್ಲಯ್ಯನಕೋಟೆ ಬಳಿ ತಾಲ್ಲೂಕು ಹೊಕ್ಕು ಪೂರ್ವದಂಚಿನ ಹಳ್ಳಿಗಳಗುಂಟ ಸಂಚರಿಸಿ, ರೇಣುಕಾಪುರದ ಬಳಿ ಕರ್ನಾಟಕಕ್ಕೆ ವಿದಾಯ ಹೇಳಿ ಆಂಧ್ರಪ್ರದೇಶವನ್ನು ಪ್ರವೇಶಿಸಿ ಭೈರವನತಿಪ್ಪೆ ಡ್ಯಾಂ ಸೇರುತ್ತದೆ. ಬೇಸಿಗೆಯಲ್ಲಿ ಬತ್ತುವ ಈ ನದಿಯಿಂದ ಹೆಚ್ಚಿನ ಅನುಕೂಲವನ್ನೇನು ನಿರೀಕ್ಷಿಸಲಾಗದು.

2063 ಚದರ ಕಿಲೋಮೀಟರ್‌ಗಳ ಅಗಾಧ ವ್ಯಾಪ್ತಿಯುಳ್ಳ ಈ ತಾಲ್ಲೂಕು ಕರ್ನಾಟಕದಲ್ಲೇ ಅತ್ಯಂತ ದೊಡ್ಡ ತಾಲ್ಲೂಕು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ತಾಲ್ಲೂಕಿನ ಒಂದು ತುದಿಯಿಂದ ಮತ್ತೊಂದು ತುದಿಯ ಅಂತರವೇ 60-70 ಕಿ.ಮೀ.ಗಳಷ್ಟಿದೆ.

ಇಂಥ ಭೌಗೋಳಿಕ ಹಿನ್ನೆಲೆಯ ಈ ತಾಲ್ಲೂಕಿನಲ್ಲಿ ಕಾಡು ಬರೀ ಸರ್ಕಾರಿ ದಾಖಲೆಗಳಲ್ಲಿ ಇದೆ ಅಷ್ಟೆ, ಹಾಗೇನಾದರು ಇದ್ದರೆ ಅದು ಬಳ್ಳಾರಿ ಜಾಲಿಯ ಕಾಡು ಮಾತ್ರ.

* * *

**ಗೌರಸಮುದ್ರ :** ಚಳ್ಳಕೆರೆಯಿಂದ ಈಶಾನ್ಯಕ್ಕೆ 30 ಕಿ.ಮೀ. ದೂರದಲ್ಲಿರುವ ಆಂಧ್ರಪ್ರದೇಶಕ್ಕೆ ಹೊಂದಿಕೊಂಡಿರುವ ಗಡಿ ಗ್ರಾಮ. ಇಲ್ಲಿಯ ಮಾರಿ ಉಗ್ರಸ್ವರೂಪಿ ಅಲ್ಲ. ಪ್ರಸನ್ನ ಗೌರಿ ಅದಕ್ಕೆ ಈ ಹಳ್ಳಿಗೆ ಗೌರಸಮುದ್ರ ಎಂಬ ಹೆಸರು ಬಂದಿರುವುದು. ಈಕೆಯ ಕತೆ ಗ್ರಾಮದೇವತೆಯ ಮಾಮೂಲಿ ಕತೆಗಿಂತ ಸಂಪೂರ್ಣ ಭಿನ್ನವಾಗಿದೆ.

ಈಕೆಯ ಮೂಲ ನೆಲೆ ಗೌರಸಮುದ್ರದಿಂದ 3 ಕಿ.ಮೀ. ದೂರವಿರುವ 'ತುಮ್ಮಲು' ಎಂಬಲ್ಲಿದೆ. ಈಕೆಯ ಜಾತ್ರೆ ನಡೆಯುವುದು ಇಲ್ಲೇ. ನಾಯಕನ ಹಟ್ಟಿ ಹೊರತುಪಡಿಸಿದರೆ ಸಾವಿರಾರು ಜನ ಸೇರುವ ಈ ತಾಲ್ಲೂಕಿನ ಬಹುದೊಡ್ಡ ಜಾತ್ರೆಯೆಂದರೆ ಇದೆ.

ಈಗ ತುಮ್ಮಲು ಎಂದು ಕರೆಯುವ ಜಾಗದಲ್ಲಿ ಹಿಂದೆ ಮೇಲುಸಕ್ಕರೆಯುವರು (ಉಪ್ಪಾರರು) ಗಾರೆಗಟ್ಟಿನ ಗುಂಡಿಗಳಲ್ಲಿ ಉಪ್ಪು ಉತ್ಪಾದಿಸುತ್ತಿದ್ದರು. ಒಂದು ದಿನ ಗಾರೆಗಟ್ಟಿನ ಗುಂಡಿಯಲ್ಲಿ 'ಸೆದಲು' ಕಾಣಿಸಿಕೊಂಡು ಉಪ್ಪಿನ ತಯಾರಿಗೆ ಹಾಕಿದ್ದ ಉಪ್ಪು ನೀರು ಮಾಳಿಯಲ್ಲಿ ಇಳಿದು ಹೋಯಿತು. ಸೆದಲಿನ ಭಾಗವನ್ನು ಸಂಪೂರ್ಣ ಎಬ್ಬಿಹಾಕಿ, ಗುಂಡಿ ಸರಿಮಾಡಿ, ಮತ್ತೆ ಉಪ್ಪು ನೀರು ಹಾಕಿದರೂ ಮರುದಿನ ನೋಡಿದರೆ ಸೆದಲು ಬೃಹದಾಕಾರವಾದ ಹುತ್ತವಾಗಿ ಬೆಳೆದಿತ್ತು! ಉಪ್ಪಾರರು ಹೆದರಿ 'ಹೊತ್ತಿಗೆ' ತೆಗೆಸಿದಾಗ ದೇವಿ ಒಲಿದಿರುವ ಭವಿಷ್ಯ ತಿಳಿಯಿತು. ಆಗ ಅವರು ಆ ಹುತ್ತವನ್ನೇ ಮಾರಮ್ಮನೆಂದು ಪಕ್ಕದಲ್ಲೇ ಗದ್ದಿಗೆ ಮಾಡಿ ಪೂಜಿಸತೊಡಗಿದರು. ತಾವು ಉಪ್ಪಿನ ಮಾಳೆಯನ್ನು ಉಪ್ಪು ಎಬ್ಬಲು ಬಳಸುತ್ತಿದ್ದ ಕುರ್ಪಿ ಮತ್ತು ಸನಿಕೆಯ ತಗಡನ್ನೇ ಒಂದು ಬುಟ್ಟಿಯಲ್ಲಿಟ್ಟು ಅದನ್ನೇ ದೇವರು ಮಾಡಿ ಊರಿನೊಳಗೆ ಕಾವಸೆ ಗುಡಿಯಲ್ಲಿ (ಇಂದು ಭವ್ಯಕಟ್ಟಡ ಇದೆ) ಇಟ್ಟು ಪೂಜಿಸತೊಡಗಿದರು. ಈ ವಸ್ತುಗಳನ್ನು ಇದುವರೆಗೂ ಯಾರೂ ಕಣ್ಣಾರೆ ಕಂಡಿಲ್ಲ. ಪೂಜಾರಿ ಕೂಡ ವರ್ಷಕ್ಕೊಮ್ಮೆ ಇವನ್ನು ಶುದ್ಧಿ ಮಾಡುವಾಗ ಕಣ್ಣಿಗೆ ಬಟ್ಟೆ ಕಟ್ಟಿಕೊಳ್ಳುತ್ತಾನೆ.

ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ-ಜುಂಜಪ್ಪನವರ ಬದುಕಿನಲ್ಲಿ ಈಕೆ ಒತ್ತಾಸೆಯಾಗಿ ನಿಂತು ಅವರನ್ನು ಕಾಪಾಡಿದ ವಿವರಗಳು ಜನಪದ ಕಾವ್ಯ ಪ್ರಸಂಗಗಳಲ್ಲಿ ಹಾಸುಹೊಕ್ಕಾಗಿರುವುದನ್ನು ಕಾಣಬಹುದು. ಗೌರಸಮುದ್ರ ಹಿಂದೆ ಮ್ಯಾಸಬೇಡರ ಒಂದು ಮುಖ್ಯ ನೆಲೆಯಾಗಿತ್ತು, ಹಾಗೂ ಕಟ್ಟೆಮನೆಯೂ ಆಗಿತ್ತು (ಆದರೆ ಈಗ ಇದು ಕಟ್ಟೆಮನೆಯಾಗಿ ಉಳಿದಿಲ್ಲ. ಈಗಿರುವ ಕಟ್ಟೆಮನೆಗಳೆಂದರೆ ಚಳ್ಳಕೆರೆ ತಾಲ್ಲೂಕಿನ ನಾಯಕನ ಹಟ್ಟಿ, ನನ್ನಿವಾಳ ಮತ್ತು ಚಿತ್ರದುರ್ಗ ತಾಲ್ಲೂಕಿನ ಗೋನೂರು). ಆಗ ಇದನ್ನು 'ಐವೊಜಿ ಮಠ' ಎಂದು

ಕರೆಯುತ್ತಿದ್ದರು. ಹಿಂದೆ 'ಅಮ್ಮ' (ಮಾರಮ್ಮ, ಕಾಲರಾ, ಪ್ಲೇಗು, ಸಿಡುಬಿನ ದೇವತೆಯಾಗಿರುವುದರಿಂದಲೇ 'ಸಿಡುಬು'ನ್ನು 'ಅಮ್ಮ' ಎಂದೇ ಕರೆಯಲಾಗುತ್ತದೆ.) ಎದ್ದವರನ್ನು ಉಪ್ಪಿನ ಹಾಸಿಗೆಯ ಮೇಲೆ ಮಲಗಿಸಿ ಬೇವಿನಸೊಪ್ಪಿನಿಂದ ಮುಚ್ಚುತ್ತಿದ್ದರಂತೆ. ಹೀಗೆ ಉಪ್ಪು ತಯಾರಿಸುವವರೆ ಬಹಳಷ್ಟು ಕಡೆ ಮಾರಿಯ ಪೂಜಾರಿಗಳು ಆಗಿರುವುದು ಆಕಸ್ಮಿಕವಲ್ಲ. ಈಕೆಗೆ ಬೇವಿನಮರ ಪ್ರಿಯವಾದುದರಿಂದ ಈಕೆ ಬೇವಿನ ಮರದಲ್ಲೇ ವಾಸಮಾಡುತ್ತಾಳೆ ಎಂಬ ನಂಬಿಕೆ ಇರುವುದರಿಂದ, ಬೇವಿನ ಮರಗಳನ್ನು ಸಹ 'ಮಾರಮ್ಮ'ನ ಪ್ರತಿರೂಪವೆಂದೇ ಭಾವಿಸಿ ಪೂಜಿಸಲಾಗುತ್ತದೆ. ಹೀಗಾಗಿ ಈಕೆಗೆ ಬೇವಿನಸೀರೆ, ಬಾಯಿಬೀಗದ ಸೇವೆಗಳು ಅತ್ಯಂತ ಪ್ರಿಯ.

ಈಕೆಯ ಜಾತ್ರೆ ಭಾದ್ರಪದ ಮಾಸದ ಮೊದಲ ಮಂಗಳವಾರ ನಡೆಯುತ್ತದೆ. ಸಾವಿರಾರು ಕುರಿಗಳ ಬಲಿ ನಡೆಯುತ್ತದೆ, ಆದರೆ ಜಾತ್ರೆ ಸಂಜೆಯೊಳಗೆ ಮುಗಿದುಬಿಡುತ್ತದೆ. ಸಂಜೆಯಾದನಂತರ ಒಂದು ನರಪಿಳ್ಳೆಯೂ ತುಮ್ಮಲಿನಲ್ಲಿ ಇರುವುದಿಲ್ಲ. ಇದ್ದರೆ ರಕ್ತಕಾರಿ ಸಾಯುತ್ತಾರೆ ಎಂಬ ನಂಬಿಕೆ ಇದೆ. ಹೀಗೆಯೇ ಇದನ್ನು ಪರೀಕ್ಷಿಸಿ ಪ್ರಾಣತೆತ್ತ ಬಳೆಗಾರನ ಗುಟ್ಟೆಯೊಂದನ್ನು ತುಮ್ಮಲ್ಲಿನ ಬಳಿ ತೋರಿಸುತ್ತಾರೆ. ಹೀಗಾಗಿ ಈಕೆ 'ಮಧ್ಯಾಹ್ನದ ಮಾರಮ್ಮ' ನೆಂದೇ ಪ್ರಸಿದ್ಧಿಯಾಗಿದ್ದಾಳೆ.

**ದೊಡ್ಡ ಉಳ್ಳಾರತಿ :** ಚಳ್ಳಕೆರೆಯಿಂದ ಪೂರ್ವಕ್ಕೆ 13 ಕಿ. ಮೀ. ದೂರದಲ್ಲಿದೆ.. ಇಲ್ಲಿ ಶಕ್ತಿದೇವತೆಯಾದ ಗೌರಿ ಕೃಷಿ ಸಂಸ್ಕೃತಿಯೊಂದಿಗೆ ತಳಕು ಹಾಕಿಕೊಂಡು '(ಹೆಣ್ಣು) ಮಕ್ಕಳ ಗೌರಿ' ಯಾಗಿ ಮೆರೆಯುತ್ತಿದ್ದಾಳೆ. ಈಕೆ ಹಿರಿಯೂರು ತಾಲ್ಲೂಕಿನ 'ತವಂದಿ' ಗ್ರಾಮದಿಂದ ವಲಸೆ ಬಂದವಳು. ದೇವಿಯ ಮೂಲಮೂರ್ತಿ ಗರ್ಭಗುಡಿಯ ಮಧ್ಯದಲ್ಲಿ ಇದ್ದರೆ ಉತ್ಸವಮೂರ್ತಿ ಅದರ ಎಡಪಕ್ಕದ ಮೂಲೆಯಲ್ಲಿ ಖಾಲಿ ರಾಗಿ ಕಣಜದ (ಸೇರು) ಮೇಲೆ ಇರುತ್ತದೆ. ಎರಡು ಕೈಗಳನ್ನು ಮುಂದಕ್ಕೆ ಚಾಚಿದಂತೆ ಕುಳಿತಿರುವ ಗೌರಮ್ಮನ ಮುಖ ಮಾತ್ರ ಕಾಣುತ್ತದೆ, ಮುಖದಿಂದ ಕೆಳಕ್ಕೆ ಸೀರೆ ಉಡಿಸಿರುತ್ತಾರೆ. ವರ್ಷಕ್ಕೊಮ್ಮೆ ಜಾತ್ರೆ ಕಾರ್ತಿಕ ಮಾಸದ ಮೊದಲ ಹುಣ್ಣಿಮೆಯಂದು ಬರುತ್ತದೆ, ಹೀಗಾಗಿ ಆ ಹುಣ್ಣಿಮೆಯನ್ನು 'ಗೌರಿ ಹುಣ್ಣಿಮೆ' ಎಂದು ಕರೆಯುತ್ತಾರೆ.

ಇಡೀ ಜಾತ್ರೆ ಹೆಣ್ಣು ಗಂಡನ ಮನೆಯಿಂದ ತವರು ಮನೆಗೆ ಬಂದು ಮತ್ತೆ ಹಿಂತಿರುಗುವ ಪ್ರಕ್ರಿಯೆಯ ಸುತ್ತ ನಡೆಯುತ್ತದೆ. ಹೆಣ್ಣಿನ ಜೀವಮಾನದ ಘಟನೆಗಳನ್ನು ಪುನರಭಿನಯಿಸಿದಂತೆ ನಡೆಯುವ ಈ ಪ್ರಕ್ರಿಯೆ ತುಂಬಾ ಕುತೂಹಲಕಾರಿಯಾದುದು.

ಮೈಲಾರಲಿಂಗನ ಮನೆಯಿಂದ ಗೌರಿಯನ್ನು ತವರಿಗೆ ಕರೆತರಲು ಹೋಗುವ ಹಳ್ಳಿಯ ಜನ ಇಡೀ ವರ್ಷದುದ್ದಕ್ಕೂ ಖಾಲಿ ರಾಗಿ ಕಣಜದ ಮೇಲೆ ಕುಂತಿದ್ದ ಉತ್ಸವ ಮೂರ್ತಿಯನ್ನು ಇಳಿಸಿ ಆನೆ ಮಂಟಪದ ಮೇಲೆ ಇರುವ ಕಲಶದ ಮೇಲೆ ಪ್ರತಿಷ್ಠಾಪಿಸುತ್ತಾರೆ. ನಂತರ ಖಾಲಿ ಕಣಜವನ್ನು ರಾಗಿಯಿಂದ ತುಂಬುತ್ತಾರೆ. (ಗೌರಮ್ಮ ತವರಿಗೆ ಬಂದು ಗಂಡನ ಮನೆಗೆ ಹಿಂತಿರುಗಿದ ನಂತರ ಕಣಜದಲ್ಲಿರುವ ರಾಗಿಯನ್ನು ಖಾಲಿ ಮಾಡುತ್ತಾರೆ, ಮತ್ತೆ ಕಣಜಕ್ಕೆ ರಾಗಿ ತುಂಬುವುದು ಮುಂದಿನ ವರ್ಷದ ಉತ್ಸವದ ದಿನವೇ.)

ಗಂಡ ಮೈಲಾರಲಿಂಗನ ಮನೆಗೆ ಹೋಗುವಾಗ ಉತ್ಸವಮೂರ್ತಿ ಗೌರಮ್ಮನ 'ತೋಳು ಕೈ' (ಇವು ತೆಗೆದು ಮತ್ತೆ ಜೋಡಿಸುವಂತೆ ಇರುತ್ತವೆ) ತೆಗೆದುಕೊಂಡು ಹೋಗುತ್ತಾರೆ. ಈ ತೋಳು ಕೈಗಳ ಟೊಳ್ಳಿನಲ್ಲಿ ರಾಗಿ ತುಂಬಿರುತ್ತಾರೆ.

ಗೌರಿಯನ್ನು ಮೈಲಾರಲಿಂಗನ ಗುಡಿಯಲ್ಲಿ, ಸುತ್ತ ತೆರೆ ಕಟ್ಟಿ-ನಗ್ನಸ್ಥಿತಿಯಲ್ಲಿರುವ ಆಚಾರಿ (ಅಕ್ಕಸಾಲಿಗ) ಗೋಧಿ, ಅರಿಶಿನ, ಮರಳು, ಮೇಣಗಳನ್ನು ಹಾಲಿನಲ್ಲಿ ನೆನೆಸಿ, ಕೈಗಳನ್ನು ಬೆನ್ನಹಿಂದೆ ಚಾಚಿ ಕಣ್ಣಿನಿಂದ ನೋಡದೆಯೇ ಸುಂದರ ಮೂರ್ತಿಯನ್ನು ನಿರ್ಮಿಸುತ್ತಾನೆ! ಇದನ್ನು ತವರಿಗೆಂದು ಕರೆಯಲು ಬಂದ ಊರಿನವರಿಗೆ ಒಪ್ಪಿಸಲಾಗುತ್ತದೆ. ವಿಜೃಂಭಣೆಯಿಂದ ಆಕೆಯನ್ನು ತವರಿಗೆ ಕರೆತರುವಾಗ ಹರಕೆಮಾಡಿಕೊಂಡ ಹೆಣ್ಣು ಮಕ್ಕಳು ದೇವಿಗೆ ಉರುಳು ಸೇವೆ, ಆರತಿ ಸೇವೆ ಮಾಡುತ್ತಾರೆ. ಹೀಗಾಗಿಯೇ ಈ 'ಉರುಳು', 'ಆರತಿ' ಸೇರಿ ಉರುಳಾರತಿ › ಉಳ್ಳಾರತಿ › ಉಳ್ಳಾರ್ತಿ ಎಂದು ಈ ಗ್ರಾಮ ನಾಮ ರೂಪುಗೊಂಡಿರಬೇಕು. ತವರಿನಲ್ಲಿ ಒಂದು ದಿನ ಇದ್ದು ಗೌರಮ್ಮ ಗಂಡನ ಮನೆಗೆ ಹೊರಡುತ್ತಾಳೆ. ಈಕೆಯ ಪ್ರತಿಮೆಯನ್ನು ನೀರಿನಲ್ಲಿ ವಿಸರ್ಜಿಸುವುದರೊಂದಿಗೆ ಹಬ್ಬ ಒಂದು ಹಂತದಲ್ಲಿ ಮುಗಿಯುತ್ತದೆ. ನಂತರ ಪುಟ್ಟ ಪುಟ್ಟ ಹುಡುಗಿಯರು ಸೀರೆ ಉಟ್ಟು 'ಗೌರಮ್ಮನ ಮಕ್ಕಳು' ಆಗಿ, ಊರಿಗೆ ಬಂದ ಹೊಸಬರಿಂದ 'ಕೋಲು ಕೋಲನ್ನ' ಪದ ಹಾಡುತ್ತಾ ಹಣ ವಸೂಲು ಮಾಡುತ್ತಾರೆ. ಪುರುಷರು ಗೌರಿ ಹುಡುಗಿಯರನ್ನು ಅಶ್ಲೀಲವಾಗಿ ಕೀಟಲೆ ಮಾಡುವುದುಂಟು. ಗೌರಿ ಹೆಂಗಳೆಯರ ನಡುವೆ ಸಂಭ್ರಮಿಸುವ ಈ ಬಗೆಯ ಜನಪದ ಸಂಪ್ರದಾಯದ ಹಬ್ಬ ಈ ಜಿಲ್ಲೆಗೆ ವಿಶಿಷ್ಟವಾದುದು.

**ತಳಕು :** ಚಳ್ಳಕೆರೆಯಿಂದ ಉತ್ತರಕ್ಕೆ 10 ಕಿ.ಮೀ. ದೂರದಲ್ಲಿದೆ. ತಳಕು ಗ್ರಾಮದ ಹಿಂಭಾಗಕ್ಕೆ ಒಂದು ಗುಡ್ಡ ಕಾಣುತ್ತದೆ. ಇದನ್ನು ಎತ್ತಪ್ಪನ ಗುಡ್ಡ ಎನ್ನುತ್ತಾರೆ. ತಳಕಿನಿಂದ 3-4 ಕಿ.ಮೀ. ನಡೆದು ಹೋಗಬೇಕು.

ಈ ಬೆಟ್ಟದ ತುದಿಯಲ್ಲಿ ಕಾಡುಗೊಲ್ಲರ ಸಾಂಸ್ಕೃತಿಕ ವೀರನಾದ ಎತ್ತಪ್ಪನ ಸಮಾಧಿ ಇದೆ. ಪಶುಪಾಲಕನಾದ ಈತ ತನ್ನ ಶೀಲ-ಶೌಚಗಳಿಗೆ ಹೆಸರಾದವನು. ಗುಡ್ಡದ ಬೋರಿ ಎಂಬ ಬೇಡರ ಹೆಣ್ಣಿನ ಪ್ರೇಮವನ್ನು ತಿರಸ್ಕರಿಸಿದ್ದೇ ಕಾರಣವಾಗಿ ಬೇಡರು ಅವನ ತಲೆ ತೆಗೆಯುತ್ತಾರೆ. ಹೀಗಾಗಿ ಕುರಿ ಆಳಿದ ಕಾಡುಗೊಲ್ಲರು ಮುಂಗಾರಿ ಮಳೆಯ ನಂತರ ತಮ್ಮ ನೆಚ್ಚಿನ ವೀರನಿಗೆ ಗೌರವ ಸಲ್ಲಿಸಲು, ಪ್ರತಿ ವರ್ಷ ಹಾಲುಗ್ಗಿ ತಂದು ಎಡೆ ಹಾಕಿ, ಮೀಸಲು ಹಾಲನ್ನು ಎತ್ತಪ್ಪನ ಸಮಾಧಿಗೆ ಅಭಿಷೇಕ ಮಾಡುವ ಜನಪದ ಸಂಪ್ರದಾಯ ಇದೆ. ಬೆಟ್ಟದ ಮೇಲೆ ಒಂದು ದೋಣೆಯೂ ಇದೆ.

**ಮತ್ಸಮುದ್ರ :** ಚೆನ್ನಮ್ಮ ನಾಗತಿಹಳ್ಳಿಗೆ ಕೇವಲ 1 ಕಿ.ಮೀ. (ಚಳ್ಳಕೆರೆಗೆ ಸುಮಾರು 20 ಕಿ.ಮೀ.) ದೂರದಲ್ಲಿ ಇದೆ. ವ್ಯಾಸರಾಯರು ಪ್ರತಿಷ್ಠಾಪಿಸಿದ್ದಾರೆ ಎಂದು ಹೇಳುವ ಆಳೆತ್ತರದ ಆಂಜನೇಯನ ವಿಗ್ರಹವಿದೆ. ಕಾರ್ತೀಕ ಮಾಸದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಉಟ್ಲುಮರ ಎಂಬ ರೋಮಾಂಚಕಾರಿ ಕ್ರೀಡೆಯೂ ನಡೆಯುತ್ತದೆ. ವೃತ್ತಾಕಾರವಾದ ಕೆಸರ ಪಾತಿಯಲ್ಲಿ ಸುಮಾರು 20 ಅಡಿ ಎತ್ತರದ ಕಂಬ ನಿಲ್ಲಿಸಿ, ಅದಕ್ಕೆ ಲೋಳೆಸರ, ಕೆಸರು ಬಳಿದು ಜಾರುವಂತೆ ಮಾಡಿರುತ್ತಾರೆ. ಜಾರುವ ಕಂಭವನ್ನು ಹತ್ತುವ, ಇನ್ನೇನು ಕಂಬದ

ತುದಿ ಮುಟ್ಟೇ ಬಿಟ್ಟವಿ ಎನ್ನುವ ಹಂತದಲ್ಲಿ ಅಲ್ಲಿಂದ ಜರ್ರನೆ ಜಾರಿ ಬಿಡುವ ಕ್ರೀಡೆ ರೋಮಾಂಚನಕಾರಿಯಾಗಿರುತ್ತದೆ. ಇದು ಫಲಸಂಪ್ಪದ್ಧಿಯ ಆಚರಣೆಯನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡಂತಿದೆ.

**ಚಿಲುಮೆ ಸ್ವಾಮಿ :** ಮತ್ತಸಮುದ್ರ ಗ್ರಾಮದಿಂದ ಕೇವಲ 3 ಕಿ. ಮೀ. ದೂರವಿರುವ (ಚಳ್ಳಕೆರೆಯಿಂದ ಸುಮಾರು 20 ಕಿ.ಮೀ.) ಜಾಜೂರು ಸಮೀಪವಿರುವ ಆರವಿಗೊಂಡನಹಳ್ಳಿಗೆ ಹೋಗುವ ಹಾದಿಯಲ್ಲಿದೆ.

ಇಲ್ಲಿ ಚಿಲುಮೆಸ್ವಾಮಿಯವರ ಗದ್ದುಗೆ ಇದೆ. ಇದನ್ನು ಸಮಾಧಿ ಎಂದೂ ಹೇಳುತ್ತಾರೆ. ಪಕ್ಕದಲ್ಲೇ ವೇದಾವತಿ ನದಿ ಹರಿಯುತ್ತದೆ. ಒಮ್ಮೆ ಚಿಲುಮೆ ತೋಡುತ್ತಿದ್ದಾಗ ಇವರು ಸಿಕ್ಕಿದ್ದರಿಂದ ಇವರಿಗೆ ಚಿಲುಮೆಸ್ವಾಮಿ ಎಂಬ ಹೆಸರು ಬಂತು ಎಂದು ದಂತಕತೆ ಇದೆ. ಒಂದು ಕಾಲಕ್ಕೆ ಸುತ್ತಿನ ಹಳ್ಳಿಗಳಿಂದ ದೂರವಾಗಿ ಹೊರವಲಯದಲ್ಲಿ ಪ್ರಶಾಂತ ಪರಿಸರದಲ್ಲಿ ಇದ್ದ ಗದ್ದುಗೆ ಈಗ ಸುತ್ತ ರಾಕ್ಷಸಾಕಾರವಾಗಿ ಬೆಳೆದಿರುವ ಸೀಮೆ(ಬಳ್ಳಾರಿ)ಜಾಲಿ ಆವೃತಗೊಂಡು ಗೊಂಡಾರಣ್ಯದಂತೆ ಕಾಣುತ್ತದೆ.

ಇಲ್ಲಿ ಅನಿಯಮಿತವಾಗಿ ದನಗಳ ಜಾತ್ರೆ ಕೂಡ ನಡೆಯುತ್ತದೆ.

**ಗರೀಬ್‌ಸಾಬಿ ಮಠ :** ಚಳ್ಳಕೆರೆಯಿಂದ ಪೂರ್ವಕ್ಕೆ ಉಪ್ಪಾರಹಟ್ಟಿಯ ಬಳಿ 6 ಕಿ.ಮೀ. ದೂರದಲ್ಲಿದೆ. ಇದರ ಹೆಸರಿನಲ್ಲಿ ಮಠ ಇದ್ದರೂ ಅಲ್ಲಿ ಯಾವ ಮಠವೂ ಇಲ್ಲ. ಹೆಸರೇ ಹೇಳುವಂತೆ ಸೂಫಿ ಸಂತನೊಬ್ಬನ ಸಮಾಧಿ ಇದು. ಈತನ ಬಗ್ಗೆ ಹೆಚ್ಚಿನ ಮಾಹಿತಿಯೇನೂ ದೊರೆಯದು. ಆದರೇ ಜಾತ್ಯಾತೀತವಾಗಿ ಹಿಂದೂಗಳೆಲ್ಲರೂ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ವರ್ಷಕ್ಕೊಮ್ಮೆ ಬಹುಶಃ ಜನವರಿ ತಿಂಗಳಲ್ಲಿ ಇಲ್ಲಿ ಉರುಸ್ ನಡೆಯುತ್ತದೆ.

**ದೊಡ್ಡೇರಿ :** ಚಳ್ಳಕೆರೆಯಿಂದ ಪೂರ್ವಕ್ಕೆ 7 ಕಿ.ಮೀ. ದೂರದಲ್ಲಿದೆ. ಇದು ಒಂದು ಕಾಲದಲ್ಲಿ ಚಿತ್ರದುರ್ಗ ಪಾಳೆಯಗಾರ ಅರಸರ ಗಡಿಠಾಣೆಯಾಗಿತ್ತು. ಚಿತ್ರದುರ್ಗ ಕೊನೆಯ ದೊರೆ ರಾಜಾವೀರ ಮದಕರಿ ನಾಯಕ (ಕ್ರಿ.ಶ. 1754-1779) ರಿಗೆ ವಾವೆಯಲ್ಲಿ ಅಣ್ಣನೂ, ಚಿತ್ರದುರ್ಗ ಸಿಂಹಾಸನಕ್ಕೆ ನಿಜವಾದ ವಾರಸುದಾರನಾಗಿದ್ದೂ ವಿಧಿವಂಚಿತನಾದ ದೊಡ್ಡಮದಕರಿ ನಾಯಕರ ತಂದೆ ಕಾಟಪ್ಪನಾಯಕರು ಇಲ್ಲಿಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಹೀಗಾಗಿ ಇಲ್ಲಿಯೇ ಆಡಿ ಬೆಳೆದ ದೊಡ್ಡಮದರಿನಾಯಕನಿಗೆ 'ದೊಡ್ಡೇರಿ ಮದರಿನಾಯಕ' ಎಂಬ ಹೆಸರೂ ಇದೆ. ಇವರ ಸಮಾಧಿ ದೊಡ್ಡೇರಿಯಲ್ಲೇ ಇತ್ತು ಎಂದು ಇಲ್ಲಿಯವರೆಗೂ ತಿಳಿಯಲಾಗಿತ್ತು, ಆದರೆ ಅದು ಚಳ್ಳಕೆರೆಯಲ್ಲಿ ಎಂದು ಇತ್ತೀಚಿಗೆ ಸಾಬೀತಾಗಿದೆ.

ದೊಡ್ಡೇರಿ ಕ್ರಿ.ಶ. 1882 ರವರೆಗೂ ತಾಲ್ಲೂಕು ಕೇಂದ್ರವಾಗಿತ್ತು. (ನಂತರ ಇದು ಚಳ್ಳಕೆರೆಗೆ ವರ್ಗಾವಣೆಗೊಂಡಿತು.) ಇಲ್ಲಿ ತಯಾರಿಸುತ್ತಿದ್ದ ಕಾಗದದ ನಿರ್ದಿಷ್ಟ ಆಕಾರ 'ದೊಡ್ಡೇರಿ ಗಜ' ಎಂದೇ ಹೆಸರಾಗಿತ್ತು.

ದೊಡ್ಡೇರಿ ಪ್ರಾಮುಖ್ಯತೆ ಪಡೆದ ಒಂದು ಪ್ರಾಚೀನ ಗ್ರಾಮ ಎಂಬುದನ್ನು ಅಲ್ಲಿ ದೊರೆಯುವ ಅವಶೇಷಗಳು ಹೇಳುತ್ತವೆ. ಮುರಿದುಬಿದ್ದ ಮಂಟಪಗಳು ಮತ್ತು ಅನಾಥವಾಗಿ

ಬಿದ್ದಿರುವ ವೀರಗಲ್ಲುಗಳನ್ನು ದೊಡ್ಡೇರಿ ದೊಡ್ಡ ಕೆರೆ ಮುಂಭಾಗದ ಪಾಳುಗಳಲ್ಲಿ ಈಗಲೂ ನೋಡಬಹುದು. ಅಲ್ಲದೆ ಈಗಿನ ಊರಿನ ಮಧ್ಯೆಯೂ ಕುಸಿದು ಬಿದ್ದು ಮಣ್ಣಲ್ಲಿ ಮುಚ್ಚಿಹೋದ ಪ್ರಾಚೀನ ದೇಗುಲದ ಭಗ್ನಾವಶೇಷಗಳನ್ನು ಕಾಣಬಹುದು.

ದೊಡ್ಡೇರಿಯ ಗೊಲ್ಲರಹಟ್ಟಿಗೆ ಹೊಂದಿಕೊಂಡಿರುವ ಜಮೀನಿನಲ್ಲಿ ಕನ್ನೇಶ್ವರ ಎಂದು ಕರೆಯುವ ಅತ್ಯಂತ ಪ್ರಾಚೀನವಾದ ಲಿಂಗವನ್ನು ನೋಡಬಹುದು. ಕನಿಷ್ಠ ಇದು 5ನೇ ಶತಮಾನಕ್ಕಿಂತಲೂ ಹಿಂದಿನ ಕಾಲಕ್ಕೆ ಸೇರಿದ್ದು ಎಂಬುದು ಸುಪ್ರಸಿದ್ಧ ಸಂಶೋಧಕರಾದ ಪ್ರೊ॥ ಬಿ. ರಾಜಶೇಖರಪ್ಪನವರ ಅಭಿಪ್ರಾಯ. ಮಲ್ಲಣ್ಣ ಎಂಬ ಅವಧೂತರು ಈ ಸ್ಥಳವನ್ನು ಅಭಿವೃದ್ಧಿಪಡಿಸಿ ಒಂದು ಪುಣ್ಯ ಕ್ಷೇತ್ರವನ್ನಾಗಿ ಮಾಡಿದ್ದಾರೆ.

ದೊಡ್ಡೇರಿ ಕುರುಬರ ಒಂದು ಸಾಂಸ್ಕೃತಿಕ ಕೇಂದ್ರವೂ ಆಗಿದ್ದು ಇಲ್ಲಿ ರೇವಣ್ಣ ಸಿದ್ದೇಶ್ವರನ ಮಠ ಇದೆ.

**ಗೋಸಿಕೆರೆ :** ಚಳ್ಳಕೆರೆಯಿಂದ ಪೂರ್ವಕ್ಕೆ ಸುಮಾರು 40 ಕಿ.ಮೀ. ದೂರದಲ್ಲಿದೆ. ಪರಶುರಾಮಪುರ ಸಮೀಪದ ತಿಮ್ಮಣ್ಣನಾಯಕನ ಕೋಟೆಯಿಂದ 3 ಕಿ.ಮೀ. ನಡೆದೇ ಹೋಗಬೇಕು.

ಗಂಗಾನದಿಯನ್ನು ದಾಟಿ ದಿಲ್ಲಿಯಿಂದ ಬಂದವರೆಂದು ಹೇಳಿಕೊಳ್ಳುವ ಮ್ಯಾಸಬೇಡ, ಕಾಡುಗೊಲ್ಲ, ಕುಂಚಿಟಿ ಒಕ್ಕಲಿಗರ ವಲಸೆಯ ನೇತೃತ್ವವನ್ನು ವಹಿಸಿದ್ದ ಶ್ರೀಗುರು ಸಾರ್ವಡೇಶ್ವರ ಸ್ವಾಮಿಗಳ ಜೀವ ಸಮಾಧಿ ಇಲ್ಲಿದೆ. ಅವರ ಸಮಾಧಿಯ ಮೇಲೆ ಅತ್ಯಂತ ಕಲಾತ್ಮಕವೂ, ಅಪರೂಪವೂ ಆದ ಶಿವಲಿಂಗವನ್ನು ಸ್ಥಾಪಿಸಲಾಗಿದೆ. ಸುಮಾರು ಎರಡೂವರೆ ಅಡಿ ಚಚ್ಚೌಕದ ಪಾಣಿಪೀಠದ ಮೇಲಿನ ವೃತ್ತಾಕಾರದ ಲಿಂಗದ ಮುಖಭಾಗದಲ್ಲಿ - ತಪೋನಿರತ ಯೋಗಿಯ ಕಪ್ಪು ಕಲ್ಲಿನಲ್ಲಿ ಶಿವಷಟ್‌ಚಕ್ರ ಭಂಗಿಗಳನ್ನು ಕೆತ್ತಿರುವ ಅಪೂರ್ವ ಶಿಲಾಪಟ್ಟಿಕೆ ಇದೆ. ನಾಲ್ಕು ಇಂಚು ಉದ್ದ ಅಗಲದ ಪದ್ಮಾಸನದಲ್ಲಿ ಕುಳಿತಿರುವ ಶಿವಯೋಗಿಯ ಒಂದೊಂದು ಭಂಗಿಯ ಕೆತ್ತನೆಯಲ್ಲೂ ಕಲಾವಿದನ ಕೈಚಳಕ ಎದ್ದು ಕಾಣುತ್ತದೆ. ಬಹುಶಃ ಈ ಬಗೆಯ ಲಿಂಗ ಇಡೀ ಭಾರತದಲ್ಲೇ ಅಪರೂಪದ್ದು ಇರಬಹುದು ಅನಿಸುತ್ತದೆ.

**ದೊಡ್ಡಬೀರನಹಳ್ಳಿ :** ತಿಮ್ಮಣ್ಣನಾಯಕನ ಕೋಟೆ (ಟಿ.ಎನ್.ಕೋಟೆ)ಗೆ ಕೇವಲ 2 ಕಿ.ಮೀ. ಸಮೀಪದಲ್ಲೇ ಇರುವ ಹಳ್ಳಿ. ಶ್ರೀಗುರುಸಾರ್ವಡೇಶ್ವರಸ್ವಾಮಿಯ ಶಿಷ್ಯೆಯಾದ ತಾಯಿ ಮದ್ದಮ್ಮನ ನೆಲೆ ಇದು. (ಈಕೆಯ ಮೂಲನೆಲೆ ಪಾವಗಡ ತಾಲ್ಲೂಕಿನಲ್ಲಿರುವ ಅರಸೀಕೆರೆಯಲ್ಲಿದೆ.) ಇಲ್ಲಿ ಈಕೆ 'ತಾಳಿಬೊಟ್ಟು' ರೂಪದಲ್ಲಿ ಪೂಜೆಗೊಳ್ಳುತ್ತಿದ್ದಾಳೆ. ಕುಂಚಿಟಿ ಒಕ್ಕಲಿಗರ ಆರಾಧ್ಯ ದೇವತೆಯಾದ ಈಕೆಯ ಉತ್ಸವ ಕಾರ್ತೀಕ ಮಾಸದಲ್ಲಿ ನಡೆಯುತ್ತದೆ.

**ಪರಶುರಾಮಪುರ :** ಚಳ್ಳಕೆರೆಯಿಂದ ಪೂರ್ವಕ್ಕೆ 30 ಕಿ.ಮೀ ದೂರದಲ್ಲಿರುವ ಆಂಧ್ರದ ಗಡಿಯಲ್ಲಿರುವ ಹೋಬಳಿ ಕೇಂದ್ರ. ದಕ್ಷಿಣಕ್ಕೆ ಊರ ಹೊರವಲಯದ ಕೆರೆಯ ಕೆಳಗೆ ಚನ್ನಕೇಶವನ ದೇವಸ್ಥಾನವಿದೆ. ದೇವಸ್ಥಾನದ ಎದುರಿಗೆ ಶ್ರೀವೈಷ್ಣವ ಪಂಥದ ಮುದ್ರೆಯನ್ನು

ಸಾಂಕೇತಿಕವಾಗಿ ಸೂಚಿಸುವಂತಿರುವ ಮೂರು ಗರುಡ ಸ್ತಂಭಗಳಿವೆ. ಅವುಗಳ ಅಕ್ಕ-ಪಕ್ಕದಲ್ಲಿ ಆಳೆತ್ತರದ ನಿಲುವು ಬಂಡೆಗಳಲ್ಲಿ-ಭಕ್ತಿಯಿಂದ ಕೈಮುಗಿದ ಗರುಡ ಮತ್ತು ಅದರ ಎದುರಿಗೆ ಇರುವ ಮತ್ತೊಂದು ಬಂಡೆಯಲ್ಲಿ ಹನುಮಂತನ ರೇಖಾ ಚಿತ್ರ ಬಿಡಿಸಿ ಬಣ್ಣಗಳಿಂದ ತುಂಬಿದ್ದಾರೆ, ರೇಖಾಚಿತ್ರಗಳು ಜೀವತಳೆದು ಎದ್ದು ಬರುವಷ್ಟು ಸುಂದರವಾಗಿದೆ.

ದೇವಸ್ಥಾನದ ಕಟ್ಟಡ ಸಾಧಾರಣ ಗೋಡೆಯಿಂದ ಕೂಡಿದೆ. ಆದರೆ ಗರ್ಭಗುಡಿಯಲ್ಲಿರುವ ಚೆನ್ನಕೇಶವ ವಿಗ್ರಹ, ಪಕ್ಕದ ಇನ್ನೊಂದು ಗರ್ಭಗುಡಿಯಲ್ಲಿರುವ ಲಕ್ಷ್ಮಿಯ ವಿಗ್ರಹ, ನವರಂಗದ ಪಕ್ಕದ ಗೋಡೆಯ ಬಳಿ ಪ್ರತಿಷ್ಠಾಪಿಸಲಾಗಿರುವ ಆಳ್ವಾರರ ವಿಗ್ರಹ-ಬೇಲೂರು ಶಿಲ್ಪಕಲೆಯ ನಯಗಾರಿಕೆ-ಕಲಾತ್ಮಕತೆಗಳನ್ನು ನೆನಪಿಗೆ ತರುತ್ತವೆ.

* * *

ಪರಶುರಾಮಪುರ ಗ್ರಾಮದಿಂದ ಉತ್ತರಕ್ಕೆ 2 ಕಿ.ಮೀ. ನಡೆದರೆ ವೇದಾವತಿ ನದಿ ದಡದ ಬಳಿ ಹಾಳು ಬಿದ್ದ ಕೋಟೆಕೆರೆಯ ಬಳಿ ಹುಪ್ಪಯ್ಯನ ಮಠ ಸಿಗುತ್ತದೆ. ಮನೋಹರವಾದ ಶಿಲ್ಪಕಲೆಯಿಂದ ಕೂಡಿದ ಇದು ಶಾಕ್ತಸಂಪ್ರದಾಯಕ್ಕೆ ಸೇರಿದ ಮಠ ಇರಬಹುದು.

ಮಠದ ಹೊರಗಡೆ ಅರ್ಧ ಹಾಳು ಬಿದ್ದ ಸುಂದರ ಹಜಾರ, ಒಳಗಡೆ ತೊಟ್ಟಿಯಾಕಾರದ ರಚನೆಯನ್ನು ಕಾಣಬಹುದು. ಗರ್ಭಗುಡಿಯಲ್ಲಿ ಯಾವ ಮೂರ್ತಿಯೂ ಇಲ್ಲ. ಅತ್ಯಂತ ಕಠಿಣವಾದ ಗ್ರಾನೈಟ್ ಶಿಲೆಯನ್ನು ಕಟ್ಟಡಕ್ಕೆ ಬಳಸಲಾಗಿದೆ. ಇಲ್ಲಿಯ ಶಿಲ್ಪ ಸೌಂದರ್ಯವೆಲ್ಲಾ ಒಡಮೂಡಿರುವುದು ಕಂಬಗಳಲ್ಲಿ, ಮೊಗ್ಗಿನಾಕಾರದ ಕಂಬದ ಬೋದಿಗೆಗಳಲ್ಲಿ ಅವುಗಳ ಕೆಳ ನಾಲ್ಕು ಮಗ್ಗಲುಗಳಲ್ಲಿ ಗಿಣಿ, ಸೊಂಡಿಲು ಎತ್ತಿದ ಆನೆ, ನರಸಿಂಹ, ಮದ್ದಲೆ ಬಾರಿಸುತ್ತಾ ಮೈಮರೆತ ಹೆಣ್ಣು, ಯೋಗ ಭಂಗಿಯಲ್ಲಿ ಕುಳಿತ ಭೈರಾಗಿ, ಕುದುರೆ-ಆನೆ ಸವಾರಿ ಮಾಡುತ್ತಿರುವ ವೀರರು, ಕರುವಿಗೆ ಹಾಲು ಕುಡಿಸುವ ಹಸು, ಶಿವಲಿಂಗದ ಮೇಲೆ ಹಾಲು ಸುರಿಸುತ್ತಿರುವ ಹಸು, ನಂದೀರೂಢರಾದ ಶಿವ-ಪಾರ್ವತಿ, ಗಣಪ, ಷಣ್ಮುಖ ಹೀಗೆ ವೈವಿಧ್ಯಮಯವಾದ ಅನೇಕ ಸ್ವಾರಸ್ಯಕರ ಚಿತ್ರಗಳನ್ನು ನೋಡಬಹುದು.

ಚಳ್ಳಕೆರೆ : ಇಲ್ಲಿ ನೋಡಬಹುದಾದ ಸ್ಥಳಗಳೆಂದರೆ-ಬಳ್ಳಾರಿ ರಸ್ತೆಯಲ್ಲಿರುವ ವೀರಭದ್ರಸ್ವಾಮಿ ಗುಡಿ, ಗ್ರಾಮದೇವತೆ, ಚಳಕೇರಮ್ಮನ ಗುಡಿ, ರಾಮಮಂದಿರ.

ವೀರಭದ್ರಸ್ವಾಮಿ ಗುಡಿಯನ್ನು ಕಟ್ಟಿಸಿದವನು ಒಬ್ಬ ಮುಸ್ಲಿಂ! ಕ್ರಿ.ಶ. 1882ರಲ್ಲಿ ತಾಲ್ಲೂಕು ಕೇಂದ್ರ ದೊಡ್ಡೇರಿಯಿಂದ ಚಳ್ಳಕೆರೆಗೆ ವರ್ಗಾವಣೆಗೊಂಡಿತು. ಆಗ ತಹಸೀಲ್ದಾರ್ ಮನೆ ಈಗಿನ ವೀರಭದ್ರಸ್ವಾಮಿ ಗುಡಿಯ ಬಳಿಯೇ ಇತ್ತು. ದೇವಸ್ಥಾನದಲ್ಲಿ ರಾತ್ರಿ ಬಡಿಯುತ್ತಿದ್ದ ಕರಡಿ ವಾದ್ಯದ ಸದ್ದಿನಿಂದ ಬೇಸತ್ತ ಮುಸ್ಲಿಂ ಅಮಲ್ದಾರ್ ಮೆಟ್ಟುಗಾಲಲ್ಲಿ ದೇವಸ್ಥಾನ ಹೊಕ್ಕು ಇನ್ನು ಬಡಿಯ ಕೂಡದೆಂದು ತಾಕೀತು ಮಾಡಿದ. ಮರುದಿನವೇ ಇವನಿಗೆ ವಾಂತಿ-ಭೇದಿ ಶುರುವಾಗಿ ಹೆದರಿ, ಗುಡಿಸಲು ಗುಡಿಯನ್ನು ತೆಗೆಸಿ ದೇವಸ್ಥಾನ ಕಟ್ಟಿಸುವುದಾಗಿ ಹರಕೆ ಮಾಡಿಕೊಂಡ. ಹೀಗಾಗಿ ಕ್ರಿ.ಶ. 1906ರಲ್ಲಿ ದೇವಸ್ಥಾನ ನಿರ್ಮಾಣವಾಯಿತು.

ಪ್ರತಿ ವರ್ಷ ವೈಶಾಖ ಶುದ್ಧದಲ್ಲಿ (ಮೇ ತಿಂಗಳಿನಲ್ಲಿ) ಭಾರಿ ದನಗಳ ಜಾತ್ರೆ ನಡೆಯುತ್ತದೆ.

* * *

ಗ್ರಾಮ ದೇವತೆ ಚಳಕೇರಮ್ಮನ ಗುಡಿ ಬಹಶಃ ಕ್ರಿ.ಶ. 1810 ರಲ್ಲಿ ನಿರ್ಮಾಣವಾಗಿರಬಹುದು. ಚಿತ್ರದುರ್ಗ ಪಾಳೆಯಪಟ್ಟು ಹಾಳಾದ ನಂತರ ಆಳಿದುಳಿದ ಕೊನೆಯ ವಂಶಸ್ಥ ದೊಡ್ಡಮದಕರಿ ನಾಯಕ (ಕ್ರಿ.ಶ. ಸುಮಾರು 1742-1825) ಚಳ್ಳಕೆರೆಯಲ್ಲಿ ಬಂದು ನೆಲೆಸಿದಾಗ ತಮ್ಮ ಮನೆದೇವತೆಯಾದ ಉತ್ಸವಾಂಬೆಯನ್ನು ತಂದು, ಈಗಾಗಲೇ ಅಲ್ಲಿ ಇದ್ದಿರಬಹುದಾದ ಶಕ್ತಿ ಪೀಠವನ್ನೇ ವಿಸ್ತರಿಸಿ, ದೇವಸ್ಥಾನವನ್ನು ಹಿಗ್ಗಲಿಸಿ ಸ್ಥಾಪಿಸಿದಂತೆ ಕಾಣುತ್ತದೆ. ಹೀಗಾಗಿ ಗ್ರಾಮ ದೇವತೆಯ ಹಬ್ಬದಲ್ಲಿ ವಿಧವೆಯಾದ ತಾಯಿಗೆ 'ತಾಳಿ ಭಾಗ್ಯ' ಕೊಡುವ ಸಂಪ್ರದಾಯವನ್ನು ಈಗಲೂ ಇಲ್ಲಿರುವ ಚಿತ್ರದುರ್ಗದ ಪಾಳೆಯಗಾರ ವಂಶಸ್ಥರೇ ನಿರ್ವಹಿಸಿಕೊಂಡು ಬರುತ್ತಿದ್ದಾರೆ.

ಗರ್ಭಗುಡಿಯಲ್ಲಿ ಒಂದು ಸ್ತ್ರೀಯ ರುಂಡವಿರುವ ವಿಗ್ರಹವನ್ನೇ ಚಳಕೇರಮ್ಮನೆಂದು, ಪಕ್ಕದಲ್ಲೇ ನಾಗರಹೆಡೆಯ ಪ್ರಭಾವಳಿ ಇರುವ ಮತ್ತೊಂದು ಸ್ತ್ರೀಯ ವಿಗ್ರಹವನ್ನು ಬಿಡಾರದಮ್ಮ ಎಂದು ಹೇಳುತ್ತಾರೆ. ಕೆಲವರು ಇವನ್ನು ಜೈನಯಕ್ಷಿಗಳೆಂದೂ ಊಹಿಸುತ್ತಾರೆ.

ವಿಜಯನಗರೋತ್ತರ ಶೈಲಿಯ ವಾಸ್ತು ಶಿಲ್ಪದ ಔನ್ನತ್ಯವನ್ನು ಇಲ್ಲಿಯ ದೇವಾಲಯದಲ್ಲಿ, ಕಂಬಗಳಲ್ಲಿ ಕಾಣಬಹುದು.

* * *

ವೀರಭದ್ರಸ್ವಾಮಿ ತೇರು ಬೀದಿಯಲ್ಲಿ 'ರಾಮಮಂದಿರ' ಎಂದು ಕರೆಯಲ್ಪಡುವ ದೇವಸ್ಥಾನಗಳ ಸಂಕೀರ್ಣ ಇದ್ದರೂ ಇಲ್ಲಿ ರಾಮ ದೇವಸ್ಥಾನ ಇಲ್ಲ! ಇಲ್ಲಿ ಲಕ್ಷ್ಮಿ, ಲಕ್ಷ್ಮೀ-ನಾರಾಯಣ, ಈಶ್ವರ ದೇವಸ್ಥಾನಗಳಿದ್ದರೆ, ಇದಕ್ಕೆ ಹೊಂದಿಕೊಂಡೇ ಆಂಜನೇಯ ದೇವಸ್ಥಾನವಿದೆ. (ಸಮೀಪದಲ್ಲೇ ಸಿದ್ಧರಾಮೇಶ್ವರನ ದೇವಸ್ಥಾನವಿದೆ.)

ಲಕ್ಷ್ಮೀನಾರಾಯಣ ದೇವಸ್ಥಾನದ ಮುಂಭಾಗದ ಬಳಿ ಗರುಡಗಂಬದಲ್ಲಿರುವ ಶಾಸನ ಅಂಕಯ್ಯನ ಸೂಳೆ ಗಾವಲಬ್ಬೆ ಮತ್ತು ಆಕೆಯ ಮಗಳು ಜಾಯಿಲಬ್ಬೆ ಸೂರ್ಯ ದೇವಸ್ಥಾನ ಮತ್ತು ನಂದೀ ಮಂಟಪ ಕಟ್ಟಿಸಿದ್ದುದಾಗಿ ಹೇಳುತ್ತದೆ. ಆದರೆ ಈದಾವೂ ಇಂದು ಅಸ್ತಿತ್ವದಲ್ಲಿಲ್ಲ.

ಇದು ಚಳ್ಳಕೆರೆ ತಾಲ್ಲೂಕಿನ ಸಾಂಸ್ಕೃತಿಕ ಪ್ರವಾಸಿ ತಾಣಗಳ ಒಂದು ಸ್ಥೂಲ ನೋಟ.

* ಚಿತ್ರದುರ್ಗದಲ್ಲಿ 2001ರಲ್ಲಿ ನಡೆದ ಪ್ರವಾಸಿ ಸಪ್ತಾಹದಲ್ಲಿಮಂಡಿಸಿದ ಪ್ರಬಂಧದ ಆಯ್ದ ಭಾಗ.

# ಒಂದು ರೋಚಕ ಜನಪದ ಸಂಪ್ರದಾಯ"ಕಳಸ ಕೀಳೋದು"

ಚಿತ್ರದುರ್ಗ ಜಿಲ್ಲೆಯ ಸಾಂಸ್ಕೃತಿಕ ಕುತೂಹಲದ ಗಣಿಗಳೆಂದರೆ ಇಲ್ಲಿಯ ಬುಡಕಟ್ಟುಗಳು. ಅತ್ಯಂತ ವಿಶಿಷ್ಟವೂ, ಅಪರೂಪವೂ ಆದ ಪಶುಪಾಲಕ ಸಂಸ್ಕೃತಿಯ ಹಿನ್ನೆಲೆಯ ಕಾಡುಗೊಲ್ಲ, ಮ್ಯಾಸಬೇಡ ಬುಡಕಟ್ಟುಗಳು ಇಂದಿಗೂ ಜೀವಂತ ಪಳೆಯುಳಿಕೆಗಳೇ ಆಗಿ ಉಳಿದಿವೆ. ತಮ್ಮದೇ ಆದ ನಂಬಿಕೆ. ಆಚರಣೆಗಳಿಂದ ಬೇರೆಲ್ಲ ಜನವರ್ಗಗಳಿಂದ ಭಿನ್ನವಾಗಿರುವ ಈ ಬುಡಕಟ್ಟುಗಳು ಹಬ್ಬ, ಜಾತ್ರೆಗಳಲ್ಲೂ ಭಿನ್ನತೆಯನ್ನು ಉಳಿಸಿಕೊಂಡೇ ಬಂದಿವೆ.

ಕಾಡುಗೊಲ್ಲರ ಪಂಚಲಿಂಗಗಳಲ್ಲೊಂದಾದ 'ಕ್ಯಾತೇಲಿಂಗ'ನ ಜಾತ್ರೆಯಲ್ಲಿ ನಡೆಯುವ 'ಕಳಶ ಕೀಳೋದು' ವಿಶಿಷ್ಟ ಜನಪದ ಆಚರಣೆಗಳಲ್ಲೊಂದು. ಜನಗಳ ಬಾಯಿಯಲ್ಲಿ ಕ್ಯಾತೇಲಿಂಗನಾಗಿರುವ ಈ ದೇವರ ಮೂಲವನ್ನು ಕೇದಾರಕ್ಕೆ ಆರೋಪಿಸುತ್ತಾರೆ. ಕೇದಾರದಿಂದ ಬಂದ ಲಿಂಗವಾದ್ದರಿಂದ ಇದು ಕೇದಾರಲಿಂಗ > ಕೇತಾರ ಲಿಂಗ > ಕೇತರಲಿಂಗ > ಕೇತಲಿಂಗ > ಕ್ಯಾತೇಲಿಂಗನಾಗಿ ಕೊನೆಗೆ ಆಡುನುಡಿಯಲ್ಲಿ ಕ್ಯಾತಪ್ಪನಾಗಿ ಜನಮನಗಳಲ್ಲಿ ನೆಲೆಸಿದ್ದಾನೆ. ಹೀಗಾಗಿ ಈತನ ಜಾತ್ರೆಯೂ ಗ್ರಾಮೀಣರಲ್ಲಿ 'ಪರಿಸೆ'ಯಾಗಿ ಪರಿಣಮಿಸಿ ಇದು 'ಕ್ಯಾತಪ್ಪನ ಪರಿಸೆ'ಯಾಗಿದೆ.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಚೆನ್ನಮ್ಮ ನಾಗತಿಹಳ್ಳಿಯಲ್ಲಿ ನೆಲೆಸಿರುವ ಈ ದೇವರು ಚಂದಮುತ್ತಿ ಬೆಡಗಿಗೆ ಸೇರಿದ ಬೊಮ್ಮನೋರು, ಕೋಣನೋರು, ಸೋಮನೋರು, ದೇವರೋರು ಇತ್ಯಾದಿ ಕುಲದವರಿಗೆ ಆರಾಧ್ಯದೇವತೆ. ಇದು 'ಬತದ ದೇವರು'. ಆದರೆ ಈ ದೇವರ ಒಕ್ಕಲಿನವರು ಕೆಲವು ಕಠಿಣವಾದ ವ್ರತಗಳನ್ನು ಪಾಲಿಸಬೇಕು (ವ್ರತ ಎಂಬ ಶಿಷ್ಟಪದ ಇಲ್ಲಿ ಬತ ಆಗಿದೆ). ಈ ದೇವರಿಗೆ ಹುರುಳಿ-ನವಣೆ ಸೇರುವುದಿಲ್ಲ! ಹೀಗಾಗಿ ಈ ಜಾತ್ರೆ ನಡೆಯುವಷ್ಟು ಕಾಲ ಈ ದೇವರ ಒಕ್ಕಲಿನವರು ತಮ್ಮ ಮನೆಗಳೊಳಗೆ ಹುರುಳಿ-ನವಣೆಗಳನ್ನು ಇಟ್ಟುಕೊಳ್ಳುವಂತಿಲ್ಲ! ಬೇರೆ ಯಾರದಾದರು ಮನೆಗೆ ಸಾಗಿಸಿ ಇಟ್ಟು ಜಾತ್ರೆಯೆಲ್ಲಾ ಮುಗಿದ ನಂತರ ಮನೆಗೆ ತರಬೇಕು! ಇಲ್ಲವೇ ಹುರಳಿ_ನವಣೆಗಳನ್ನು ಇಡಲು ತಮ್ಮ ಮನೆಯ ಪಕ್ಕದಲ್ಲೇ ಬೇರೊಂದು ಮನೆಯನ್ನು (ಅದು ಗುಡಿಸಲೂ ಆಗಬಹುದು) ಕಟ್ಟಿ ಅದರೊಳಗೆ ಇಡಬಹುದು! ಅದನ್ನು 'ಹುರುಳಿ-ಮನೆ' (ಉಳ್ಳಿಮನೆ) ಎಂದು ಕರೆಯುತ್ತಾರೆ. ಈ 'ಉಳ್ಳಿಮನೆ'ಯೊಳಗೆ ಹೋದವರು ಕೈಕಾಲು ಮುಖ ತೊಳೆದುಕೊಂಡು ಶುದ್ಧರಾಗಬೇಕು.

ಏಕೆಂದರೆ ತಮ್ಮ ದೇವರಿಗೆ ಆಗದ ಧಾನ್ಯವನ್ನು ಮುಟ್ಟಿದ್ದರಿಂದ ಉಂಟಾದ ಸೂತಕವನ್ನು ಕಳೆದುಕೊಳ್ಳಲು! ಹೀಗೆ ಜಾತ್ರೆಯ ಹಿಂದೆ-ಮುಂದೆ ಹಲವು ತಿಂಗಳುಗಳ ಕಾಲ ಬಳಸದೆ, ವರ್ಷದಲ್ಲಿ ಆರು ತಿಂಗಳು ಬಳಸುವ ಈ ಒಕ್ಕಲಿನವರನ್ನು 'ಅರ್ಧಬತ'ದವರು ಎನ್ನುತ್ತಾರೆ.

ಆದರೆ, ಹುರುಳಿ-ನವಣೆಗಳನ್ನು ವರ್ಷಪೂರ್ತಿ ಸಂಪೂರ್ಣವಾಗಿ ಮುಟ್ಟದೇ ಇರುವವವರು ಕೂಡಾ ಇದ್ದಾರೆ! ಇವರನ್ನು 'ಪೂರ್ಣ ಬತ'ದವರು ಎನ್ನುತ್ತಾರೆ. ಇವರು ಇದೇ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಯರಬಳ್ಳಿಹಟ್ಟಿಯಲ್ಲಿರುವ ಹಾಲುಗುಡಪದ ದೇವರ ಒಕ್ಕಲಿನವರು. ಈ ಹಾಲುಗುಡುದಪ್ಪ ದೇವರು ಕೂಡ ಕ್ಯಾತೇಲಿಂಗ ದೇವರ ಇನ್ನೊಂದು ರೂಪ. ಈ ದೇವರನ್ನು ಅದುವರೆಗೂ ಯಾರೂ ಕಂಡಿರಲಿಲ್ಲ. ಒಮ್ಮೆ ಈ ದೇವರು ಹಾಲು ಕುಡಿಯುತ್ತಿರುವಾಗ ಕಂಡಿದ್ದರಿಂದ 'ಹಾಲು ಕುಡಿದಪ್ಪ> ಹಾಲ್ಕುಡದಪ್ಪ> ಹಾಲುಗುಡದಪ್ಪ' ಎಂದು ಹೆಸರಾಯಿತು. ಒಮ್ಮೆ ಈ ದೇವರನ್ನು ಅಣ್ಣ-ತಮ್ಮಗಳ ಮಧ್ಯದ ವ್ಯಾಜ್ಯ ಕಾರಣ ಒಂದು ಬಾವಿಯಲ್ಲಿ ಹಾಕಿದ್ದರಂತೆ, ಮತ್ತೆ ಅವರ ಮಧ್ಯೆ ಹೊಂದಾಣಿಕೆ ಏರ್ಪಟ್ಟು ದೇವರನ್ನು ಬಾವಿಯಿಂದ ತೆಗೆಯುವಾಗ ಪೂರಾ ಬಾಯಿಬತದ 'ತಾಳಿಬೊಟ್ಟು' ಮೊದಲು ಯರಬಳ್ಳಿಯವರಿಗೆ ಸಿಕ್ಕಿದ್ದರಿಂದ ಅವರು 'ಪೂರಾ ಬಾಯಿಬತ'ದವರಾದರು. ಅಂದರೆ ಇವರು ಹುರುಳಿ-ನವಣೆಯನ್ನು ಸಂಪೂರ್ಣವಾಗಿ ತ್ಯಜಿಸಿದ್ದಲ್ಲದೆ, ತಮ್ಮ ದೇವರನ್ನು ಪೂಜಿಸುವಾಗಲೂ ಬಾಯಿಗೆ ಬಟ್ಟೆ ಕಟ್ಟಿಕೊಂಡೇ (ದೇವರ ಮೇಲೆ ಉಗುಳು ಸಿಡಿಯದಿರಲಿ ಎಂದು) ಪೂಜೆ ಮಾಡಲು ತೊಡಗಿದ್ದರಿಂದ ಅದು 'ಬಾಯಿಬತ'ದ ದೇವರಾಯಿತು. ಚೆನ್ನಮ್ಮ ನಾಗತಿಹಳ್ಳಿಯವರಿಗೆ 'ಲಿಂಗ' ಸಿಕ್ಕಿದ್ದರಿಂದ ಅವರು 'ಅರ್ಧಬತ'ಕ್ಕೆ ನಿಂತರು, ಅಂದರೆ ವರ್ಷದಲ್ಲಿ ಅರ್ಧಕಾಲ ಹುರುಳಿ-ನವಣೆ ಬಳಸತೊಡಗಿದರು!

ಈ ಹುರುಳಿ-ನವಣೆ ಈ ದೇವರಿಗೆ ಆಗದಿರುವುದಕ್ಕೆ ಒಂದು ಸ್ವಾರಸ್ಯಕರವಾದ ಕಾರಣವೂ ಇದೆ. ಈ ಹಿಂದೆ ಈ ದೇವರು ರೆಡ್ಡಿ ಜನಾಂಗದವರಿಗೆ ಒಲಿದಿತ್ತಂತೆ. ಅವರ ಐಶ್ವರ್ಯ ಹೆಚ್ಚಿ, ದುರಹಂಕಾರದಿಂದ ದೇವರನ್ನು ಧಿಕ್ಕರಿಸಿ ಮೆರೆಯತೊಡಗಿದ್ದಲ್ಲದೆ, ಕ್ಯಾತೇಲಿಂಗನನ್ನು ನಿರ್ಲಕ್ಷಿಸಿ ಹುರುಳಿ-ನವಣೆ ಇರುವ 'ವಾಡೇವು' (ಎತ್ತರವಾದ ಸ್ವಾರೆಬಾನ)ಗಳಲ್ಲಿ ಹಾಕಿಬಿಟ್ಟಿದ್ದರಂತೆ. ತನಗೆ ಇಲ್ಲಿ ಹಿಂಸೆಯಾಗುತ್ತಿದೆ, ಬೇರೆ ಕಡೆ ಸ್ಥಾಪಿಸಿ ಎಂದು ದೇವರೇ ಎಷ್ಟು ಹೇಳಿದರೂ ರೆಡ್ಡಿಗಳು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಆಗ ರೆಡ್ಡಿಗಳ ಮನೆಯಲ್ಲಿ ಆಳು ಮಗನಾಗಿ ಕೆಲಸ ಮಾಡುತ್ತಿದ್ದ ಗೊಲ್ಲರವನಿಗೆ ಒಲಿದು ರೆಡ್ಡಿಗಳ ಸಂಪತ್ತನ್ನು ಹಾಳು ಮಾಡಿ ಹುರುಳಿ-ನವಣೆಯ ವಾಡೇವುಗಳಿಂದ ಹೊರಬಂದಿದ್ದರಿಂದ, ಮುಂದೆ ಗೊಲ್ಲರವನು ತನ್ನ ದೇವರಿಗೆ ಹಿಡಿಸದ ಧಾನ್ಯಗಳನ್ನು ವ್ರತದಂತೆ ಬಳಸತೊಡಗಿದ್ದರಿಂದಲೇ ಅವರಲ್ಲಿ ಈ ಆಚರಣೆಗಳು ಉಂಟಾಗಲು ಕಾರಣವಾಯಿತು.

ಬಹಳ ಕಟ್ಟುನಿಟ್ಟಿನ ಸೂತಕದ ಈ ದೇವರಿಗೆ ವಿದ್ಯುತ್ ಆಗುವುದಿಲ್ಲ. ಹೀಗಾಗಿ 'ಪೂರಾಬತ'ದ ಯರಬಳ್ಳಿ ಹಟ್ಟಿಯವರು ಇದುವರೆವಿಗೂ ಇಡೀ ಹಟ್ಟಿಗೇ ವಿದ್ಯುತ್ ಸಂಪರ್ಕ

ಪಡೆಯದೆ, ಐವತ್ತು ವರ್ಷಗಳ ಹಿಂದಿನ ಜೀವನ ನಡೆಸುತ್ತಿದ್ದರೆ: ಚೆನ್ನಮ್ಮ ನಾಗತಿಹಳ್ಳಿಯ ಅರ್ಧಬತದವರು ಮಾತ್ರ ತಮ್ಮ ಜಿಗುಟುತನವನ್ನು ಬಿಟ್ಟು ಕೊಟ್ಟು ವಿದ್ಯುತ್‌ನೊಂದಿಗೆ ಇಂದಿನ ಕಾಲದಲ್ಲಿದ್ದಾರೆ. ಹೀಗಾಗಿ ಈ ದೇವರನ್ನು ವಿದ್ಯುತ್‌ತಂತಿಯ ಕೆಳಗೂ ಕೊಂಡೊಯ್ಯುವಂತಿಲ್ಲ! ಈ ದೇವರಿಗೆ ಮೊದಲೇ ಹುರುಳಿ-ನವಣೆ ಆಗದಿರುವುದರಿಂದ ಹುರುಳಿ-ನವಣೆ ಹೊಲಗಳ ಮೇಲೂ ಕೊಂಡೊಯ್ಯುವಂತಿಲ್ಲ! ಕಾಲಿಗೆ ಚಪ್ಪಲಿಯನ್ನು ಧರಿಸುವಂತಿಲ್ಲ! ಹಾಲು ಗುಡದಪ್ಪನ ಪೂಜಾರಿಯಂತೂ ಜನಗಳ ಜೊತೆಗೆ ಬೆರೆಯುವುದೇ ಇಲ್ಲ- ಎಲ್ಲಿ ಜನಗಳ ನೆರಳು ತನ್ನ ಮೇಲೆ ಬಿದ್ದು ಸೂತಕವಾದೀತೋ ಎಂದು. ಎಲ್ಲರೂ ಬಳಸುವ ಬಾವಿಯ ನೀರನ್ನು ಅವನು ಬಳಸುವಂತಿಲ್ಲ, ಹೀಗಾಗಿ ಚಿಲಿಮೆಯ 'ವರತೆ' ನೀರನ್ನು ಮಾತ್ರ ಬಳಸುತ್ತಾನೆ. ಆ ಪೂಜಾರಿ ಸೂತಕವಾದೀತೆಂದು ಬಸ್ ಹತ್ತುವಂತಿಲ್ಲ. ಎಷ್ಟು ದೂರವಾದರೂ ನಡೆದೇ ಹೋಗಬೇಕು- ಅದೂ ಹಳ್ಳಿ ಪ್ರವೇಶ ಮಾಡದೆ, ಊರ ಹೊರವಲಯದಲ್ಲೇ ಹೋಗಬೇಕು!

ಅತ್ಯಂತ ಶ್ರೇಷ್ಠವಾದ, ಪವಿತ್ರವಾದ ಗೋಪಾಲನೆಯ ಕಾಯಕದಲ್ಲಿ ತೊಡಗಿಸಿಕೊಂಡ ಈ ಜನ ತಾವೆಲ್ಲಿ ತಮ್ಮ ಶುದ್ಧತೆ ಕಳೆದುಕೊಂಡರೆ ಗೋವುಗಳಿಗೆ ಅಪಾಯ ತಟ್ಟೀತು ಎಂಬ ಆತಂಕದಿಂದಲೇ ನಾಗರೀಕ ಜನವಸತಿಯಿಂದ ದೂರವಾಗಿ 'ಹಟ್ಟಿ'ಗಳನ್ನು ಕಟ್ಟಿಕೊಂಡು ಬದುಕುವ ಪರಿಪಾಠ ಬೆಳಸಿಕೊಂಡಿರಬೇಕು ಅನಿಸುತ್ತದೆ.

ಆದಕ್ಕೆಂದೇ ಹಟ್ಟಿಯೊಳಗೆ 'ಮುಟ್ಟಾದ' (ಸೂತಕವಾದ) ಹೆಂಗಸರು, ಹಟ್ಟಿಯೊಳಗಿನ ತಮ್ಮ ದೇವರಿಗೆ ಸೂತಕವಾಗದಿರಲೆಂದು ಹಟ್ಟಿಯಿಂದ ಹೊರಗೆ ಬರುವ ಸಂಪ್ರದಾಯ ಬೆಳಸಿಕೊಂಡಿರಬೇಕು. ಸಿಕ್ಕಸಿಕ್ಕವರು ಹಟ್ಟಿ ಹೊಕ್ಕು ಸೂತಕವಾಗದಿರಲೆಂದೇ ಹಟ್ಟಿಯ ಸುತ್ತ ಕಳ್ಳಿಬೇಲಿ ನಿರ್ಮಿಸುವ ಸಂಪ್ರದಾಯ ಹುಟ್ಟಿಕೊಂಡಿರಬೇಕು. ಹೀಗಾಗಿ ಗೊಲ್ಲ ಜನಾಂಗದ ಬಹುಪಾಲು ದೈವಗಳ ಬದುಕು ಕಳ್ಳಿಬೇಲಿಯ 'ಕಂಟಕಾವಕರಣ'ದೊಳಗೇ! ಸಹಜವಾಗಿ ಈ ದೇವರುಗಳಿಗೆ ಕಳ್ಳಿ ಆಭರಣದಂತೆ ಅತ್ಯಂತ ಪ್ರಿಯವಾದದ್ದು. ಕ್ಯಾತೆಲಿಂಗನನ್ನು ಬಂಧಿಸಿ ತೆಗೆದುಕೊಂಡು ಹೋಗಲು ಚಿತ್ರದುರ್ಗದ ದೊರೆ ಭರಮಣ್ಣ ನಾಯಕ ಬಂದಾಗ, ತಮ್ಮ ದೇವರನ್ನು ಮುಟ್ಟಿ ಸೂತಕಗೊಳಿಸಲು ಬಿಡದ ಕರಿಯಣ್ಣ ದುರ್ಗದ ಸೈನ್ಯದೊಂದಿಗೆ ಹೋರಾಡಿ ಮಡಿದು 'ಈರಗಾರ'ನಾಗುವ ಕತೆ ಜನಪದ ಗೀತೆಗಳಲ್ಲಿ ದೊರೆಯುತ್ತದೆ. ಕ್ಯಾತೆಲಿಂಗನಿಗಂತೂ ಕಳ್ಳಿಯೆಂದರೆ ಪಂಚಪ್ರಾಣ. ಅದರ ಜಾತ್ರೆಯಲ್ಲಿ ಈ ದೇವರು ಕುಳಿತುಕೊಳ್ಳುವುದು ಕಳ್ಳಿರಾಶಿಯ 'ಬೆರಗಿ'ನೊಳಗೇ! (ಕಳ್ಳಿಗುಡಿಯೊಳಗೇ!) ಇದು ರೆಡ್ಡಿಗಳ ಹುರುಳಿ-ನವಣೆಗಳ ಸ್ನಾರೆ ಬಾನದಿಂದ ಬಡುಗಡೆ ಪಡೆದು, ಗೊಲ್ಲರವನಿಗೆ ಸಹಜವಾದ ಕಳ್ಳಿಯ ಸಂಗಕ್ಕೆ ಬಂದುದನ್ನು ನೆನಪಿಸಿಕೊಳ್ಳುವ ಆಚರಣೆಯಂತೆ ಕಾಣುತ್ತದೆ.

ಸುಮಾರು ತಿಂಗಳುದ್ದಕ್ಕೂ ಅನೇಕ ವಿಶಿಷ್ಟ ಸಂಪ್ರದಾಯಗಳೊಡನೆ ನಡೆಯುವ ಜಾತ್ರೆಗೆ ಶಿಖರತೆ ಪ್ರಾಪ್ತವಾಗುವುದು ಕಳ್ಳಿಯ ರಾಶಿಯ ತುದಿಯಲ್ಲಿ ಸಿಕ್ಕಿಸಿರುವ ಕಂಚಿನ ಕಳಶವನ್ನು ಕೀಳುವುದರ ಮೂಲಕವೇ!

ಕ್ಯಾತೇಲಿಂಗ ದೇವರು ತನ್ನ ಅನೇಕ ಪರಿವಾರದ ದೇವರುಗಳೊಂದಿಗೆ ಚೆನ್ನಮ್ಮ ನಾಗತಿಹಳ್ಳಿಯಿಂದ ಹೊರಟು ಸುಮಾರು ಮೂರು ಕಿ.ಮೀ. ದೂರದಲ್ಲಿರುವ ಪುರ್ಲೆಹಳ್ಳಿ ಬಳಿಯ ವಸತಿದಿಬ್ಬಕ್ಕೆ ಬರುತ್ತದೆ. ದೇವರು ಇಲ್ಲಿಗೆ ಬರುವ ಹಿಂದಿನ ದಿನವೇ ಒಕ್ಕಲಿನವರೆಲ್ಲ ಸೇರಿ 'ಮರವಾಯಿ'ಯ (ದೇವರಿಗೆ ಅಗತ್ಯವಾದ ಕಳ್ಳೆಮರವನ್ನು ಕಡಿಯುವ ಹಕ್ಕಿನ ಬಾಬಿನವನು) ನೇತೃತ್ವದಲ್ಲಿ, ಎತ್ತಿನ ಬಂಡಿಗಳನ್ನು ಹೊಡೆದುಕೊಂಡು 'ಒಂದೊತ್ತಿ'ನಲ್ಲಿ (ಊಟ ಮಾಡದೇ) ಕಾಡಿಗೆ ಹೋಗುತ್ತಾರೆ. ಅಲ್ಲಿ ಸಿಗಬಹುದಾದ ಎಲ್ಲ ಬಗೆಯ ಕಳ್ಳೆಕಂಟೆಗಳನ್ನು (ಜಾಲಿಕಳ್ಳೆ, ಬಾರೆಕಳ್ಳೆ, ಕಾರೆಕಳ್ಳೆ ಇತ್ಯಾದಿ) ಕಡಿದು ಗಾಡಿಯಲ್ಲಿ ಹೇರಿಕೊಂಡು ವಸತಿದಿಬ್ಬಕ್ಕೆ ತಂದು ಹಾಕುತ್ತಾರೆ. ಕೆಲವು 'ಗಳ' (ಉದ್ದನೆಯ ಕೊಲು) ಗಳಿಂದ ಹೊದಿಕೆ ಇಲ್ಲದ ಗುಡಿಸಲು ರೀತಿಯ ಗುಡಿ ತಯಾರು ಮಾಡಿರುತ್ತಾರೆ. ಈ ಗಳುವಿನ ತುದಿಯಲ್ಲಿ ಕಂಚಿನ ಕಳಶ ಸ್ಥಾಪಿಸಿ, ತಾವು ತಂದ ಕಳ್ಳೆಯನ್ನು ಈ ಗುಡಿಗೆ ಹೊದಿಸಿ 'ಕಳ್ಳೆಗುಡಿ' ಯನ್ನು ನಿರ್ಮಿಸುತ್ತಾರೆ. ಈ ಕಳ್ಳೆಗುಡಿಯ ಒಳಕ್ಕೆ ಹೋಗಲು ಪೂರ್ವಭಾಗದಲ್ಲಿ ಒಂದು ಸಣ್ಣ ಬಾಗಿಲು ಬಿಟ್ಟಿರುತ್ತಾರೆ, ಇಲ್ಲಿ ಬಿಟ್ಟರೆ ಸುತ್ತಲೂ ಕಳ್ಳೆಯನ್ನು ಬಡಿದು ಮುಚ್ಚಿರುತ್ತಾರೆ.

ಎಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರು 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಮೈಸೂರ್' ಕೃತಿಯಲ್ಲಿ ಕಾಡುಗೊಲ್ಲರ ಈ ನಡಾವಳಿಯನ್ನು ಮುಳ್ಳಿನಿಂದ ತಯಾರಿಸಿದ ರಥ ಎಳೆಯುತ್ತಾರೆ ಎಂದು ತಪ್ಪಾಗಿ ಗ್ರಹಿಸಿದಂತಿದೆ.

ವಸತಿ ದಿಬ್ಬಕ್ಕೆ ದೇವರನ್ನು ತರುತ್ತಲೇ ಅದನ್ನು ಈ ಕಳ್ಳೆಗುಡಿಯೊಳಗೆ ಪ್ರತಿಷ್ಠಾಪಿಸಲಾಗುತ್ತದೆ. ಜನ ಕಳ್ಳೆಗುಡಿಯೊಳಕ್ಕೆ ತೂರಿಕೊಂಡು ಹೋಗಿ ದೇವರಿಗೆ ಹಣ್ಣು-ಕಾಯಿ ಮಾಡಿಸಿಕೊಂಡು ಬರುತ್ತಾರೆ. ಗುಡಿಯ ಹೊರಗೆ ಉರುಮೆ ವಾದ್ಯಗಳನ್ನು ನುಡಿಸುತ್ತಿರುತ್ತಾರೆ. ಕಹಳೆಗಳು ಮೊಳಗುತ್ತಿರುತ್ತವೆ. ಸಾವಿರಾರು ಜನಗಳು ಸುತ್ತಿನ ಹಳ್ಳಿಗಳಿಂದ ನೂರಾರು ಎತ್ತಿನ ಗಾಡಿಗಳನ್ನು ಕಟ್ಟಿಕೊಂಡು ಬಂದಿರುತ್ತಾರೆ. ಬರೀ ಕಾಡುಗೊಲ್ಲರಲ್ಲದೆ ಜಾತ್ಯಾತೀತವಾಗಿ ಎಲ್ಲ ಜಾತಿಯ ಜನಗಳೂ ಈ ಜಾತ್ರೆಯಲ್ಲಿ ಪಾಲುಗೊಳ್ಳುತ್ತಾರೆ.

ಮಧ್ಯಾಹ್ನ ಮೂರು ಗಂಟೆಯ ಸುಮಾರಿಗೆ 'ಕಳಶ ಕೀಳುವ' ಹರಕೆ ಮಾಡಿಕೊಂಡ ಗೊಲ್ಲ ಜನಾಂಗದ ಗಂಡು ಭಕ್ತರು ಬರೀ ಚೆಡ್ಡಿಯಲ್ಲಿ ನೆರೆಯುತ್ತಾರೆ. ಎಲ್ಲರೂ ತಣ್ಣೀರು ಮುಣುಗಿ ತಣಿ ಬಟ್ಟೆ ಉಟ್ಟು 'ಮಡಿ'ಯಲ್ಲಿ ಬಂದಿದ್ದು ಕಳ್ಳೆಯ ಶಿಖರ ಹತ್ತಿ ಕಳಶ ಕೀಳಲು ಪೂಜಾರಿಯಿಂದ ದೊರೆಯುವ ಆಜ್ಞೆಗೆ ಕಾಯುತ್ತಾ ಉತ್ಸಾಹದಿಂದ ವಿಜೃಂಭಿಸುತ್ತಿರುತ್ತಾರೆ. ಉರುಮೆ ವಾದ್ಯಗಳು 'ಜಗುರು' ಹಿಡಿಯುವುದರ ಮೂಲಕ ಉತ್ತೇಜಿಸುತ್ತಿರುತ್ತವೆ. ಜನ ಕೇಕೆ ಹಾಕುತ್ತಾ, ಶಿಳ್ಳು ಹೊಡೆಯುತ್ತಾ ಮಿಹಿಪಡುತ್ತಿರುತ್ತಾರೆ. ರಾಶಿಬಿದ್ದ ಕಳ್ಳೆ ಮುಳ್ಳುಗಳನ್ನು ನೋಡಿ ಮುಗ್ಧಜನ ಭಯಭೀತರಾಗುತ್ತಾ ಕುತೂಹಲದಿಂದ ನೋಡುತ್ತಿರುವಾಗ, ಪೂಜಾರಿ ಕಳ್ಳೆ ಗುಡಿಯೊಳಗಿನಿಂದ ಹೊರಬಂದು ಕಳ್ಳೆ ಹತ್ತಲಿರುವ ಭಕ್ತರಿಗೆ ತೀರ್ಥ ಚಿಮುಕಿಸಿ ಅಪ್ಪಣೆ ಕೊಡುತ್ತಾನೆ. ಜನಗಳ ಕೇಕೆ, ವಾದ್ಯಗಳ ಹೋರು ಮುಗಿಲು ಮುಟ್ಟುತ್ತಿದ್ದಂತೆಯೇ, ಭಕ್ತಾದಿಗಳು ಮೈಮೇಲೆ ಆವೇಶ ಬಂದಂತೆ ಮುಳ್ಳಿನ ರಾಶಿಯನ್ನು ಬರಿಗಾಲಲ್ಲಿ ತುಳಿದುಕೊಂಡು ಹತ್ತುತ್ತಾರೆ. ಕೆಲವರು ಕಳ್ಳೆಯ ಮಧ್ಯದಲ್ಲೇ ಸಿಕ್ಕುಹಾಕಿಕೊಂಡು ಪದ್ದಾಡುತ್ತಿರುವಾಗ ಉತ್ಸಾಹಿಗಳು ಹತ್ತಿ ಹೋಗಿ ಕಂಚಿನ ಕಳಶಕ್ಕೆ ಕೈಹಾಕಿ ಕಿತ್ತು ತೆಗೆದುಕೊಂಡು ಇಳಿಯತೊಡಗುತ್ತಾರೆ. ಕಳ್ಳೆಯ ರಾಶಿ ಹತ್ತಿ, ಕಳಶ ಕಿತ್ತು ಕೆಳಗೆ ಇಳಿಯುವ

ಈ ಕ್ರಿಯೆ ಕೆಲವೇ ಕ್ಷಣಗಳಲ್ಲಿ ನಡೆದು ಹೋಗುತ್ತದೆ.

ತಕ್ಷಣವೇ ಜಾತ್ರೆಯಲ್ಲಿ ಸೇರಿದ ಜನ ಚದುರತೊಡಗುತ್ತಾರೆ. ನೂರಾರು ಎತ್ತಿನ ಗಾಡಿಗಳು ಧೂಳೆಬ್ಬಿಸುತ್ತಾ, ಅವರವರ ಊರಿನ ಹಾದಿ ಹಿಡಿಯುವ ದೃಶ್ಯ ನಯನ ಮನೋಹರವಾಗಿರುತ್ತದೆ.

ಕಳ್ಳಿ ಶಿಖರ ಹತ್ತಿ ಇಳಿದ ಭಕ್ತರ ಮೈಯೆಲ್ಲಾ ಕಳ್ಳಿ-ಮುಳ್ಳಿನ ಗೀರುಗಳಿಂದ ರಕ್ತಮಯವಾಗಿರುತ್ತದೆ. ಕಾಲಿನಲ್ಲಿ ಹತ್ತಾರು ಮುಳ್ಳುಗಳು ಮುರಿದುಕೊಂಡಿರುತ್ತವೆ. ಅವರು ನೋವಾಗುವುದಿಲ್ಲ ಎಂದು ಹೇಳಿದರೂ ಕುಂಟುತ್ತಾ ನಡೆಯುವುದು. ಸಮೀಪದಲ್ಲೇ ಕ ಕುತು ಕಾಲಿನಲ್ಲಿ ಮುರಿದ ಮುಳ್ಳುಗಳನ್ನು ಸೂಜಿ, ಪಿನ್ನುಗಳಿಂದ ಚುಚ್ಚಿ ಬಗೆದು ತೆಗೆಯುವ ದೃಶ್ಯ ಅಲ್ಲಲ್ಲಿ ಕಾಣುತ್ತದೆ. ವಾದ್ಯಗಳ ತಾರಕಧ್ವನಿಯಲ್ಲಿ ಆವೇಶದಿಂದ ನುಗ್ಗಿದ ಜನ, ಆವೇಶ ಇಳಿದ ನಂತರ ಎಲ್ಲರ ಹಾಗೆ ನೋವು ತಿನ್ನುವುದನ್ನು ನೋಡಬಹುದು.

ಜಾತ್ರೆ ಮುಗಿದ ನಂತರ ವಸತಿ ದಿಬ್ಬದಲ್ಲಿ ಇರುವ ಕಳ್ಳಿಯನ್ನು ಒಕ್ಕಲಿನವರು ತಮ್ಮ ಕುರಿ ಹಟ್ಟಿಗಳಿಗೆ ತೆಗೆದುಕೊಂಡು ಹೋಗಿ ಹಾಕುತ್ತಾರೆ. ಇದರಿಂದ ಕುರಿಗಳಿಗೆ ರೋಗ-ರುಜಿನಗಳು ಕಾಡುವುದಿಲ್ಲ. 'ಹುಲುಸು ಹೆಚ್ಚುತ್ತದೆ' ಎಂದು ನಂಬುತ್ತಾರೆ. ಕಳ್ಳಿಗುಂಡಿಯ ಮೇಲೆ ತೂರಿದ ಹೂವು. ಹೂವಿನ ಹಾರಗಳಲ್ಲಿ ಉಳಿದ ಹೂವಿನ ತುಣುಕುಗಳನ್ನು ಪ್ರಸಾದವೆಂಬಂತೆ ಸಂಗ್ರಹಿಸಿಕೊಂಡು ಹೋಗುತ್ತಾರೆ.

ಪ್ರತಿ ವರ್ಷ ಜನವರಿ ತಿಂಗಳ ಎರಡನೇ ವಾರದಲ್ಲಿ ನಡೆಯುವ ಈ ಜಾತ್ರೆ ನಮ್ಮ ಜನಪದರ ಬದುಕು-ನಂಬಿಕೆಗಳಿಗೆ ಹಿಡಿದು ಕನ್ನಡಿಯಾಗಿದೆ. ನಮ್ಮ ವಿಜ್ಞಾನಿಗಳಿಗಂತೂ ಅನೇಕ ಒಗಟುಗಳನ್ನು ತಮ್ಮ ಗರ್ಭಗಳಲ್ಲಿ ಧರಿಸಿಕೊಂಡಿರುವ ಕುತೂಹಲದ ಗಣಿಯೂ ಆಗಿದೆ.

* ವಿಶ್ವತೋಮುಖ, 2001.

* ದಲಿತಧ್ವನಿ (ಮಲ್ಲಿಕಾರ್ಜುನ ಖರ್ಗೆ ಸಂಭಾವನಾ ಗ್ರಂಥದಲ್ಲಿ)

## 'ತರಿ ಮರ'

ನಾನು ಸಣ್ಣವನಿದ್ದಾಗ ನಡೆದ ಘಟನೆಯೊಂದು ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಸುಮಾರು 35-40 ವರ್ಷಗಳ ಕೆಳಗೆ ಇರಬೇಕು. ನಮ್ಮ ಊರಿನಲ್ಲೇ ನಡೆದ, ನಮ್ಮ ಬಂಧುಗಳ ಮನೆಯ ಮದುವೆಗೆ ನಮ್ಮ ಮನೆಯ ಹಿರಿಯರೊಂದಿಗೆ ಹೋಗಿದ್ದೆ. ಇದು ಜಾತಿಯಲ್ಲಿ ಒಕ್ಕಲಿಗರ ಉಪ ಪಂಗಡಗಳಲ್ಲೊಂದಾದ ಕುಂಚಿಟಿಗರ ಮದುವೆ. ಅವರಲ್ಲಿ ಅನೇಕ ಬಳಿಗಳು (ಗೋತ್ರ/ಬೆಡಗು/ಕುಲ) ಇವೆ. ಈ ಮದುವೆಗೆ ಜಲದೇನವರ, ಬಸಲೇನವರ ಬಳಿಗಳಿಗೆ ಸೇರಿದವರೇ ಹೆಚ್ಚಿನ ಸಂಖ್ಯೆಯಲ್ಲಿ ಸೇರಿದ್ದರು. ಮದುವೆ ಮುಹೂರ್ತ ಮುಗಿಯಿತು. ಎಲ್ಲರೂ ಊಟಕ್ಕೆ ಎದ್ದರು. ಎಲೆಗಳಲ್ಲಿ ಮದುವೆಯ ಅಡಿಗೆ ಬಡಿಸಿದರು....ಕೆಲವರು ಊಟವನ್ನೂ ಪ್ರಾರಂಭಿಸಿದರು. ಇಷ್ಟರಲ್ಲಿ ಜಲದೇನವರ ಬಳಿಗೆ ಸೇರಿದ ಜನಗಳಲ್ಲಿ ಗುಸು ಗುಸು ಪ್ರಾರಂಭವಾಯಿತು. ಕೆಲವೇ ಕ್ಷಣಗಳಲ್ಲಿ ಎಲೆಯಲ್ಲಿ ಬಡಿಸಿರುವ ಅನ್ನವನ್ನು ಬಿಟ್ಟು ಬಯ್ದುಕೊಳ್ಳುತ್ತಾ ಮೇಲೆದ್ದರು. ಮದುವೆ ಯಜಮಾನ ಬಂದು ವಿಚಾರಿಸಿದಾಗ- "ಹೋಗಿ ಹೋಗಿ ಶಂಕರಕಲ್ಲು ಜಾನಕಲ್ಲೋರಿಗೆ ಹೆಣ್ಣು ಕೊಟ್ಟಿದೀಯಲ್ಲ, ಇದು ಮೊದಲೆ ಗೊತ್ತಿದ್ದರೆ ನಾವು ಇತ್ತಕಡೆ ತಲೆ ಹಾಕ್ತಿರಲಿಲ್ಲ. ನಮಗೂ ಅವರಿಗೂ 'ತರಿಮರ' ಕಡಿದೈತೆ...." ಎಂದು ಜಲದೇನವರ ಗುಂಪಿನವರು ತರಾಟೆಗೆ ತೆಗೆದುಕೊಂಡರು. ಮದುವೆಯ ಯಜಮಾನ ತತ್ತರಿಸಿ ಹೋದ."ಏನೋ ತಪ್ಪಾಗಿ ಹೋಗಿದೆ.... ಹೊಟ್ಟೇಲಿ ಹಾಕ್ಕೊಳ್ಳಿ" ಎಂದು ಯಜಮಾನ ಕೈ ಕೈ ಮುಗಿಯುತ್ತಿದ್ದರೂ ಕೇಳದೆ ಮದುವೆ ಚಪ್ಪರದಿಂದ ಹೊರಗೆ ಬಂದರು. ಮದುವೆ ಮನೆ ಮಸಣದಂತಾಯಿತು. ಅವರವರ ಮನೆಗಳಿಗೆ ಹೋಗಿ ಸ್ನಾನ ಮಾಡಿ ಮಡಿಯಾಗಿ ಊದಿನಕಡ್ಡಿ, ತೆಂಗಿನಕಾಯಿ ತೆಗೆದುಕೊಂಡು ನೇರವಾಗಿ ದೇವಸ್ಥಾನಕ್ಕೆ ಬಂದು, ದೇವರಿಗೆ ಅಡ್ಡಬಿದ್ದು, 'ತಪ್ಪುಕಾಣಿಕೆ' ಕಟ್ಟಿ ಶುಚಿಯಾದರು ! ಅಷ್ಟರಲ್ಲಿ ಕೆಲವರ ಮೈಯ ಮೇಲೆ, ಬೆನ್ನ ಮೇಲೆ 'ಬಾಸಳ' (ಬಾಸುಂಡೆ) ಮೂಡಿದ್ದವು....ಇದು ದೇವರು ಕೋಪಗೊಂಡಿದ್ದರ ಪರಿಣಾಮ ಎಂದು ಹಿರಿಯರು ವಿವರಿಸುತ್ತಿದ್ದರು. ಈ ಜನಗಳ ನಡವಳಿಕೆಯ ತಲೆಬುಡ ಅರ್ಥವಾಗದೆ ಎಲ್ಲಕ್ಕೂ ಮೂಕ ಸಾಕ್ಷಿಯಾಗಿದ್ದೆ.

ಈ ಬಗ್ಗೆ ಮದುವೆ ಮನೆಯಲ್ಲಿ ವಿಚಾರಿಸಿದಾಗ ಮತ್ತೆ ಅದೇ ಮಾತು-ಶಂಕರಕಲ್ಲು ಜಾನಕಲ್ಲೋರಿಗೂ-ಜಲದೇನವರಿಗೂ 'ತರಿಮರ ಕಡಿದೈತೆ' ಎಂದರು. ಹಾಗೆಂದರೆ ಈ ಬಳಿಗಳವರು ಪರಸ್ಪರ ನೆಂಟರಲ್ಲವೆ? ನೆಂಟರೇನೋ ಹೌದು, ಆದರೆ ಸಂಬಂಧ ಬೆಳೆಸುವಂತಿಲ್ಲ!

ಹಾಗಾದರೆ 'ತರಿಮರ' ಎಂದರೇನು? ಬಾಲ್ಯದಲ್ಲಿ ಇದಕ್ಕೆ ಉತ್ತರ ಸಿಗಲಿಲ್ಲ. ನಾನು ಸಂಶೋಧಕನಾಗಿ ಬೆಳೆದ ಮೇಲೆ ಈ ಬಗ್ಗೆ ಚಿಂತಿಸಿದೆ. 'ತರಿ' ಎಂದರೆ 'ಕತ್ತರಿಸು' ಎಂಬ ಅರ್ಥ ಇದೆ. (ಕಿಟ್ಟೆಲ್ ನಿಘಂಟಿನಲ್ಲಿ 'ತರಿಮರ' ಎಂಬ ಉದಾಹರಣೆಯೂ ಇದೆ) ಅಂದರೆ ಮರವನ್ನು ಕತ್ತರಿಸು ಎಂಬ ಅರ್ಥ ಬರುತ್ತದೆ. ಹಾಗಾದರೆ ಮರ ಏನನ್ನು ಸಂಕೇತಿಸುತ್ತದೆ? ಸಾಮಾನ್ಯವಾಗಿ 'ಸಂಬಂಧ'ವನ್ನು ಹೇಳಲು, ವಂಶದ ಇತಿವೃತ್ತವನ್ನು ಹೇಳಲು 'ವಂಶವೃಕ್ಷ' ಎಂಬ ಪದ ಬಳಸುವುದುಂಟು. ಇಂದಿಗೂ ಇದನ್ನು ಕೆಂದಾಯ ಇಲಾಖೆಗಳಲ್ಲಿ ಸಂಬಂಧ ಸೂಚಕ ಶಬ್ದವಾಗಿಯೇ ಬಳಸುವುದನ್ನು ಕಾಣಬಹುದು. 'ತರಿಮರ ಕಡಿದೈತೆ' ಅಂದರೆ ಆ ವಂಶದವರೊಂದಿಗೆ ಇದ್ದ, ಮುಂದೆ ಮಾಡಬಹುದಾದ ಸಂಬಂಧವನ್ನು ಕತ್ತರಿಸು ಎಂದೇ ಹೇಳುತ್ತದೆ.'ತರಿಮರ ಕಡಿಯುವುದು'ಎಂದರೆ ಸಂಬಂಧ-ಸಂಪರ್ಕ ಕಡಿದುಕೊಳ್ಳುವುದು ಎಂಬುದನ್ನೇ ಹೇಳುತ್ತದೆ.

ಇಂದು 'ಜಾತಿ'ಯ ಸ್ವರೂಪವನ್ನು ಪಡೆದಿರುವ ಅನೇಕ ಸಮಾಜಗಳು ಹಿಂದೆ ಬುಡಕಟ್ಟುಗಳ ಸ್ವರೂಪದಲ್ಲಿ ಬದುಕುತ್ತಿದ್ದವು. ಆ ಸಮಾಜದ ಆಗುಹೋಗುಗಳನ್ನೆಲ್ಲಾ ಅಂದು ಅಸ್ತಿತ್ವದಲ್ಲಿದ್ದ ಕಟ್ಟೆಮನೆಗಳು, ಗುಡಿಕಟ್ಟುಗಳು (ಒಂದೇ ದೇವರ ಗುಡಿಗೆ ನಡೆದುಕೊಳ್ಳುವ ಜನಗಳನ್ನು ಕೆಲವು ಕಟ್ಟುಗಳ ಮೂಲಕ ನಿಯಂತ್ರಿಸುವ ಸ್ಥಳಗಳೇ-ಗುಡಿಕಟ್ಟುಗಳು. ಇವೂ ಕೂಡ ಕಟ್ಟೆಮನೆಗಳ ಪಾತ್ರವನ್ನೇ ನಿರ್ವಹಿಸುವ ನ್ಯಾಯಸ್ಥಾನಗಳಿದ್ದಂತೆ) ನಿಯಂತ್ರಿಸುತ್ತಿದ್ದವು. ಇವು ತಪ್ಪು ಮಾಡಿದ ಯಾರ ಮೇಲೆ ಬೇಕಾದರೂ ನಿರ್ಬಂಧಗಳನ್ನು ವಿಧಿಸುತ್ತಿದ್ದವು. ಇಲ್ಲವೇ ಕುಲದಿಂದಲೇ ಬಹಿಷ್ಕರಿಸಿಬಿಡುತ್ತಿದ್ದರು. (ಹೀಗೆ ಅಂದಿನ ಸಮಾಜ ಒಪ್ಪಿಕೊಂಡ ನಿಯಮಗಳಿಗೆ ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದ ಜನಗಳನ್ನು ಕುಲದಿಂದ ಹೊರಗೆ ಹಾಕಿದಾಗ, ಅಂಥವರು ಎಲ್ಲರಿಂದಲೂ ದೂರವಾಗಿ, ಪ್ರತ್ಯೇಕವಾಗಿ ವಾಸಿಸಬೇಕಾಗಿತ್ತು. ಹೀಗೆ ಹುಟ್ಟಿಕೊಂಡವುಗಳೇ ಕೆಟ್ಟವರ ಹಟ್ಟಿ ಕೆಟ್ಟೋರ ಹಟ್ಟಿಗಳು), ಕೆಲವೊಮ್ಮೆ ಕೆಲವು ನಿಷೇಧಗಳನ್ನು ಹೇರುತ್ತಿದ್ದವು. ಇಂತಹ ನಿಷೇಧಗಳಲ್ಲಿ 'ತರಿಮರ ಕಡಿದಿದೆ' ಎನ್ನುವುದೂ ಒಂದು. ಅಂದರೆ ಆ ಗುಂಪಿನೊಂದಿಗೆ ಇನ್ನು ಮುಂದೆ ಯಾವುದೇ ಬಗೆಯ ವೈವಾಹಿಕ ಸಂಬಂಧಗಳನ್ನು ಇಟ್ಟುಕೊಳ್ಳಕೂಡದು ಎಂಬ 'ನಿಷೇಧ ವಿಧಿ' ಇಲ್ಲಿದೆ. ಉದ್ದಕ್ಕೂ ಜಾತಿ/ಬುಡಕಟ್ಟುಗಳಲ್ಲಿನ ಒಳಪಂಗಡವನ್ನು ಹೇಳಲು-ಬೆಡಗು, ಗೋತ್ರ, ಕುಲ, ಬಳಿ-ಹೀಗೆ ಅನೇಕ ಶಬ್ದಗಳನ್ನು ಬಳಸುತ್ತೇವೆ. ಇವೆಲ್ಲವನ್ನು ಸಮಾನ ಅರ್ಥದಲ್ಲಿ ಬಳಸಲಾಗಿದೆ. ಇದು ನೆಂಟಾಚಾರಕ್ಕಾಗಿ ಮಾಡಿಕೊಂಡ ಒಂದು ಒಳವ್ಯವಸ್ಥೆ. ಅಣ್ಣ-ತಮ್ಮಂದಿರು ಯಾರು, ನೆಂಟರು ಯಾರು ಎಂದು ಗುರುತಿಸಲು ಮಾಡಿಕೊಂಡ ವ್ಯವಸ್ಥೆ. ಕೆಲವೊಮ್ಮೆ ಎರಡು-ಮೂರು ಗೋತ್ರದವರು ಒಂದು ಗುಂಪಾಗಿ ಅಣ್ಣ-ತಮ್ಮಂದಿರಂತೆ ನಡೆದುಕೊಳ್ಳುತ್ತಾರೆ. ಆ ಗುಂಪಿನವರಿಗೆ ಉಳಿದವರೆಲ್ಲಾ ನೆಂಟರು. ಅಪರೂಪಕ್ಕೆಂಬಂತೆ ಕೆಲವು ಒಂಟಿಗೋತ್ರದವರು (ಕುಂಚಿಟಿಗರಲ್ಲಿ 'ಒಳಕಲ್ಲೋರು' ಒಂಟಿ ಕುಲ) ಉಂಟು. ಆದರೆ ಅದೇ ಬಳಿಯ ಬೇರೆ (ಮೂಲ) ಬುಡಗಳೊಂದಿಗೆ ಸಂಬಂಧ ಬೆಳಸಬಹುದು. ಇಲ್ಲಿ ಉಲ್ಲೇಖವಾಗಿರುವ ನಿಷೇಧ 'ಶಂಕರಕಲ್ಲು ಜಾನಕಲ್ಲೋರು' ಎಂಬುದು 'ಶಂಕರಕಲ್ಲು' ಎಂಬ ಊರಿನ ಬುಡಕ್ಕೆ ಸೇರಿದ 'ಜಾನಕಲ್ಲೋರಿಗೆ' ಮಾತ್ರ ಅನ್ವಯವಾಗುತ್ತದೆ. 'ಕೋಡಿಹಳ್ಳಿ ಜಾನಕಲ್ಲೋರು', 'ಗುಂಟನೂರು

ಜಾನಕಲ್ಲೋರು' ಎಂಬ ಬೇರೆ ಮೂಲದ ಜಾನಕಲ್ಲೋರಿಗೆ ಈ ನಿಷೇಧ ಅನ್ವಯವಾಗುವುದಿಲ್ಲ. ಈ ಬುಡಗಳೊಂದಿಗೆ ಜಲದೇನವರು ಈಗಲೂ ಸಂಬಂಧಗಳನ್ನು ಬೆಳಸುತ್ತಾರೆ. ಹಾಗೂ ಈ ನಿಷೇಧ ಜಲದೇನವರ 'ಬಳಿ'ಗೆ ಮಾತ್ರ ಅನ್ವಯವಾಗುವ ನಿಷೇಧ. ಆದರೆ ಅದೇ ಶಂಕರಕಲ್ಲು ಜಾನಕಲ್ಲೋರೊಂದಿಗೆ ನಂಟಾಚಾರ ಇರುವ ಬೇರೆ 'ಬಳಿ'ಯ ಜನಗಳು ಸಂಬಂಧಗಳನ್ನು ಬೆಳೆಸಲು ಯಾವ ಅಡ್ಡಿಯೂ ಇರುವುದಿಲ್ಲ.

ಈ ಹಿಂದೆ ಬುಡಕಟ್ಟು ಸ್ವರೂಪದಲ್ಲಿ ಬದುಕುತ್ತಿದ್ದ ಸಮಾಜಗಳು ಈ ಬಗೆಯ ನಿಷೇಧಗಳನ್ನು ಬಹಳ ಗಂಭೀರವಾಗಿ ಪರಿಗಣಿಸುತ್ತಿದ್ದವು, ಜಾರಿಗೆ ತರುತ್ತಿದ್ದವು. ಸಮಾಜ ಆಧುನಿಕಗೊಂಡು ಬುಡಕಟ್ಟು ಸ್ವರೂಪದಿಂದ ಜಾತಿಯ ಸ್ವರೂಪ ಪಡೆದುಕೊಂಡರೂ ಇಂತಹ ಕಟ್ಟುಪಾಡುಗಳು 'ಪಳೆಯುಳಿಕೆ'ಗಳ ರೂಪದಲ್ಲಿ ಉಳಿದುಕೊಂಡೇ ಬಂದಿರುತ್ತವೆ. ಮಾನವ ಇಂಥ ಅತ್ಯಾಧುನಿಕ ಕಾಲದಲ್ಲಿಯೂ ಇವನ್ನು ಉಲ್ಲಂಘಿಸಲು ಹೆದರುತ್ತಾನೆ. ಭೂತಕಾಲದ ಈ ಭೂತಗಳು ನಮ್ಮನ್ನು ಸುಪ್ತ ಮನಸ್ಸಿನಲ್ಲಾದರೂ ಕಾಡುತ್ತವೆ. ಅದಕ್ಕೇ ಹೇಳುವುದು. 'ಮನುಷ್ಯ ಮಾತ್ರ ಆಧುನಿಕ, ಮನಸ್ಸು ಮಾತ್ರ ಸಾಂಪ್ರದಾಯಿಕ' ಎಂದು!

ಇಂತಹ ಉಗ್ರ ನಿರ್ಧಾರಕ್ಕೆ ಪ್ರೇರಣೆಯಾದ ಘಟನೆಯಾದರೂ ಎಂತಹುದು? ಆಂಧ್ರಪ್ರದೇಶದ, ಕರ್ನಾಟಕಕ್ಕೆ ಹೊಂದಿಕೊಂಡಿರುವ ಮಡಕಶಿರಾ ತಾಲ್ಲೂಕಿನ ಶಂಕರಕಲ್ಲು ಗ್ರಾಮದಿಂದ ಮುದ್ದಮ್ಮ ಎಂಬ 'ಜಾನಕಲ್ಲೋರು' 'ಬಳಿ'ಯ ಹೆಣ್ಣನ್ನು, ಪಾವಗಡ ತಾಲ್ಲೂಕಿನ ಜಂಗಮರಹಳ್ಳಿ ಹತ್ತಿರ ಇರುವ ಮರೂರು ಎಂಬ ಗ್ರಾಮದ 'ಜಲದೇನವರ' 'ಬಳಿ'ಯ ನಿಂಗಮುತ್ತಪ್ಪನಿಗೆ ಕೊಟ್ಟು ಮದುವೆ ಮಾಡಿತ್ತು. ಇವರಿಗೆ ವೀರನಾಗಪ್ಪ (=ಈರ ನಾಗಪ್ಪ) ಎಂಬ ಮಗ, ದೊಡ್ಡನಾಗಮ್ಮ, ಸಣ್ಣನಾಗಮ್ಮ ಎಂಬ ಇಬ್ಬರು ಹೆಣ್ಣು ಮಕ್ಕಳು. ಹೆಣ್ಣು ಮಕ್ಕಳಿಬ್ಬರೂ 'ದೊಡ್ಡವರಾದರು' (=ರಜಸ್ವಲೆಯಾದರು/ಪುಷ್ಪವತಿಯರಾದರು). ಮುದ್ದಮ್ಮನ ಅಣ್ಣಂದಿರು ಸೋದರ ಸೊಸೆಯರಿಗೆ 'ಒಸಗೆ' ತಂದು, ಎರಡೂ ಹೆಣ್ಣುಗಳನ್ನು ತಮ್ಮ ಮಕ್ಕಳಿಗೆ ಮಾಡಿಕೊಳ್ಳುವ ಅಭಿಲಾಷೆ ವ್ಯಕ್ತಪಡಿಸಿದರು. ಆಗಿನ ಪದ್ಧತಿಯಂತೆ, ಬಹಿಷ್ಟೆಯಾಗಿ, ಮನೆಯಿಂದ ಹೊರಗೆ ಬೇವಿನ ಸೊಪ್ಪಿನ ಗುಡಿಸಲಲ್ಲಿ ಇದ್ದ ಸೊಸೆಯಂದಿರನ್ನು ಮಾತನಾಡಿಸಿ, ಅವರ ತಾಯಿಯೂ, ತಮ್ಮ ತಂಗಿಯೂ ಆದ ಮುದ್ದಮ್ಮನ ಮುಂದೆ ಸೊಸೆಯರನ್ನು ತಂದುಕೊಳ್ಳುವ ಮಾತು ಆಡಿದರು. ತಂಗಿ ಮುದ್ದಮ್ಮ 'ಯಜಮಾನರನ್ನು ಕೇಳಿ' ಎಂದಳು. ನೇರವಾಗಿ ಆವಿನಗೂಡಿನಲ್ಲಿದ್ದ ಮಾವನನ್ನು ಹೋಗಿ ಕಂಡು ಕೇಳಿದರು. 'ನನ್ನೇನು ಕೇಳ್ತೀರ ಮಗ ಈರನಾಗಪ್ಪನ್ನ ಕೇಳಿ, ನಿಮ್ಮ ತಂಗೀನ ಕೇಳಿ. ನೀವುಂಟು ನಿಮ್ಮ ತಂಗಿ ಉಂಟು' ಎಂದ. ಅಳಿಯ ವೀರನಾಗಪ್ಪನನ್ನು ಕೇಳಿದರು. ಅಳಿಯ 'ನಿಮ್ಮ ವಂಶಕ್ಕೆ ಕೊಡೋಲ್ಲ' ಅಂದ. 'ಯಾಕಪ್ಪ ನಮ್ಮ ವಂಶ ಏನಾಗೈತೆ? ಕುರಿ ಕೊಟ್ಟೋರಿಗೆ ಮರಿ ಕೊಡಲ್ಲ ಅಂತೀಯಲ್ಲೋ' ಎಂದರು ಮಾವಗಳು. 'ಪೋಲಿಪಟಾಲಂ ಬಿದ್ದಿರೋ ನಿಮ್ಮ ಮಕ್ಕಳಿಗೆ ಕೊಡೋದಕ್ಕಿಂತ ನನ್ನ ತಂಗೀರನ ಕಲ್ಲುಕಟ್ಟಾದರು ಬಾವಿಗೆ ನೂಕ್ತೀನಿ ಸುತ್ರಾಮ ಕೊಡಲ್ಲ' ಎಂದು ಕಡ್ಡಿಮುರಿದಂತೆ ಮಾತನಾಡಿದ. ಮಾವ ಅಳಿಯಂದಿರಿಗೆ ಮುಖಕ್ಕೆ ಮುಖ ಹತ್ತಿತು.... ಮಾರಾಮಾರಿ ಜಗಳ ಆದುವು. ಮಾವಗಳು 'ಲೇ, ನಿನ್ನತಲೆ

ತಗೀಸ್ತೀವಿ...ಸೇಡು ತೀರಿಸಿಕೊಳ್ತೀವಿ...ನಿನ್ನ ತಂಗೇರು ನಮ್ಮ ಹುಡುಗರ್ನ ಆದೆಂಗೆ ಮದುವೆ ಆಗೋಲ್ಲವ್ವೋ ನೋಡೇ ಬಿಡ್ತೀವಿ' ಎಂದು ಶಪಥ ಮಾಡಿಹೋದರು.

'ಗುಡ್ಲು ಕೂಡಿದ' ತಂಗಿಯರನ್ನು ಒಂಭತ್ತು ದಿನಗಳ ನಂತರ ಮನೆ ತುಂಬಿಸಿಕೊಳ್ಳಬೇಕೆಂದು ಅಣ್ಣ ವೀರನಾಗಪ್ಪ ತಂಗಿಯರಿಗಾಗಿ 'ಸೀರೆ-ಹೂವು-ಬಣ್ಣ' ತರಬೇಕೆಂದು, ಬುತ್ತಿ ಗಂಟು ತಗಂಡು ಸಮೀಪದ ಸ್ವಾರಗಿರಿ ಪಟ್ಟಣಕ್ಕೆ ಕುದುರೆ ಮೇಲೆ ಹೋದ. ಅಪಶಕುನಗಳಾದವು. ಲೆಕ್ಕಿಸಲಿಲ್ಲ. ಜೊತೆಗೆ ಅವನ ನೆಚ್ಚಿನ ನಾಯಿಯೂ ಹೊರಟಿತು. ಪಟ್ಟಣದಿಂದ ಸಾಮಾನು ಕೊಂಡು ಊರಿಗೆ ವಾಪಸ್ಸು ಬರುವಾಗ ದಾರಿ ಮಧ್ಯೆ ರಜವಳ್ಳಿ ಹತ್ತಿರದ ಮಜ್ಜನ ಬಾವಿ ಬಳಿ, ಕೈಕಾಲು ಮುಖ ತೊಳೆದುಕೊಂಡು ಬುತ್ತಿಗಂಟು ಬಿಚ್ಚಿದ. ಸೋದರ ಮಾವಗಳು ರಜವಳ್ಳಿ ನಾಯಕರಿಗೆ ಮೊದಲೇ ಹೇಳಿದ್ದರು-'ದಾರಿ ಕಾದು ನನ್ನ ಅಳಿಯನ ತಲೆ ಒಡೆಯಿರಿ. ನಿಮಗೆ ಬಹುಮಾನ ಕೊಡ್ತೀವಿ' ಎಂದು. ಅವರು ಬಂದು ಹಿಂದೆ-ಮುಂದೆ ನೋಡದೆ ತಲೆ ಒಡೆದು ಓಡಿಹೋದರು. ರಕ್ತ ಮಡುವಾಗಿ ಹರೀತು. ಜೊತೆಗೆ ಬಂದಿದ್ದ ನಾಯಿ ರಕ್ತದಗೆ ಉಳ್ಳಾಡಿ ಮೈಕೆಂಪು ಮಾಡಿಕೊಂಡು ಸಾವು ಸುದ್ದಿ ತಗಂಡು ಹೋಯಿತು. ತಂಗೆಂದಿರಿಗೆ ಇದು ಮಾವಗಳದೇ ಕೆಲಸ ಎಂದು ಗೊತ್ತಾಯಿತು. ಏನಾದರೂ ಸರಿ ತಾವು ಮಾವಗಳಿಗೆ ದಕ್ಕಬಾರದು ಎಂದು ತಾವಿದ್ದ ಬೇವಿನ ಗುಡಿಸಲುಗಳಿಗೇ ಬೆಂಕಿ ಇಟ್ಟುಕೊಂಡು ಸುಟ್ಟುಹೋದರು. ಈ ದುರಂತವನ್ನು ನೋಡಿದ ಮುದ್ದಮ್ಮ ಇನ್ನು ಬದುಕಿರಬಾರದೆಂದು ನಿರ್ಧರಿಸಿ 'ತವರಿನವರಿಗೆ ಹೆಣ್ಣು ಹೆಚ್ಚಬೇಡ. ಗಂಡು ಬೆಳೆಯಬೇಡ' ಎಂದು ಶಾಪಕೊಟ್ಟು ಬದುಕು ಅಂತ್ಯಗೊಳಿಸಿಕೊಂಡಳು. ಈಕೆಯನ್ನು ಸಮೀಪದ ಅರಸೀಕೆರೆ (ಕಳ್ಳ ಅರಸೀಕೆರೆ ಅಲ್ಲ)ಯವರು 'ತಾಯಿ ಮುದ್ದಮ್ಮ' ಎಂಬ ದೇವತೆ ಮಾಡಿಕೊಂಡರು. ಮರೂರಿನವರು ವೀರನಾಗಪ್ಪನ ಶವ ತಂದು ಹಳ್ಳದ ಬಳಿ ಮಣ್ಣುಮಾಡಿ, ವೀರಗಲ್ಲು ಕೆತ್ತಿಸಿ, ಗುಡಿಕಟ್ಟಿ ದೇವರು ಮಾಡಿಕೊಂಡರು.

ಇದು ಒಂದು ಜನಾಂಗ ಅನುಭವಿಸಿದ ದುರಂತದೊಂದಿಗೆ ಸಂಸ್ಕೃತಿಯ ಕತೆಯನ್ನೂ ಹೇಳುತ್ತದೆ. ಅಂದಿನಿಂದ ಇಂದಿನವರೆಗೆ ಶಂಕರಕಲ್ಲು ಜಾನಕಲ್ಲೋರ ಮೇಲೆ ಈ ಜಲದೇವರ ಗೋತ್ರದವರ ನಿಷೇಧ ನಡೀತಾ ಇದೆ. ಈಗೀಗ ಕೆಲವರು ಇದನ್ನು ಉಲ್ಲಂಘಿಸಿ ಅವರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿದ್ದಾರೆ. ಆದರೆ ಈಗಲೂ ಅವರ ಗಾಳಿಯೂ ಸೋಕ ಕೂಡದು ಎಂಬಂತೆ ಕೆಲವರು ಬದುಕುತ್ತಿದ್ದಾರೆ. ಸಮಾಜದೊಳಗೆ ಆಚರಣೆಗಳು ಅರ್ಥ ಕಳೆದುಕೊಳ್ಳುತ್ತಿರುವಂತೆ ಕಂಡರೂ, ಕೆಲವೊಮ್ಮೆ ಅತ್ಯುಗ್ರ ಆಚರಣೆಯೂ ಆಗಿ, ವಿರೋಧಾಭಾಸದ ವೈರುಧ್ಯಗಳನ್ನು ಹುಟ್ಟು ಹಾಕುತ್ತಿರುವುದನ್ನು ಗಮನಿಸಬಹುದು.

ನಿಷೇಧಕ್ಕೆ ಒಳಗಾಗಿರುವ ಶಂಕರಕಲ್ಲು ಜಾನಕಲ್ಲೋರು ಸೇರಿದಂತೆ, ಬೇರೆ ಬೆಡಗಳ ಜಾನಕಲ್ಲೋರು ಕೂಡ ಕೆಲವು ನಿಷೇಧಗಳನ್ನು ಬೇರೆ 'ಬಳಿ'ಗಳೊಂದಿಗೆ ಮಾಡಿಕೊಂಡು ಬರುತ್ತಿದ್ದಾರೆ. ಇವರು ವನಮುನವರೊಂದಿಗೆ (ಇದು ಕೂಡ ಒಂದು ಬಳಿ/ಗೋತ್ರ/ಕುಲ)ಸಂಬಂಧ ಬೆಳೆಸುವುದಿಲ್ಲ. ಹೀಗೆ ಕುಂಚಿಟಿಗ ಒಕ್ಕಲಿಗರಲ್ಲಿರುವ 48 ಗೋತ್ರದವರಲ್ಲಿ ಒಂದಿಲ್ಲ ಒಂದು ಗೋತ್ರದೊಂದಿಗೆ 'ತರಿಮರ ಕಡಿದಿರುವ' ಪ್ರಕರಣಗಳು ಉಂಟು.

ಕೆಲವೊಮ್ಮೆ ಇದು ಇಡೀ ಗೋತ್ರಕ್ಕೆ ಅನ್ವಯಿಸುವಂತಿದ್ದರೆ, ಕೆಲವೊಮ್ಮೆ ಆ ಗೋತ್ರದ ಅತ್ಯಂತ ಸಣ್ಣ ಬುಡಕ್ಕೆ ಮಾತ್ರ ಅನ್ವಯಿಸುತ್ತದೆ. ಹಿರಿಯೂರು ತಾಲ್ಲೂಕಿನ ಗುಳಗೊಂಡನಹಳ್ಳಿಯಲ್ಲಿರುವ ಕುಂಚಿಟಿಗರು, ಪಕ್ಕದ ಚಿಲ್ಲಹಳ್ಳಿಯ ಕುಂಚಿಟಿಗರಲ್ಲಿ ಸಂಬಂಧ ಬೆಳೆಸುವುದಿಲ್ಲ. ಈ ಗೋತ್ರದ ಹೆಣ್ಣೊಂದನ್ನು ಮಾಡಿಕೊಂಡು ಹೋಗಿದ್ದ ಗೋತ್ರದವರು ವಿನಾಕಾರಣ ತಮ್ಮ ಹೆಣ್ಣನ್ನು ಕೊಲೆ ಮಾಡಿದ ಕಾರಣಕ್ಕೆ ಅವರೊಂದಿಗೆ ಸಂಬಂಧ ಬಿಟ್ಟರು. ಸತ್ತ ಹೆಣ್ಣಿನ ಪ್ರತಿಮೆಯನ್ನು ಚಿಲ್ಲಳ್ಳಿಯ ಊರ ಹೊರಗಿನ ಬಯಲಲ್ಲಿ ನಿಲ್ಲಿಸಿದ್ದು, ಎರಡೂ ಗೋತ್ರದವರು ಪೂಜಿಸುತ್ತಾರೆ-ಒಬ್ಬರು ಪ್ರತಿಮೆಯ ಮುಂಭಾಗದಿಂದ ಪೂಜಿಸಿದರೆ, ಮತ್ತೊಬ್ಬರು ಪ್ರತಿಮೆಯನ್ನು ಹಿಂಭಾಗದಿಂದ ಪೂಜಿಸುತ್ತಾರೆ!

ಈ ಬಗೆಯ 'ತರಿಮರ ಕಡಿದ' ಪ್ರಕರಣಗಳು ಎಲ್ಲಾ ಜಾತಿ/ಬುಡಕಟ್ಟುಗಳಲ್ಲೂ ಇರುವುದನ್ನು ಕಾಣಬಹುದು. ಕಾಡುಗೊಲ್ಲ, ಮ್ಯಾಸಬೇಡ ಬುಡಕಟ್ಟುಗಳಲ್ಲಿ 'ತರಿಮರ' ಕಡಿದ ಪ್ರಕರಣಗಳು ಇವೆ. ಚಿತ್ರದುರ್ಗದ ಪಾಳೆಯಗಾರರು ಮೂಲತಃ ಮ್ಯಾಸಬೇಡ ಬುಡಕಟ್ಟಿನ ಕಾಮಗೇತಿ ಗೋತ್ರದವರು. ಚಿತ್ರದುರ್ಗ ಪಾಳೆಗಾರರು ತಮಗೆ ದ್ರೋಹ ಬಗೆದ ರಾಯದುರ್ಗ, ಹರಪನಹಳ್ಳಿ, ಮತ್ತೋಡು ಗ್ರಾಮಗಳ ಪಾಳೆಯಗಾರರೊಂದಿಗೆ 'ತರಿಮರ' ಕಡಿದಿರುವುದರಿಂದ ಅವರೊಂದಿಗೆ ಸಂಬಂಧ ಬೆಳೆಸುವುದಿಲ್ಲ.

ಕಾಡುಗೊಲ್ಲರ ಸಾಂಸ್ಕೃತಿಕ ವೀರ ಜುಂಜಪ್ಪನಿಗೆ ವಿಷವಿಟ್ಟು ಕೊಂದ, ಜುಂಜಪ್ಪನ ಸೋದರ ಮಾವಂದಿರ ಕುಲವಾದ 'ಕಂಬೇರು ಗೊಲ್ಲ'ರಿಗೆ, ಜುಂಜಪ್ಪನ ಕುಲವಾದ ಕರಡಿಗೊಲ್ಲರಿಗೆ (ಅದರಲ್ಲೂ ಜುಂಜಪ್ಪ ತಾಳಿಕಟ್ಟುವ 'ಮಾರನೋರು' ಒಳ ಬೆಡಗಿಗೆ ಸೇರಿದವನು)'ತರಿಮರ ಕಡಿದಿದೆ', ಈಗಲೂ 'ಕಂಬೇರ'ನ್ನು ಜುಂಜಪ್ಪನಿಗೆ ವಿಷ ಇಟ್ಟ ಕುಲದವರು ಎಂದು ಹಂಗಿಸುತ್ತಾರೆ. ವಿಚಿತ್ರವೆಂದರೆ ಶಾಪಕೊಡಬೇಕಾದ ಜುಂಜಪ್ಪನೇ 'ಕೊಂಬೆಗೆ ಕೊಂಬೆಚ್ಚಾಲಿ, ರೆಂಬೆಗೆ ರೆಂಬೆ ಬೆಳೆಯಲಿ, ನಿಮ್ಮೆಣ್ಣೆಚ್ಚಲಿ ನನ ಮಗಳೆ, ಗಂಡು ಬೆಳೀಲಿ ತಾಯಿ, ಕುಂಬಳ ಕುಡಿಯಿಕ್ಕಿದಂಗೆ ನಿಮ್ಮ ಸಂತಾನೆಚ್ಚಾಲಿ, ನಮ್ಮ ಮನೆಗಿನ್ನ ನಿಮ್ಮ ಮನೆ ಒಂದು ಹೆಚ್ಚಗಿರಲಿ, ನನ್ನ ಮೊದಲ ಪೂಜೆ ನಿಮ್ಮಿಂದಾಗಲಿ' ಎಂದು ಕಂಬೇರ ಸೋದರ ಮಾವಂದಿರಿಗೆ ಕೊಟ್ಟಿದ್ದ ತಂಗಿಗೆ ವಾಗ್ದಾನ ಕೊಡುತ್ತಾನೆ ! (ಪುರಂದರ ದಾಸರೂ ಶತ್ರುಗಳಿಗೆ ಹೀಗೇ ಹಾರೈಸಿದ್ದಾರೆ).

ಮಹಾಸತಿ ವಡ್ಡಗೆರೆ ನಾಗಮ್ಮನಿಗೆ (ಈಕೆ ಕುಂಚಿಟಿಗರ 'ಎಲೆಯವರು' ಬೆಡಗಿಗೆ ಸೇರಿದ ಹೆಣ್ಣು, ಮಧುಗಿರಿ ತಾಲ್ಲೂಕಿನ ಹೊಸಕೆರೆಯಿಂದ ಕೊರಟಗೆರೆ ತಾಲ್ಲೂಕಿನ ವಡ್ಡಗೆರೆಗೆ ಬಸಲೇನವರ ಬೆಡಗಿಗೆ ಕೊಟ್ಟಿತ್ತು) ನಡೆದುಕೊಳ್ಳುವ ಒಕ್ಕಲಿಗರು ಈಗಲೂ ಸಮೀಪದ ತುಂಬಾಡಿಯ ದಿನ್ನೆ ಹತ್ತುವುದಿಲ್ಲ. ತುಂಬಾಡಿ ಊರಿನೊಳಕ್ಕೂ ಹೋಗುವುದಿಲ್ಲ. ಆಗ ತುಂಬಾಡಿಯಲ್ಲಿದ್ದ ಪಾಳೆಯಗಾರನೊಬ್ಬನಿಂದ ನಾಗಮ್ಮನ ಗಂಡ ಹತನಾಗುತ್ತಾನೆ. ತಮ್ಮ ಕುಲದವರನ್ನು ಕೊಂದ ವ್ಯಕ್ತಿಯ ಊರಿಗೇ ಈ ಒಕ್ಕಲಿನವರು ಬಹಿಷ್ಕಾರ ಹಾಕಿದ್ದಾರೆ. ಆದರೆ ಇತ್ತೀಚೆಗೆ ಈ ಕಟ್ಟುಗಳು ಶಿಥಿಲಗೊಳ್ಳುತ್ತಿವೆ.

ಆದರೂ ಹೀಗೆ 'ತರಿಮರ'ದ ಅನೇಕ ಪ್ರಕರಣಗಳು ನಮ್ಮ ಮಧ್ಯೆ ಇನ್ನೂ ಉಸಿರಾಡುತ್ತಿವೆ.

* ಸಾಹಿತ್ಯ ಸಂವಾದ-58, ಏಪ್ರಿಲ್ ಜೂನ್ 2002.

* ಡಿ.ಕೆ. ರಾಜೇಂದ್ರ ಅವರ 'ಹೊನ್ನಹೊಂಬಾಳೆ' (ಸಂಭಾವನಾ ಗ್ರಂಥ)



# ಕುರುಬ ಮೂಲದ ಕುಂಚಿಟಿಗರ ಸಾಂಸ್ಕೃತಿಕ ವೀರ

'ಕುರುಬ ಕೆಟ್ಟು ಕುಂಚಿಗನಾದ' ಎಂಬ ಗಾದೆಯೊಂದು ಹಳೆಯ ಮೈಸೂರು ಪ್ರಾಂತ್ಯದಲ್ಲಿರುವ ಚನ್ನಪಟ್ಟಣ ಸುತ್ತಿನ ಸೀಮೆಯಲ್ಲಿ ಪ್ರಚಾರದಲ್ಲಿರುವುದಾಗಿ ಹಿರಿಯ ಜಾನಪದ ವಿದ್ವಾಂಸರಾದ ಡಾ. ಕಾಳೇಗೌಡ ನಾಗವಾರರು ಒಮ್ಮೆ ಮಾತಿನ ಮಧ್ಯೆ ಹೇಳಿದ್ದರು. ನನಗೆ ಈ ಗಾದೆ ಕೇಳಿ ಆಶ್ಚರ್ಯವಾಯಿತು. 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಮತ್ತೊಂದು ಗಾದೆ ನೆನಪಿಗೆ ಬಂದು, ನನ್ನನ್ನು ತೀವ್ರ ಚಿಂತನೆಗೆ ಹಚ್ಚಿತು.

ಕುಂಚಿಟಿಗರು-ವಕ್ಕಲಿಗ ಜನಾಂಗದ ಪ್ರಮುಖ ಶಾಖೆಗಳಲ್ಲೊಂದು. ಈ ಜನ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಹಿರಿಯೂರು ತಾಲ್ಲೂಕು, ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕು ಹಾಗೂ ತುಮಕೂರು ಜಿಲ್ಲೆಯ ಪಾವಗಡ, ಮಧುಗಿರಿ, ಶಿರಾ, ಕೊರಟಗೆರೆ, ತುಮಕೂರು, ಗುಬ್ಬಿ ತಾಲ್ಲೂಕುಗಳಲ್ಲಿ ಅತಿದಟ್ಟವಾಗಿ ನೆಲಸಿದ್ದಾರೆ. ಆದರೆ ಈ ಭಾಗದಲ್ಲೆಲ್ಲೂ ಈ ಗಾದೆ ಪ್ರಚಾರದಲ್ಲೇ ಇಲ್ಲ! ಬೆಂಗಳೂರು ಜಿಲ್ಲೆಯ ರಾಮನಗರ ಸುತ್ತಿನ ಬೆರಳೆಣಿಕೆಯ ಕೆಲವು ಹಳ್ಳಿಗಳಲ್ಲಿ ಕುಂಚಿಟಿಗರು ಅತಿವಿರಳವಾಗಿ ನೆಲಸಿದ್ದಾರೆ. ಆ ಭಾಗದಲ್ಲೆಲ್ಲಾ ಗಂಗಡಿಕಾರ ಒಕ್ಕಲಿಗರೇ ಬಹುಸಂಖ್ಯಾತರು. ಇಂಥ ಅತಿವಿರಳ ಜನಸಮುದಾಯದ ಪ್ರದೇಶದಲ್ಲಿ ಹುಟ್ಟಿಕೊಂಡ ಈ ಗಾದೆ ಇತಿಹಾಸವೊಂದನ್ನು ತನ್ನ ಗರ್ಭದಲ್ಲಿ ಧರಿಸಿಕೊಂಡಂತೆ ಕಾಣುತ್ತದೆ. ಅದರ ಇತಿಹಾಸವನ್ನು ಬಗೆಯುವ ಮೊದಲು, ಈ ಗಾದೆ ಈ ಪ್ರದೇಶದಲ್ಲೇ ಹುಟ್ಟಿಕೊಳ್ಳಲು ಕಾರಣವೇನು ಎಂಬ ಪ್ರಶ್ನೆ ನನ್ನ ತಲೆ ತಿನ್ನತೊಡಗಿತು.

ಆ ಭಾಗದಲ್ಲಿ ಅಲ್ಪಸಂಖ್ಯಾತರಾದ ಕುಂಚಿಟಿಗರು, ತಾವೂ ಕೂಡ ವಿಶಾಲವಾದ ವಕ್ಕಲಿಗ ಸಮುದಾಯದ ಒಂದು ಭಾಗವೇ ಎಂದು ಬಹು ಸಂಖ್ಯಾತರಾದ ಗಂಗಡಿಕಾರರ ಮಧ್ಯೆ ಹೇಳಿಕೊಂಡಾಗ, ಬಹುಶಃ ಅವರು 'ಕುರುಬ ಮೂಲದಿಂದ ಹುಟ್ಟಿದ ನೀವೆಂತಹ ವಕ್ಕಲಿಗರು' ಎಂಬ ಅಪಹಾಸ್ಯದ ಧ್ವನಿಯಲ್ಲಿ ಈ ಗಾದೆ ಹುಟ್ಟಿಕೊಂಡಿರಬೇಕು ಎನಿಸುತ್ತದೆ. ಅದೇ ಇಂತಹ ಗಾದೆ ಕುಂಚಿಟಿಗರು ಬಹು ಸಂಖ್ಯಾತರಾಗಿರುವ ಶಿರಾ ಸೀಮೆ ಭಾಗದಲ್ಲಿ ಹುಟ್ಟಿಕೊಳ್ಳಲು ಸಾಧ್ಯವಿಲ್ಲ. ಇದೇ ಶಿರಾ ಸೀಮೆ ಭಾಗದಲ್ಲಿ ಕುಂಚಿಟಿಗರಷ್ಟೇ ಸಮಸಂಖ್ಯೆಯಲ್ಲಿ ಕುರುಬರು ನೆಲೆಸಿದ್ದರೂ ಈ ಗಾದೆ ಹುಟ್ಟಿಕೊಳ್ಳುವ ಪ್ರಸಂಗ ಬಂದಿಲ್ಲ. ಕಾರಣ

ಸಾಮಾಜಿಕ ಸ್ಥಿತಿಯಲ್ಲಿ ಕುಂಚಿಟಿಗರಿಗಿಂತ ಸ್ವಲ್ಪ ಕೆಳಗಿರುವ ಕುರುಬರು, ಸಾಮಾಜಿಕ-ಆರ್ಥಿಕ-ರಾಜಕೀಯ ಹಂತದಲ್ಲಿ ಮೇಲಿರುವ ಕುಂಚಿಟಿಗ ಮೂಲದ ವ್ಯಕ್ತಿಗಳ ಬಗ್ಗೆ ಹೀಗೆ ಲಘುವಾಗಿ ಮಾತನಾಡುವ ಸ್ಥಿತಿ ಇಲ್ಲ. ಆದರೆ ಸಾಮಾಜಿಕವಾಗಿ ಮೇಲು ಹಂತದಲ್ಲಿರುವ ಕುಂಚಿಟಿಗರು ತಮ್ಮ ಕುರುಬ ಮೂಲದ ಬಗ್ಗೆ ಮುಜುಗರಪಟ್ಟುಕೊಳ್ಳುವುದನ್ನು ನಾನು ಕಂಡಿದ್ದೇನೆ. ಹೀಗಾಗಿ ಹುಟ್ಟಿನ ಮೂಲವನ್ನು ತಿರುಚುವ ಅನೇಕ ಐತಿಹ್ಯಗಳೂ ಹುಟ್ಟಿಕೊಂಡಿವೆ. ಆದರೆ ಇತಿಹಾಸದ ಕಾಲಘಟ್ಟದಲ್ಲಿ ಜಾತಿ-ಜಾತಿಗಳ ಮಧ್ಯೆ ಇಂಥ ಅನೇಕ ಹೊಂದಾಣಿಕೆಗಳು ಆಗಿರುತ್ತವೆ, ಅದು ಆಯಾ ಸಂದರ್ಭದ ಅನಿವಾರ್ಯ ಕೂಡ. ಕಾಡುಗೊಲ್ಲರ ಮೇಕೆಗಳು ಬಂದು ವಿಜಯನಗರದ ರಾಜರ ಅರಮನೆಯ ಮಾಳಿಗೆ ಹತ್ತಿ ದಾಂಧಲೆ ಮಾಡಿದ್ದರಿಂದ, ಕಾಡುಗೊಲ್ಲರ ಯಜಮಾನರನ್ನು ಬಂಧಿಸಿ ಸೆರೆಮನೆಗೆ ತಳ್ಳುತ್ತಾರೆ. ಇವರನ್ನು ಸೆರೆಯಿಂದ ಬಿಡಿಸಲು ಅವರ ಹೆಣ್ಣು ಮಕ್ಕಳು ರಾಜನ ಖಾಸಾ ಕ್ಷೌರಿಕರ ಮೊರೆ ಹೋಗುತ್ತಾರೆ. ಕ್ಷೌರಿಕರ ಮಧ್ಯಸ್ಥಿಕೆಗೆ ಮಣಿದ ರಾಜ ಕಾಡುಗೊಲ್ಲರನ್ನು ಬಂಧನದಿಂದ ಬಿಡುಗಡೆಗೊಳಿಸುತ್ತಾನೆ. ಇದಕ್ಕಾಗಿ ಹೆಣ್ಣು ಮಕ್ಕಳು ಆ ಕ್ಷೌರಿಕರನ್ನೇ ಮದುವೆಯಾಗಬೇಕಾಗಿ ಬರುತ್ತದೆ. ಈ ಪ್ರಕ್ರಿಯೆಯನ್ನು 'ರಾಮೇಗೌಡನ ಕುಲ'ದ ಕವಲಿನಲ್ಲಿ ಗುರುತಿಸುತ್ತಾರೆ. ಕಾಡುಗೊಲ್ಲರ ಕಲ್ಲಿ ಬುಳ್ಳಣ್ಣ ಬೇಡರ ಕರಿಯೋಬಿಯನ್ನು ಮದುವೆಯಾಗಿದ್ದರಿಂದ ಕರಡಿಗೊಲ್ಲರಲ್ಲಿ 'ತಾಳಿಕಟ್ಟದ ಚಿತ್ತಗೊಲ್ಲರ' ಬೆಡಗು ಹುಟ್ಟಿಕೊಳ್ಳಲು ಕಾರಣವಾಗುತ್ತದೆ. ಶೀಲವಂತ ಲಿಂಗಾಯಿತರೇ ಕಾಡುಗೊಲ್ಲರಾಗಿದ್ದರಿಂದ 'ಶೀಲುವಾಡಿ ಗೊಲ್ಲರು' ಎಂಬ ಹೊಸ ಬೆಡಗು ಹುಟ್ಟುತ್ತದೆ.

ಈ ಗಾದೆ ನಮ್ಮನ್ನು ಇತಿಹಾಸದ ಘಟನೆಯೊಂದರತ್ತ ಬೊಟ್ಟು ಮಾಡಿ ತೋರಿಸುತ್ತದೆ. ಚಿತ್ರದುರ್ಗ, ತುಮಕೂರು ಪ್ರಾಂತ್ಯದಲ್ಲಿ ನೆಲೆಸಿರುವ ಕುಂಚಿಟಿಗರು, ಕಾಡುಗೊಲ್ಲರು ಕುರುಬರು ಮತ್ತು ಮ್ಯಾಸಬೇಡರು ಒಂದೇ ಬಗೆಯ ವಲಸೆಯ ಕತೆಯನ್ನು ಹೇಳುವುದು ಕುತೂಹಲಕಾರಿಯಾಗಿದೆ. ಇವರೆಲ್ಲ ಡೆಲ್ಲಿಯಿಂದ ಹೊರಟು ಗಂಗಾ ನದಿಯನ್ನು ದಾಟಿಕೊಂಡು ದಕ್ಷಿಣಕ್ಕೆ ಬಂದು ಈಗ ಇರುವ ಭಾಗಗಳಲ್ಲಿ ನೆಲಸಿದವರೆಂದು ಹೇಳಿಕೊಳ್ಳುತ್ತಾರೆ. ಹೀಗೆಂದು ಐತಿಹ್ಯಗಳಲ್ಲದೆ ಅನೇಕ ಲಿಖಿತ ಮಾಹಿತಿಗಳೂ ದೊರೆಯುತ್ತವೆ. ಹಾಗಾದರೆ ಇವರು ನಿಜಕ್ಕೂ ದಿಲ್ಲಿಯಿಂದ ವಲಸೆ ಬಂದವರೇ? ವಲಸೆ ಬರುವಂತಹ ಅನಿವಾರ್ಯವಾದರೂ ಏನಿತ್ತು? ಕುಂಚಿಟಿಗರ ಐತಿಹ್ಯಗಳಲ್ಲಿ ದೊರೆಯಬಹುದಾದ ವಿವರಗಳನ್ನು ಹೀಗೆ ಸಂಗ್ರಹಿಸ ಬಹುದು.

ಇವರು ಇಂದ್ರಪ್ರಸ್ಥದ ಬಳಿಯ ದ್ವಾರಕಾಪುರ (ಇದು ಕೃಷ್ಣನ ದ್ವಾರಕೆ ಇರಲಾರದು) ದಲ್ಲಿ ಇದ್ದರು. ಉಂಡೆಪುತ್ತರಾಯ ರಾಜನಾಗಿದ್ದರೆ, ಧಾನ್ಯದ ಧನಿಕರಾಯ ಪ್ರಧಾನಿಯಾಗಿದ್ದ. ಇವರ ವೃತ್ತಿ ಪಶುಪಾಲನೆ, ಇದರ ಉತ್ಪನ್ನವಾದ ಹಾಲು-ಮೊಸರು-ತುಪ್ಪ ಮಾರಿಕೊಂಡು ಶ್ರೀಮಂತಿಕೆಯಿಂದ ಮೆರೆಯುತ್ತಿದ್ದರು. ತುಪ್ಪವನ್ನು ಗಾರೆಗಚ್ಚಿನ ನೆಲ ಹಗೇವುಗಳಲ್ಲಿ ಸಂಗ್ರಹಿಸುತ್ತಿದ್ದರು. ರಾಮಟಂಕೆ ವರಹಗಳು ಇವರಲ್ಲಿ ಕಾಲು ಮುರಿದುಕೊಂಡು ಬಿದ್ದಿದ್ದವು. ಅತ್ಯಂತ ಸುಂದರಿಯರಾದ ಇವರ ಹೆಣ್ಣುಮಕ್ಕಳು ಬಾದಶಹನ ಪಟ್ಟಣಕ್ಕೆ ಹಾಲು ಮಾರಲು

ಹೋಗಿದ್ದಾಗ ಅವನ ಕಣ್ಣಿಗೆ ಬಿದ್ದರು. 'ನಿಕಾ' ಮಾಡಿಕೊಡಲು ಕೇಳಿದಾಗ 'ಹಾಲಿನಂತಹ ಕುಲ ನೀರಾಗುತ್ತದೆ' ಎಂದು ತಿರಸ್ಕರಿಸಿದರು. ಸಮಯ ಕಾಯುತ್ತಿದ್ದ ಬಾದಶಹ ಇವರ ಹೆಣ್ಣುಗಳು ಹಾಲು ಮಾರಲು ಹೋದಾಗ ಸೆರೆ ಹಿಡಿಯಲು ಪ್ರಯತ್ನಿಸಿದ. ದೊಡ್ಡಭೈರಮ್ಮ ಎಂಬ ಹೆಣ್ಣು ಮಾತ್ರ ಸೆರೆ ಸಿಕ್ಕರೆ, ಉಳಿದವರು ತಪ್ಪಿಸಿಕೊಂಡು ಬಂದು ಸುದ್ದಿ ಕೊಟ್ಟರು. ಇನ್ನು ಇಲ್ಲಿಯೇ ಇದ್ದರೆ ಬಾದಶಹ ತಮ್ಮ ಹಾಲಿನಂತಹ ಕುಲವನ್ನು ಕೆಡಿಸಿ ನೀರು ಮಾಡಿಬಿಡುತ್ತಾನೆಂದು ಹೆದರಿ ರಾತೋರಾತ್ರಿ ನೂರಾರು ಬಂಡಿಗಳಲ್ಲಿ ತಮ್ಮ ಸಕಲ ವಸ್ತುಗಳನ್ನು ತುಂಬಿಕೊಂಡು ವಲಸೆ ಹೊರಟರು. ಆಗ ಕುಂಚಿಟಿಗ ಗೌಡರ ಜೊತೆಯಲ್ಲಿ ಎಲ್ಲ ಜಾತಿಯ ಕೈವಾಡದವರೊಂದಿಗೆ ಕಾಡುಗೊಲ್ಲರ ಚಂದಮುತ್ತಿ, ಮಗ್ಗದ ಕುರುಬರ ಬಸವೇಗೌಡ, ತಳವಾರ ರಾಮಣ್ಣ ಮುಂತಾಗಿ ಹೊರಟು ಬಂದರು. ಈ ವಲಸೆಯ ನೇತೃತ್ವವನ್ನು ಕುಂಚಿಟಿಗರು-ಕಾಡುಗೊಲ್ಲರು-ಮ್ಯಾಸಬೇಡರಿಗೆ ಗುರುಗಳಾದ ಶ್ರೀಗುರು ಸಾರ್ವಭೌಮೇಶ್ವರ ಸ್ವಾಮಿಗಳು ವಹಿಸಿದ್ದರು. (ಇವರು ಚಳ್ಳಕೆರೆ ತಾಲ್ಲೂಕಿನ ಗೋಸಿಕೆರೆಯಲ್ಲಿ ನೆಲಸಿ, ಅಲ್ಲಿಯೇ ಜೀವಸಮಾಧಿಗೊಳ್ಳುತ್ತಾರೆ. ಅವರ ಸಮಾಧಿಯ ಮೇಲೆ ಅಪೂರ್ವವಾದ ಶಿವಲಿಂಗವನ್ನು ಸ್ಥಾಪಿಸಿದ್ದು, ಲಿಂಗದ ಮುಂಭಾಗದಲ್ಲಿ ಯೋಗ ಭಂಗಿಯಲ್ಲಿ ಕುಳಿತ ಶಿವಷಟ್ ಚಕ್ರಗಳನ್ನು ಬಿಡಿಸಿದ್ದಾರೆ. ಯೋಗಭಂಗಿಯ ತಳಭಾಗದಲ್ಲಿ ಬೀಜಾಕ್ಷರಗಳನ್ನು ಕೆತ್ತಲಾಗಿದೆ. ಬಹುಶಃ ಈ ಬಗೆಯ ಶಿವಲಿಂಗ ಅತ್ಯಂತ ವಿರಳವಾದುದು.)



ಆದರೆ ಗಂಗಾನದಿ ತುಂಬಿ ಹರಿಯುತ್ತಿತ್ತು. ಗಂಗೆಯನ್ನು ದಾರಿ ಕೇಳಲಾಗಿ 'ನರಬಲಿ' ಕೋರುತ್ತಾಳೆ. ಯಾರೂ ಮುಂದೆ ಬಾರದಿದ್ದಾಗ ಅಲ್ಲೆ ಕುರಿ ಕಾಯುತ್ತಿದ್ದ ಕುರುಬರ ಬೊಪ್ಪರಾಯ 'ತಾನು ಗಂಗೆಗೆ ಅರ್ಪಿತವಾಗುತ್ತೇನೆ. ಆದರೆ ಸತ್ತ ನನ್ನ ಮುಂಡಕ್ಕೆ ನಿಮ್ಮ

ಕುಂಚಿಟಿಗರ ಕುಲದ ಹೆಣ್ಣುಕೊಟ್ಟು ಧಾರೆ ಎರೆಯಬೇಕು' ಎಂಬ ಷರತ್ತು ಹಾಕುತ್ತಾನೆ. ಬೇರೆ ದಾರಿಯಿಲ್ಲದೆ ಉಂಡೆಎತ್ತರಾಯ ತನ್ನ ಮಗಳು ಚಿಕ್ಕಭೈರಮ್ಮನನ್ನು ಕೊಟ್ಟು ಮದುವೆ ಮಾಡುತ್ತೇನೆ ಎಂದು ವಾಗ್ದಾನ ಕೊಡುತ್ತಾನೆ. ಬೊಪ್ಪರಾಯ ಶಿರಸ್ಸನ್ನು ಕತ್ತರಿಸಿ ಗಂಗೆಗೆ ಆರತಿ ಬೆಳಗುತ್ತಾನೆ, ಗಂಗೆ ದಾರಿ ಕೊಡುತ್ತಾಳೆ: ಎಲ್ಲ ಜನಗಳೂ ಹೊಳೆ ದಾಟುತ್ತಾರೆ. ಬಾದಶಹ ಇವರನ್ನು ಹಿಡಿಯಬೇಕೆಂದು ಅಟ್ಟಿಸಿಕೊಂಡು ಬರುವ ವೇಳೆಗೆ ನದಿ ಮತ್ತೆ ತುಂಬಿ ಹರಿಯುತ್ತಿರುತ್ತದೆ. ಹತಾಶನಾದ ಬಾದಶಹ ಹಿಂತಿರುಗುತ್ತಾನೆ.

ಜನ ಈಚೆ ದಡ ಸೇರಿದ ಮೇಲೆ ಉಂಡೆಎತ್ತರಾಯ ಕೊಟ್ಟ ಮಾತಿನಂತೆ ಬೊಪ್ಪರಾಯನನ್ನು ಕುಂಚಿಟಿಗರ ಕುಲಕ್ಕೆ ಹಾಕಿಕೊಂಡು ಸತ್ತ ಮುಂಡಕ್ಕೆ ಮಗಳನ್ನು ಧಾರೆ ಎರೆಯುತ್ತಾನೆ. ಆಶ್ಚರ್ಯಕರ ಎಂಬಂತೆ ಬೇರೆಯಾದ ರುಂಡ ಬಂದು ಮತ್ತೆ ಮುಂಡದ ಜೊತೆ ಕೂಡಿ ಬೊಪ್ಪರಾಯ ಬದುಕುತ್ತಾನೆ. ಹೀಗೆ ಜಲಧಿಯನ್ನು ಭೇಧಿಸಿ ದಾರಿ ಕೊಡಿಸಿಕೊಟ್ಟ ಬೊಪ್ಪರಾಯನಿಗೆ ಮುಂದಕ್ಕೆ ಜಲಧಿ ಬೊಪ್ಪರಾಯ ಎಂಬ ಹೆಸರೇ ನಿಲ್ಲುತ್ತದೆ. (ಬೈಬಲ್‌ನಲ್ಲಿ ಸಮುದ್ರ ಇಬ್ಭಾಗವಾಗಿ ದಾರಿ ಕೊಡುವ ಪ್ರಸಂಗವನ್ನು ನೆನೆಯಬಹುದು. 'ಟೆನ್ ಕಮಾಂಡ್‌ಮೆಂಟ್' ಚಲನಚಿತ್ರದಲ್ಲಿ ಈ ಘಟನೆಯನ್ನು ನೋಡಬಹುದು.) ಹೀಗಾಗಿ ಇವನ ಸಂತತಿಯಲ್ಲಿ ಹುಟ್ಟಿದವರನ್ನು 'ಜಲದೇನವರು' ಎಂಬ ಗೋತ್ರ (ಬೆಡಗು)ದಿಂದ ಗುರುತಿಸುತ್ತಾರೆ. ಇಡೀ ಜನಾಂಗವನ್ನು ಆಪತ್ತಿನಿಂದ ಪಾರು ಮಾಡಿದ ಜಲಧಿ ಬೊಪ್ಪರಾಯ ಎಲ್ಲ ಜಾತಿಯವರ ಕಣ್ಮಣಿಯಾಗುತ್ತಾನೆ. ಆರಾಧ್ಯ ದೈವವಾಗುತ್ತಾನೆ. ಅಂದಿನಿಂದ ಕುಂಚಿಟಿಗರಿಂದ ಹಿಡಿದು ಕಾಡುಗೊಲ್ಲರು, ಮ್ಯಾಸಬೇಡರು, ಕುರುಬರವರೆಗೆ ಮದುವೆ ಮುಂತಾದ ಶುಭ ಕಾರ್ಯಗಳಲ್ಲಿ ಈತನಿಗೆ ಪ್ರಥಮ ವೀಳ್ಯದ ಗೌರವ ಸಲ್ಲುತ್ತದೆ. ಕುರುಬ ಕುಲವನ್ನು ಗೌರವಿಸುವ ಸಂಕೇತವಾಗಿ ಮದುವೆಗಳಲ್ಲಿ ಈ ಹಿಂದೆ ಕಟ್ಟುತ್ತಿದ್ದ ಹತ್ತಿ ಕಂಕಣವನ್ನು ವಿಸರ್ಜಿಸಿ 'ಉಣ್ಣೆಯ ಕಂಕಣ'ವನ್ನು ಕಟ್ಟುತ್ತಾರೆ; ಇದನ್ನು 'ಕುರುಬ ಕಂಕಣ' ಎಂದೇ ಕರೆಯಲಾಗುತ್ತದೆ. ಇಂದಿಗೂ ಕುಂಚಿಟಿಗರ ಮದುವೆಗಳ 'ವೀಳ್ಯ ಶಾಸ್ತ್ರ'ದ ಸೋಬಾನೆ ಪ್ರಾರಂಭವಾಗುವುದೇ 'ಜಲಧಿ ಬೊಪ್ಪರಾಯ, ಉಂಡೆಎತ್ತರಾಯ' ಎಂಬ ಸೊಲ್ಲಿನಿಂದ.

ಕುರುಬರ ಜಲಧಿ ಬೊಪ್ಪರಾಯ ಕುಂಚಿಟಿಗರ ಸಾಂಸ್ಕೃತಿಕ ವೀರನಾಗಿ ರೂಪುಗೊಂಡು ಬೆಳೆದ ಬಗೆಯನ್ನು ಚರ್ಚಿಸುವ ಮುನ್ನ ದಿಲ್ಲಿಯಿಂದ ಹೊರಟು ಗಂಗಾನದಿಯನ್ನು ದಾಟಿದೆವೆಂದು ಹೇಳಿಕೊಳ್ಳುವ ಜನ ನಿಜಕ್ಕೂ ದಿಲ್ಲಿ ಮೂಲದವರೇ? ಅವರು ದಾಟಿದ್ದು ನಿಜಕ್ಕೂ ಗಂಗಾನದಿಯನ್ನೇ? ಹಾಗಾದರೆ ಯಾವ ಕಾಲದಲ್ಲಿ ಈ ಘಟನೆ ನಡೆಯಿತು? ಎಂಬುದನ್ನು ಪರಿಶೀಲಿಸೋಣ.

ದಿಲ್ಲಿ ಮೂಲದವರೆಂದು ಹೇಳಿಕೊಳ್ಳುವ ಇವರ ಭಾಷೆ-ದ್ರಾವಿಡ ಭಾಷೆಗಿಂತ ಬೇರೆ ಯಾವುದಾದರೂ ಇರಬೇಕಿತ್ತು. ಆದರೆ ಕನ್ನಡ-ತೆಲುಗು ಮಾತಾಡುವ ಇವರು ಬಹುಶಃ ಉತ್ತರ ಕರ್ನಾಟಕದ ಭಾಗದಿಂದ ದಕ್ಷಿಣ ಕರ್ನಾಟಕಕ್ಕೆ ಬಂದಿರಬೇಕು. ಇವರ ಕುಲ ಕೆಡಿಸಲು ಪ್ರಯತ್ನಿಸಿದ ಬಾದಶಹ ದಿಲ್ಲಿಯವನಲ್ಲ, ಬಹುಶಃ ಬಿಜಾಪುರದ

ಆದಿಲ್‌ಷಾಹಿಗಳು ಇರಬೇಕು. ಹೀಗಾಗಿ ಇವರು ದಾಟಿದ್ದು ಗಂಗೆಯಲ್ಲ-ತುಂಗಭದ್ರಾ ನದಿಯೇ ಇರಬೇಕು. ಹೀಗೆ ವಲಸೆ ಬಂದ ಜನ ದಕ್ಷಿಣ ಕರ್ನಾಟಕದ ಕೆಲವು ಭಾಗದಲ್ಲಿ ದಟ್ಟವಾಗಿ, ಕೆಲವು ಕಡೆ ವಿರಳವಾಗಿ ತೀರಾ ದಕ್ಷಿಣದಿಂದ ತಮಿಳುನಾಡಿನವರೆಗೂ ಈ ಜನ ಹರಡಿಕೊಂಡರು. ತಮಿಳುನಾಡಿನ ಮಧುರೈ ಜಿಲ್ಲೆಯ ಕಂಬಂ, ತೇಕಡಿಯ ಭಾಗದಲ್ಲಿ ನೆಲಸಿರುವ ಕುಂಚಿಟಿಗರು ಈಗಲೂ ತಾವು ತುಂಗಭದ್ರಾ ನದಿ ದಾಟಿ ಬಂದವರೆಂದು ಸ್ಪಷ್ಟವಾಗಿ ಹೇಳಿಕೊಳ್ಳುತ್ತಾರೆ. ಏಕೆಂದರೆ ನಮ್ಮ ಜನಪದರಿಗೆ ಹರಿಯುವ ನೀರೆಲ್ಲ ಗಂಗೆಯೇ, ಹೀಗಾಗಿ ಇವರು ಗಂಗೆಯೆಂದು ಇದನ್ನೇ ಕರೆದಿರಬೇಕು. ಈ ಘಟನೆಯ ಕಾಲವನ್ನು ಸರಿಸುಮಾರು 12-13ನೇ ಶತಮಾನ ಎಂದು ಲಿಖಿತ ದಾಖಲೆಗಳು ಹೇಳುತ್ತವೆ. ಕಾಲದ ಬಗ್ಗೆ ಖಚಿತ ತೀರ್ಮಾನಕ್ಕೆ ಬರಲು ಇನ್ನೂ ಸಾಧ್ಯವಾಗಿಲ್ಲ.

*    *    *

ಬೊಪ್ಪರಾಯ ಜನಾಂಗ ಉಳಿಸಿದ ವೀರನಾಗಿ ಪೂಜ್ಯನಾದ ಮೇಲೆ ಅವನ ಹುಟ್ಟನ್ನು ಪೌರಾಣೀಕಗೊಳಿಸುತ್ತಾರೆ. ಅವನು ಗೋವಿನಿಂದ ಹುಟ್ಟಿದವನು, ಹುಟ್ಟಿನಿಂದಲೇ ವ್ಯಾಸನಂತೆ ತಪಸ್ವಿಯಾಗಿ ಪೊದೆಯೊಂದರಲ್ಲಿ ಕುಳಿತಂತೆ ಅಲೌಕಿಕವಾದ ರೀತಿಯಲ್ಲಿ ಚಿತ್ರಿಸುತ್ತಾರೆ. ಮತ್ತೊಂದು ಐತಿಹ್ಯದಂತೆ ನದಿ ತೀರದಲ್ಲಿ ಕುರಿ ಕಾದುಕೊಂಡಿದ್ದನೆಂಬಂತೆ ಚಿತ್ರಿಸುತ್ತಾರೆ. ಮತ್ತೊಂದು ಐತಿಹ್ಯ ಅವನು ಕುರುಬರವನೇ ಅಲ್ಲ. ಕುರುಬರಿಗೆ ಉಣ್ಣೆಯ ಕತ್ತರಿ, ಕುಂಚವನ್ನು ಕೊಟ್ಟದ್ದರಿಂದ ಅವನನ್ನು ಕುರುಬರೆಂದು ತಪ್ಪಾಗಿ ತಿಳಿಯಲಾಗಿದೆ ಎಂದು ಹೇಳುತ್ತದೆ. ಮತ್ತೊಂದು ಐತಿಹ್ಯದಂತೆ 'ಕುಂಚಿಟಿಗರು' ಎಂಬ ಹೆಸರೇ ಕುರುಬರು ಕಂಬಳಿ ಮಾಡಲು ಬಳಸುವ ಕುಂಚದಿಂದ ಬಂದಿದ್ದು; ಇವರು ಕುರುಬರ ಬಳಿ ಕಂಬಳಿಗೆ 'ಸರಿ' ಹಚ್ಚಿ ಕುಂಚ ಆಡಿಸುವ ಕಾಯಕ ಮಾಡಿಕೊಂಡಿದ್ದರು ಎಂದು ಹೇಳುತ್ತದೆ. ಕುಂಚಿಟಿಗರು ಪದದ ನಿಷ್ಪತ್ತಿ ಇನ್ನೂ ಒಗಟಾಗೇ ಉಳಿದಿದೆ. ಆದರೆ ಈ ಐತಿಹ್ಯಗಳೆಲ್ಲಾ ಕೆಲವು ನಿಗೂಢ ಕಟುಸತ್ಯಗಳನ್ನು ಗರ್ಭೀಕರಿಸಿಕೊಂಡಿವೆ ಎಂಬುದಂತೂ ಸತ್ಯ. ಕುಂಚಿಟಿಗರಲ್ಲಿ 'ಜಲದೇವರ' ಗೋತ್ರದವರು, ಬೊಪ್ಪಣ್ಣ, ಬೊಪ್ಪರಾಯ' ಎಂಬ ಹೆಸರು ಇಟ್ಟುಕೊಳ್ಳುತ್ತಾರೆ. ಹೆಂಗಸರಲ್ಲಿ ಜಲಧಿಬೊಪ್ಪರಾಯನ ತಂಗಿಯಾದ ಮುದ್ದಮ್ಮನ ಹೆಸರು ಇಟ್ಟುಕೊಳ್ಳುವುದು ರೂಢಿಯಲ್ಲಿದೆ.

ಜಲಧಿ ಬೊಪ್ಪರಾಯನನ್ನು (ಶಿರಸ್ಸು ಇಲ್ಲದ) 'ಮುಂಡದ ದೇವರು' ಎಂದು ಚಳ್ಳಕೆರೆ ತಾಲ್ಲೂಕಿನ ನಾರಾಯಣಪುರದಲ್ಲಿ ಆರಾಧಿಸುತ್ತಾರೆ. ಅವರಲ್ಲಿ 'ಮುಂಡಪ್ಪ, ಮುಂಡೀರಪ್ಪ, ಮುಂಡಮ್ಮ' ಎಂಬ ವಿಚಿತ್ರವಾದ ಹೆಸರು ಇಟ್ಟುಕೊಳ್ಳುವುದಕ್ಕೆ ಕಾರಣವನ್ನು ಈ ಕತೆಯಲ್ಲಿ ಹುಡುಕಬಹುದು.

ಈ ಮುಂಡದ ದೇವರು ಆ ಊರಿನ ಸಮೀಪದಲ್ಲೇ ಹರಿಯುವ ವೇದಾವತಿ ನದಿ ದಡದಲ್ಲಿ ಇದೆ. ಪರಿಶೀಲನೆಗೆಂದು ನಾನು ಹೋದಾಗ - ಅದೊಂದು 'ಸಿಡಿತಲೆ' ಕಲ್ಲಾಗಿತ್ತು. ಅಂತಹುದೇ ಇನ್ನೊಂದು ಕಲ್ಲು ಪಕ್ಕದಲ್ಲೇ ಇದೆ. ಇವರು ಕಲ್ಪಿಸಿಕೊಂಡಂತೆ ಅದು ಜಲಧಿಬೊಪ್ಪರಾಯನ ಶಿಲ್ಪವಾಗಿರಲಿಲ್ಲ! ಆದರೆ ಸಾಂದರ್ಭಿಕ ಸನ್ನಿವೇಶ ಅವರ

ಕಲ್ಪನೆಗೆ ಇಂಬುಗೊಟ್ಟಿತ್ತು. ನದಿ ದಡದ ಬಳಿಯ ತಲೆಕತ್ತರಿಸಿದ ಶಿಲ್ಪ - ಜಲಧಿಬೊಪ್ಪರಾಯನ ಕತೆಯೊಂದಿಗೆ ಬಹಳ ಸೊಗಸಾಗಿ ಹೊಂದಿಕೊಳ್ಳುತ್ತದೆ. ಇತಿಹಾಸದ ಶಿಲ್ಪವೊಂದು ಜನಪದ ಕತೆಯೊಂದಿಗೆ ಬೆಸೆದುಕೊಂಡು 'ಇತಿಹಾಸ ಜಾನಪದ'ವನ್ನು ಸೃಷ್ಟಿಸಿತ್ತು. ಅದೇನೆ ಇರಲಿ ಅಲ್ಲಿಯ ಜನಗಳು ಆ ಸಿಡಿತಲೆ ವೀರರ ಕಲ್ಲುಗಳಿಗೆ ದೇವಸ್ಥಾನ ಕಟ್ಟಿ ಜಲಧಿಬೊಪ್ಪರಾಯನೆಂದೇ ಪೂಜಿಸುತ್ತಿದ್ದಾರೆ.

ಜಲಧಿ ಬೊಪ್ಪರಾಯನ ಮೂಲನೆಲೆ ಇರುವುದು ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಪೂರ್ವದಂಚಿನ ಗ್ರಾಮವಾದ ಬೆಜ್ಜಹಳ್ಳಿಯಲ್ಲಿ. ಇಲ್ಲಿಯ ವಿಗ್ರಹ ವೀರಗಲ್ಲಿನ ಮಾದರಿಯಲ್ಲಿದೆ. ಬಿಲ್ಲು ಹಿಡಿದು ಗುರಿಯಿಟ್ಟ ವೀರನ ಚಿತ್ರಕಾಣಬಹುದು. ಕೆಳಭಾಗದಲ್ಲಿ ಪಶುಗಳ ಚಿತ್ರ. ಇದೇ ಶಿಲ್ಪವನ್ನು ಹೋಲುವ ಅನೇಕ ಶಿಲ್ಪಗಳು ಈ ಸುತ್ತಿನಲ್ಲೇ ಇವೆ. ಹಿರಿಯೂರು ತಾಲ್ಲೂಕಿನ ಹೊಸಹಳ್ಳಿ ಗ್ರಾಮದಲ್ಲಿ ಇರುವ ಬೆಳ್ಳೆನವರ ಬೆಡಗಿನ (ಇದು ಕುಂಚಿಟಿಗರಲ್ಲಿ ಒಂದು ಕುಲ ಅಥವಾ ಬಳಿ ಅಥವಾ ಬೆಡಗು ಅಥವಾ ಗೋತ್ರ) ಈರಬಡಪ್ಪನ ಶಿಲ್ಪ, ಪಾವಗಡ ತಾಲ್ಲೂಕಿನ ಜಂಗಮರ ಹೊಸಹಳ್ಳಿಯಲ್ಲಿರುವ ಜಲದೇವರ ಗೋತ್ರದ ವೀರನಾಗಪ್ಪನ ಶಿಲ್ಪವೂ, ಇದೇ ಮಾದರಿಯಲ್ಲಿದೆ. ಇವು ಇತಿಹಾಸ ಕಾಲದ 'ತುರುಗೋಳ್' ವೀರಗಲ್ಲುಗಳನ್ನು ನೆನಪಿಸುತ್ತವೆ.

ಬೆಜ್ಜಹಳ್ಳಿ ಜಲದೇವನವರ ಬಳಿಗೆ ಕಟ್ಟೆಮನೆ, ಬೊಪ್ಪರಾಯ ಮನೆದೇವರು. ವಲಸೆಯ ನೇತೃತ್ವ ವಹಿಸಿದ್ದ ಶ್ರೀಗುರುಸಾರ್ವಡೇಶ್ವರರು ಬೆಜ್ಜಹಳ್ಳಿಯಿಂದ ಮುಂದಕ್ಕೆ ಆಂಧ್ರಪ್ರದೇಶದ ಮಡಕಶಿರಾ ತಾಲ್ಲೂಕಿನಲ್ಲಿರುವ ಕೊವಾರೇನಹಳ್ಳಿಯಲ್ಲಿ- ಜಲಧಿ ಬೊಪ್ಪರಾಯನಿಗೇ ಗುರುವಾಗಿದ್ದ ಬೀರಲಿಂಗೇಶ್ವರನನ್ನು ಸ್ಥಾಪಿಸಿದ್ದಾರೆ. ಇದಕ್ಕೆ ಕುಂಚಿಟಿಗರ ನಲವತ್ತೆಂಟು ಗೋತ್ರದವರೂ ನಡೆದುಕೊಳ್ಳುತ್ತಾರೆ.

ಹೀಗೆ ಕುರುಬ ಮೂಲದ ಜಲಧಿಬೊಪ್ಪರಾಯ ಕುಂಚಿಟಿಗರ ಸಾಂಸ್ಕೃತಿಕ ವೀರನಾದ ಕತೆ ಜನಾಂಗೀಯ ಅಧ್ಯಯನದ ಒಂದು ಅಪೂರ್ವ ಪ್ರಸಂಗ. (ಇಲ್ಲಿ ಗೋತ್ರ, ಬೆಡಗು, ಕುಲ, ಬಳಿ ಶಬ್ದಗಳನ್ನು ಸಮಾನ ಅರ್ಥದಲ್ಲಿ ಬಳಸಲಾಗಿದೆ.)



* ಹಾಲ ತೊರೆ (ಸಂಸ್ಮರಣ ಗ್ರಂಥ), 2003
* ಕನ್ನಡ ಅಧ್ಯಯನ (ಗಾಳಿ ಸಂಚಿಕೆ), 2003

# ಚೌಡಿಕೆ ರಾಣಿ - ಉಚ್ಚಂಗಮ್ಮ

'ಹುಟ್ಟೇದೆ ಯಲ್ಲಮ್ಮನಾಗಿ
ಮಾಡಿಕೊಟ್ಟರೋ ಮದುವೆಯ ಜಮದಗ್ನಿಗೆ.....'

ಚೌಡಿಕೆ ಹಿನ್ನೆಲೆಯ 'ಎಲ್ಲಮನ ಕಾವ್ಯ'ದ ಈ ಹಾಡನ್ನು ಮೊಟ್ಟ ಮೊದಲ ಬಾರಿಗೆ ಆಕಾಶವಾಣಿಯಲ್ಲಿ ಕೇಳಿದಾಗ ರೋಮಾಂಚನಗೊಂಡೆ. ಮೋಡಿ ಮಾಡುವ ಕಂಠ. ಸ್ವರ ಏರಿಸಿ. ಇಳಿಸಿ. ಹಿಗ್ಗಿಸಿ ಹಾಡುವ ಪರಿಯಂತೂ ಅನನ್ಯವಾದದ್ದು.

ಹಾಡಿನ ಜಾಡು ಹುಡುಕುತ್ತಾ ಚಿತ್ರದುರ್ಗದ ಆಕಾಶವಾಣಿಗೆ ಎಡತಾಕಿದೆ. ಅಲ್ಲಿಯ ಗೆಳೆಯ, ಕಾರ್ಯಕ್ರಮ ನಿರ್ವಾಹಕ ರಾಮಚಂದ್ರ ನಡೆಸಿದ ಸಂದರ್ಶನ ಇದಾಗಿತ್ತು. ಹಾಡಿನ ಒಡೆಕಾತಿ ಈಗಿನ ದಾವಣಗೆರೆ ಜಿಲ್ಲೆಯ ಜಗಲೂರು ತಾಲ್ಲೂಕಿನ ನಿಬಗೂರು ಗ್ರಾಮದ ಹರಿಜನ ಕೇರಿಯ ಉಚ್ಚಂಗಮ್ಮ ಎಂದು ತಿಳಿಯಿತು. ಆಕೆಯನ್ನು ಕಾಣಬೇಕೆಂಬ ಹಂಬಲ ಕಾಡಿತು. ಆ ಗಳಿಗೆಯೂ ಕೂಡ ಬೇಗನೆ ಕೂಡಿ ಬಂತು. ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿಯ ಇಲಾಖೆ ಏರ್ಪಡಿಸಿದ್ದ ಸಮಾರಂಭವೊಂದರಲ್ಲಿ ಆಕಸ್ಮಿಕ ಭೇಟಿಯೂ ಆಯಿತು. ಹಣೆಯ ತುಂಬ ರೂಪಾಯಿ ಅಗಲದ ಕುಂಕುಮ ಹಚ್ಚಿಕೊಂಡ, ಕೂದಲೆಲ್ಲಾ ಜಟೆಕಟ್ಟಿಕೊಂಡ ಸಾಮಾನ್ಯ ರೂಪಿನ ಪೀಚು ಹೆಂಗಸು. ಐವತ್ತು ದಾಟಿದ ಹರೆಯ. ಈಕೆಯೊಳಗೇ ಇಂಥ ಅಸಾಧಾರಣ ಧ್ವನಿ ಅಡಗಿರುವುದು ಎಂದು ಆಶ್ಚರ್ಯವೂ ಆಯಿತು. ಕಾರ್ಯಕ್ರಮದ ನಂತರ ಆಕೆಯ ಬಗ್ಗೆ ಇನ್ನಷ್ಟು ವಿವರಗಳನ್ನು ತಿಳಿದುಕೊಂಡೆ. ಈಕೆಯ ಬದುಕು-ಹಾಡು ಕುರಿತು ಆಕಾಶವಾಣಿಗಾಗಿ ಯಾಕೆ 'ರೂಪಕ'ವೊಂದನ್ನು ಮಾಡಬಾರದು ಎಂಬ ಯೋಜನೆಯೊಂದನ್ನು ಗೆಳೆಯ ರಾಮಚಂದ್ರನ ಮುಂದಿಟ್ಟೆ. 'ಬಹಳ ಒಳ್ಳೆಯ ಸಲಹೆ' ಎಂದು ತಕ್ಷಣ ಒಪ್ಪಿಕೊಂಡ. ಆದರೆ ಅವನ ಧಿಡೀರ್ ವರ್ಗಾವಣೆಯಿಂದ ಆ ಕೆಲಸ ಅಲ್ಲಿಗೇ ನಿಂತಿತು. ಉಚ್ಚಂಗಮ್ಮ ಆಗಾಗ್ಗೆ ಹಾಡಾಗಿ ಕಿವಿಯಲ್ಲಿ ಗುಂಯ್‌ಗುಟ್ಟುತ್ತಿದ್ದಳು, ನೆನಪಾಗಿ ಕಾಡುತ್ತಿದ್ದಳು. ಇಂಥ ಪ್ರತಿಭಾವಂತ ಕಲಾವಿದೆಗೆ ಯಾವ ಸಹಾಯ ಮಾಡಲೂ ಸಾಧ್ಯವಾಗುತ್ತಿಲ್ಲವಲ್ಲ ಎಂದು ಕೈ ಕೈ ಹಿಸುಕಿಕೊಂಡೆ. ಹಲಕೆಲವು ಬಾರಿ ಮಿಡುಕಾಡಿದೆ..... ಮರೆವಿನ ಅಂಚಿಗೆ ಜಾರುವ ಮುನ್ನ ಅವಕಾಶವೊಂದು ಒದಗಿ ಬಂತು!

ನಾನು ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯ (1998-2001) ನಾಗಿದ್ದ ಅವಧಿಯಲ್ಲಿ ಜನಪದ ಕಲಾವಿದರನ್ನು 2000ದ ವಾರ್ಷಿಕ ಪ್ರಶಸ್ತಿಗಾಗಿ ಆಯ್ಕೆ

ಮಾಡುವ ಸಂದರ್ಭ ಒದಗಿ ಬಂದಾಗ ದಾವಣಗೆರೆ ಜಿಲ್ಲೆಯಿಂದ ಉಚ್ಚಂಗಮ್ಮನನ್ನು ಸೂಚಿಸಿದೆ. ನನ್ನ ಕಳಕಳಿಯ ಮನವಿಯನ್ನು ಅಕಾಡೆಮಿ ಅಧ್ಯಕ್ಷರಾದ ಡಾ. ಕಾಳೇಗೌಡ ನಾಗವಾರ ಅವರು ಪುರಸ್ಕರಿಸಿ ಪ್ರಶಸ್ತಿಯನ್ನು ಘೋಷಿಸಿಯೇ ಬಿಟ್ಟರು.

ಹೀಗಾಗಿ ಹಲವು ವರ್ಷಗಳ ಹಿಂದೆ ಕಂಡ ಉಚ್ಚಂಗಮ್ಮನನ್ನು ಆಕೆಯ ಹುಟ್ಟೂರಿನಲ್ಲಿ ಕಂಡು ಪ್ರಶಸ್ತಿಯ ಸುದ್ದಿ ತಿಳಿಸಿ ಛಾಯಾಚಿತ್ರ ತೆಗೆದುಕೊಂಡು ಬರಲು ಕ್ಯಾಮರಾ ಹೆಗಲಿಗೆ ತಗುಲಿಸಿಕೊಂಡು ಹೊರಟೆ. ಬಯಲುಸೀಮೆಯ ಬರಡು ಹೊಲಗಳನ್ನು ದಾಟುತ್ತಾ ಹೋಗುವಾಗ, ಹಳ್ಳಿಗಳ ಉದ್ದಕ್ಕೂ ಬಡತನ ಕಣ್ಣಿಗೆ ರಾಚುತ್ತಿತ್ತು. ಬಿಜವಾರ, ಬಿದರಕೆರೆ ದಾಟುತ್ತಾ ನಿಬಗೂರು ಹೊಕ್ಕೆ. ಕಲಾವಿದೆಯ ಮನೆ ವಿಚಾರಿಸುತ್ತಾ ಹರಿಜನ ಕೇರಿಗೆ ಹೋದೆ. ನನ್ನ ಹಿಂದೆ ಮಕ್ಕಳ ದೊಡ್ಡ ಹಿಂಡು. ಬಡತನದ ನಗ್ನರೂಪ ಎಲ್ಲೆಲ್ಲೂ ವಿಜೃಂಭಿಸುತ್ತಿತ್ತು. ಕೊನೆಗೆ ಹಾಳುಬಿದ್ದ ಒಂದು ಹೆಂಚಿನ ಮನೆಯ ಮುಂದೆ ನಿಂತಾಗ ಅದೇ ಕಲಾವಿದೆಯ ಮನೆಯೆಂದು ತಿಳಿಯಿತು.

ಪ್ರಶಸ್ತಿಯ ಸುದ್ದಿ ತಿಳಿದು ಅವಕ್ಕಾದಳು, ಕಣ್ಣೀರು ಜಾರಿದವು. ಆಕೆಯ ಕೂದಲ ಜಟೆ ಇನ್ನಷ್ಟು ಗಂಟು ಗಂಟಾಗಿತ್ತು. ಮನೆಯ ಅಂಗಳದಲ್ಲಿ ಕುಳಿತ ಆಕೆಯ ತಾಯಿಯ ಕೂದಲೂ ಹೀಗೇ ಜಟೆಕಟ್ಟಿಕೊಂಡು ಸಿಕ್ಕು ಸಿಕ್ಕಾಗಿದ್ದುದು ಕಂಡು 'ಏನಿದು ಕೂದಲು ಕತೆ' ಎಂದಾಗ 'ಈ ಜಟೆ ಕೂದಲೇ ನನ್ನನ್ನು ಅಮ್ಮನ ಆರಾಧಕಿ ಮಾಡಿದ್ದು' ಎಂದು ಕತೆಯ ಗಂಟು ಬಿಚ್ಚಿದಳು.....

ಈಕೆಯೇನೂ ಬೇಕೆಂದೇ 'ಅಮ್ಮ'ನ ಆರಾಧಕಿ ಆದವಳಲ್ಲ, ದೇವದಾಸಿಯೂ ಆದವಳಲ್ಲ! ಎಲ್ಲರಂತೆ ಸಂಸಾರಿಯಾಗಿ ಗಂಡ-ಮಕ್ಕಳು ಎಂದು ಬಾಳುತ್ತಿರುವಾಗ, ಎಂಭತ್ತರ ದಶಕದ ಕೊನೆಯಲ್ಲಿ ಇದ್ದಕ್ಕಿದ್ದಂತೆ ತಲೆಯಲ್ಲಿ ಈ ಜಟೆ ಕಾಣಿಸಿಕೊಂಡಿತು. ಹಳ್ಳಿಯ ಸಾಮಾನ್ಯ ನಂಬಿಕೆಯಂತೆ 'ಎಲ್ಲಮ್ಮ' (ಅಮ್ಮ)ನೇ ತಲೆಯಲ್ಲಿ ಕಾಣಿಸಿಕೊಂಡಿದ್ದಾಳೆ ಎಂದು, ಜಟೆ ಕಟ್ಟಿಕೊಂಡ ಎಲ್ಲಮ್ಮನ ಜೋಗತಿಯರನ್ನು ಕಂಡಿದ್ದ ಈಕೆಯೂ ನಂಬಿದಳು. ಕಣ್ಣೆದುರೇ ಜಟೆ ಕಟ್ಟಿಕೊಂಡಿದ್ದ, 'ಅಮ್ಮ'ನ ಆರಾಧಕಿಯಾಗಿದ್ದ ತಾಯಿಯ ಜೀವಂತ ಉದಾಹರಣೆ ಬೇರೆ. ಎಲ್ಲರಂತೆ ಈಕೆಯೂ ಮೂಢನಂಬಿಕೆಗೆ ಬಲಿಯಾಗಿ, ತನ್ನ ಊರಿಗೆ ಸಮೀಪವೇ ಇದ್ದ ಅಣಜಿ ಬಳಿಯ ಉಚ್ಚಂಗಿದುರ್ಗಕ್ಕೆ ಹೋಗಿ ಅಮ್ಮನ ಸೇವೆ ಮಾಡಿ, ದೀಕ್ಷೆ ಪಡೆದುಕೊಂಡು ಜೋಗತಿಯಾಗಿ, ಕೈಯಲ್ಲಿ ಚೌಡಿಕೆ ಹಿಡಿದು ಹಾಡತೊಡಗಿದ್ದು 'ಅಮ್ಮ'ನ ಕತೆಯನ್ನೇ! ತನ್ನ ಹೆಸರನ್ನು ನಿಜವಾದ ಅರ್ಥದಲ್ಲಿ ಅನ್ವರ್ಥಗೊಳಿಸಿಕೊಂಡ ಉಚ್ಚಂಗಮ್ಮನಿಗೆ ಅಮ್ಮನ ಕತೆಯನ್ನು ಕಲಿಯಲು ಸ್ಫೂರ್ತಿಯಾದದ್ದು-ಈಗಾಗಲೇ ಈ ಕಥನದ ಬದುಕಿನಲ್ಲಿ ತೊಡಗಿಸಿಕೊಂಡಿದ್ದ ಅಣ್ಣ. ಇಬ್ಬರೂ ಜೋಡಿಯಾಗಿ ಅಮ್ಮನ ಕತೆ ಹಾಡುತ್ತಾ ದೇಶ ಸುತ್ತಿದರು. ಗಂಡ ಹೆಂಡತಿಯನ್ನು ಅಮ್ಮನೆಂದೇ ಕಾಣತೊಡಗಿದ್ದ! ಈಗಾಗಲೇ ಅಮ್ಮನೇ ಸರ್ವಸ್ವ ಆಗಿದ್ದ ಉಚ್ಚಂಗಮ್ಮನಿಂದ 'ಅಮ್ಮ' ಗಂಡನನ್ನು ಕಿತ್ತುಕೊಂಡಳು. ಗಂಡ ಇರುವವರೆಗೂ ಹವ್ಯಾಸಿಯಾಗಿ ಹಾಡುತ್ತಿದ್ದ ಉಚ್ಚಂಗಮ್ಮನಿಗೆ ಈಗ ಹೊಟ್ಟೆಪಾಡಿಗಾಗಿ ವೃತ್ತಿಗಾಯಕಿಯಾಗಿ ಹಾಡಬೇಕಾದ ಪಾಡು ಬಂತು. ಕರುಳ ಕುಡಿಗಳಾದ ಎರಡು ಗಂಡು - ಎರಡು ಹೆಣ್ಣುಮಕ್ಕಳ

ತುತ್ತಿನ ಚೀಲವನ್ನು ಈ ಚೌಡಿಕೆಯೇ ತುಂಬ ತೊಡಗಿತು. ಇಬ್ಬರು ಹೆಣ್ಣು ಮಕ್ಕಳ ಮದುವೆಯನ್ನೂ ಮಾಡಿಸಿತು. ಗಂಡು ಮಕ್ಕಳನ್ನು ಓದಿಸಬೇಕೆಂಬ ಹಂಬಲ ಹೊತ್ತ ಅರವತ್ತರ ಅಂಚಿಗೆ ಸರಿಯುತ್ತಿರುವ ಉಚ್ಚಂಗಮ್ಮನಿಗೆ ಆಶ್ರಯವಾಗುವ ಗಂಡು ದಿಕ್ಕು ಇಲ್ಲ. ಈ ಟಿ.ವಿ. ಯುಗದಲ್ಲಿ ಮೊದಲಿನಂತೆ ಎಲ್ಲಮ್ಮನ ಚೌಡಿಕೆ ಹಾಡಿಗೆ ಬೇಡಿಕೆಯೂ ಇಲ್ಲ. ದುಡಿದು ಉಣ್ಣಲು ಸ್ವಂತ ಜಮೀನಿಲ್ಲ, ಕೂಲಿ-ನಾಲಿ ಮಾಡಿ ಬದುಕಲು ರಟ್ಟೆಯಲ್ಲಿ ಶಕ್ತಿ ಇಲ್ಲ. ತನ್ನ ಸ್ವಂತ ಶ್ರಮದಿಂದ ನಿರ್ಮಿಸಿಕೊಂಡಿರುವ ಮುರುಕು ಹೆಂಚಿನ ಜೋಪಡಿ ಸೂರೊಂದೇ ಈಕೆಗಿರುವ ಆಶ್ರಯ! ಈಗಲೂ ಚೌಡಿಕೆ ಹಿಡಿದರೆ ಎಲ್ಲ ಅಳಲನ್ನೂ ಮರೆತುಬಿಡುತ್ತಾಳೆ. ಒಡಲ ತುಂಬ , ಮಡಿಲತುಂಬ, ಕೊರಳ ತುಂಬ ಹಾಡುಗಳೇ ಹಾಡುಗಳು. ಈ ಇಳಿವಯಸ್ಸಿನಲ್ಲಿ ಬೇಕಾದ ಸಂಗಾತಿ ಹಾಡೊಂದೇ. ಆದರೆ 'ಇಟ್ಟು-ಸೊಪ್ಪಿ'ಗೆ ಕಷ್ಟಪಡುತ್ತಿರುವ ಈಕೆಗೆ ಅಕಾಡೆಮಿ ಪ್ರಶಸ್ತಿಯ ಗರಿ ಹೊಟ್ಟೆ ತುಂಬಿಸುವುದೇ ಎಂಬ ಚಿಂತೆಯಾಯಿತು. ಕಲಾವಿದರು ಮಾಸಾಶನ ಪಡೆಯಲು ಒದಗಿಸಬೇಕಾದ ದಾಖಲೆಗಳನ್ನು ಸರಿಹೊಂದಿಸುವುದೇ ಒಂದು ಪ್ರಯಾಸದ ಕೆಲಸ. ದಾಖಲೆಗಳನ್ನು ಒದಗಿಸಲಾಗದ ಕಲಾವಿದರಿಗೆ ಮಾಸಾಶನವೊಂದು ಮರೀಚಿಕೆಯಾದರೆ ಆಶ್ಚರ್ಯವಿಲ್ಲ. ಆದರೆ ಸರ್ಕಾರ ಆದಾಯ ಮಿತಿ ಮುಂತಾದ ಈ ನಿಯಮಾವಳಿಗಳನ್ನು ಸಡಲಿಸಿ ಜಾನಪದ ಅಕಾಡೆಮಿ ಗುರುತಿಸುವ ಪ್ರಶಸ್ತಿ ಕೊಟ್ಟು ಆಯ್ಕೆ ಮಾಡುವ ಅರ್ಹ ವಯೋವೃದ್ಧ ಕಲಾವಿದರಿಗಾದರೂ ಈ ಪ್ರಯೋಜನ ತಕ್ಷಣ ದೊರೆತರೆ, ಬಾಳಸಂಜೆಯಲ್ಲಿರುವ ಕಲಾವಿದರು ಬದುಕಿರುವ ಕೆಲವು ದಿನಗಳನ್ನಾದರೂ ನೆಮ್ಮದಿಯಾಗಿ ಕಳೆದಾರು......

ಹೀಗೆ ಆಲೋಚನೆ ಮಾಡುತ್ತಲೇ ಕಲಾವಿದೆಯ, ಆಕೆಯ ಕುಟುಂಬದ ಕೆಲವಾರು ಫೋಟೋಗಳನ್ನು ಹಲವಾರು ಭಂಗಿಗಳಲ್ಲಿ ಸೆರೆ ಹಿಡಿದೆ. ಇಡೀ ಬದುಕಿನುದ್ದಕ್ಕೂ ಜನರನ್ನು ರಂಜಿಸಿದ ಈ ಮನರಂಜಕರ ಋಣವನ್ನು ತೀರಿಸಬೇಕಾದ ಹೊಣೆ ಈ ಸಮಾಜದ ಮೇಲಿದೆ ಎಂದು ಆಲೋಚಿಸುತ್ತಾ, ಭಾರವಾದ ಹೃದಯದಿಂದ ಕಲಾವಿದೆಗೆ ವಿದಾಯ ಹೇಳುತ್ತಾ ಹೊರಟೆ. ಚೌಡಿಕೆ ಹಿಡಿದರೆ ರಾಣಿಯಾಗಿ ರಾರಾಜಿಸುವ, ಹಾಡಿನ ಸಾಮ್ರಾಜ್ಯದಲ್ಲಿ ತೇಲುವ, ವಾಸ್ತವ ಬದುಕಿನಲ್ಲಿ ಬೇವರಿಸಿಯಾಗಿ ಅಂಡಲೆಯುವ ಈಕೆಯ ಕಣ್ಣೀರನ್ನು ಒರೆಸುವ ಕೈ ಇಲ್ಲವೇ?



* ಪ್ರಜಾವಾಣಿ. 25-8-2002.

## ಕತೆಗಳ ಕಣಜ ಈರಬಡಪ್ಪ

ಕತೆ ಕೇಳದವರು ಯಾರಿದ್ದಾರೆ? ಕತೆ ಯಾರಿಗೆ ಬೇಕಿಲ್ಲ, ಹೇಳಿ? ಆಬಾಲ ವೃದ್ಧರಾದಿಯಾಗಿ ಎಲ್ಲರಿಗೂ ಬೇಕಾದ ಸಂಗಾತಿ-ಕತೆ. ಶಿಷ್ಟ ಸಾಹಿತ್ಯದಲ್ಲಿ ಕತೆಯ ಬಹು ದೊಡ್ಡ ಪರಂಪರೆಯೇ ಇದೆ. ಗುಣಾಢ್ಯನ ಬೃಹತ್ಕಥೆ ಒಂದು ಕತೆಗಳ ಗುಡಾಣ. ನಮ್ಮ ರಾಮಾಯಣ-ಮಹಾಭಾರತದ ತುಂಬ ಇಂಥ ಕತೆಗಳೇ ಇಡಿಕಿರಿದಿವೆ. ಅಲಿಖಿತ ಮೌಖಿಕ ಪರಂಪರೆಯಂತೂ ಕತೆಗಳ ಮಾಯಾಜಾಲವನ್ನೇ ಹೆಣೆದಿವೆ. ಅಜ್ಜ-ಅಜ್ಜಿಯರ ತೊಡೆಯ ಮೇಲೆ ಮಲಗಿ, ಆಕಾಶದಲ್ಲಿರುವ ನಕ್ಷತ್ರಗಳನ್ನು ಎಣಿಸುತ್ತಾ ಇಂಥ ಎಷ್ಟು ಕತೆಗಳನ್ನು ಕೇಳಿಲ್ಲ, ಕತೆಯ ಅದ್ಭುತ ರಮ್ಯ ಲೋಕದಲ್ಲಿ ವಿಹರಿಸಿಲ್ಲ; ಕಲ್ಪನೆಗಳ ಕುದುರೆಯೇರಿ ಕತೆಗಳ ಲೋಕದಲ್ಲಿ ಗಸ್ತು ಹೊಡೆದಿಲ್ಲ, ನಿಜಕ್ಕೂ ಅದೊಂದು ಅದ್ಭುತ ಪ್ರಪಂಚ. ಆದರೆ ಇಂಥ ಕತೆಗಳನ್ನು ಕಟ್ಟುವವನ ಬದುಕು ಹೇಗಿರುತ್ತದೆಯೆಂಬ ಕಲ್ಪನೆಯೇ ನಮಗಿಲ್ಲ. ಅವರ ಬದುಕನ್ನೊಮ್ಮೆ ಒಳಹೊಕ್ಕು ನೋಡಿದರೆ ಅದು ಬರೀ ವ್ಯಥೆಯ ಕತೆ. ಆದರೆ 'ಒಂದೂರು, ಒಬ್ಬ ರಾಜ, ಒಬ್ಬ ರಾಣಿ.....' ಎಂದು ಕತೆ ಪ್ರಾರಂಭಿಸಿದರೆ ಎಲ್ಲವನ್ನೂ ಮರೆತು ಬಿಡುವ ಮುಗ್ಧ ಮನಸ್ಸು ನಮ್ಮ ಜನಪದ ಕತೆಗಾರರದು. ಅಂಥ ಒಬ್ಬ ಮುಗ್ಧ-ಸ್ನಿಗ್ಧ ಕತೆಗಾರನೇ-ಈರಬಡಪ್ಪ.

ಈರಬಡಪ್ಪ ಹುಟ್ಟಿದ್ದು ಚಿತ್ರದುರ್ಗ ಜಿಲ್ಲೆಯ, ಸದಾ ಬರ ಕಾಲು ಚಾಚಿಕೊಂಡಿರುವ ಪೂರ್ವದಂಚಿನ ಬಯಲು ಸೀಮೆಯಾದ ಚಳ್ಳಕೆರೆ ತಾಲ್ಲೂಕಿನ ಕಲಮರಹಳ್ಳಿಯಲ್ಲಿ. ಜಿಲ್ಲೆಯ ಏಕೈಕ ನದಿ ವೇದಾವತಿ ಊರ ಪಕ್ಕದಲ್ಲೇ ಹರಿದರೂ ಹಸಿರು ಕಾಣದ ಹಳ್ಳಿ. ಇಂಥ ಬೆಂಗಾಡು ಸೀಮೆಯ ಗಂಧ-ಗಾಳಿಯಲ್ಲಿ ಬೆಳೆದವನು ಈರಬಡಪ್ಪ.

ಮಳೆಗಾಲದಲ್ಲಿ ಮಾತ್ರ ಉಕ್ಕಿ ಹರಿಯುವ ವೇದಾವತಿ ನದಿಯಂತೆ, ಈರಬಡಪ್ಪನೇನೂ ಬಾಳಿನಲ್ಲಿ ಹೆಚ್ಚಿನ ಸುಖ-ಸಂತೋಷಗಳೇನೂ ಕಂಡವನಲ್ಲ. ಹದಿನಾಲ್ಕು ಜನ ಸೋದರ-ಸೋದರಿಯರ ತುಂಬು ಕುಟುಂಬದಲ್ಲಿ ಕಡೆ ಹುಟ್ಟಿವನಾಗಿ ಹುಟ್ಟಿದವನು! ಬಡತನ ಹಾಸಲುಂಟು-ಹೊದೆಯಲುಂಟು. ಹಿಂದುಳಿದ ಕುರುಬ ಜಾತಿಯಲ್ಲಿ ಹುಟ್ಟಿದ್ದರಿಂದ ಸಹಜವಾಗಿ ಒಲಿದು ಬಂದ ಕುಲಕಸುಬು ಕುರಿ ಕಾಯುವುದು. ಕಂಬಳಿ ಮಗ್ಗ ನೇಯುವುದು. ಇದೂ ಕೂಡ ವೇದಾವತಿಯ ನೆರೆಯಂತೆ ವರ್ಷದುದ್ದಕ್ಕೂ ತುತ್ತಿನ ಚೀಲ ತುಂಬುತ್ತಿರಲಿಲ್ಲ, ಬರೀ ಪರದಾಟ-ಹೆಣಗಾಟ.

ಕೂಲಿ ಹುಡುಕಿಕೊಂಡು ಶಿವಮೊಗ್ಗ, ದಾವಣಗೆರೆಗಳತ್ತ ಆಗಾಗ್ಗೆ ವಲಸೆ. ಬರೀ ಹೊಟ್ಟೆಪಾಡಿಗಾಗಿ ಪರದಾಡುತ್ತಿದ್ದುದರಿಂದ ಯಾಕೋ ಅಲ್ಲಿಯೂ ಜೀವಕ್ಕೆ ಬೇಸರ. ಸಾಧು ಸತ್ಪುರುಷರ ಹಿಂಬಾಲತ್ತಿ ಅವರೊಂದಿಗೆ ದೇಶ ಸುತ್ತಿದ್ದು ಉಂಟು. ಕೋಶ ಓದದ, ದೇಶ ತಿರುಗಿದ ಈರಬಡಪ್ಪನಿಗೆ ಸಂಗಾತಿಯಾದುದು ಬಾಲ್ಯದಲ್ಲಿ ಕೇಳಿದ ಕತೆಗಳೇ. ಜೊತೆಗೆ ಕತೆ ಹೇಳುವ ಚಟವೂ ಅಂಟಿಕೊಂಡಿತು. ಕತೆಯೊಂದಿಗೆ ಹುಡುಗತನಲ್ಲಿ ಕಲಿತ ಕೋಲು ಪದ, ಕಗ್ಗದಪದ, ಪಂಡರಿ ಭಜನೆ ಪದಗಳೂ ಸೇರಿಕೊಂಡು ಅದೇ ಜೀವನೋಪಾಯಕ್ಕೆ ಸಾಧಕವೂ ಆದವು.

ಹಳ್ಳಿಯ ಹಂಗು ಹರಿದು ದೇಶ ತಿರುಗುವ ಹೊಸದರಲ್ಲೇ ಮದುವೆ ಎಂಬ ನಿಲ್ದಾಣದಲ್ಲಿ ಸ್ವಲ್ಪಕಾಲ ಮಾತ್ರ ನಿಂತವನು. ಹೀಗೆ ಓಡಿಯಾಡುತ್ತಲೇ ಮೂರು, ಗಂಡು ಮಕ್ಕಳ ತಂದೆಯಾದ. ಈಗ ನೆಲೆ ನಿಂತು ಹುಟ್ಟಿಸಿದ ಮಕ್ಕಳನ್ನು ಸಲುವಲೇ ಬೇಕಿತ್ತು. ದೇಹದಲ್ಲಿ ಕಸುವು ಇರುವವರೆಗೂ ಮಕ್ಕಳನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡಿದ. ವಯಸ್ಸು ಇಳಿಮುಖವಾಗುತ್ತಿದ್ದಂತೆ ರೆಕ್ಕೆ-ಪುಕ್ಕ ಬಲಿತ ಮಕ್ಕಳು, ಇವರ ಕೈಗೆ ಸಿಗದಂತೆ ಹಾರಿಹೋದರು. ವಯಸ್ಸು ಕಳೆದ ತಂದೆ-ತಾಯಿಗಳ ಜವಬ್ದಾರಿ ಹೊರಲು ಯಾವೊಬ್ಬ ಮಕ್ಕಳೂ ಮುಂದೆ ಬರಲಿಲ್ಲ. ನಡುನೀರಲ್ಲಿ ಕೈಬಿಟ್ಟು ಪರಾರಿಯಾದರು.

ಕಂಬಳಿ ಮಗ್ಗದ ಮುಂದೆ ಕುಂತು ಬದುಕಿನ ಕಂಬಳಿಯನ್ನು ನೇಯುವ ಶಕ್ತಿ ಕೈಗಳಿಗಿರಲಿಲ್ಲ. ಗೆಯ್ದು ಉಣ್ಣೋಣ ಎಂದರೆ ಇದ್ದ ಅಲ್ಪ-ಸ್ವಲ್ಪ ಜಮೀನು ರಾಣೇಕೆರೆ ಫೀಡರ್ ಚಾನಲ್ ಪಾಲಾಯಿತು. ಬಂದ ಅಲ್ಪ ಪರಿಹಾರ ಬಹಳ ದಿನಗಳವರೆಗೇನೂ ಇವರನ್ನು ಸಾಕಲಿಲ್ಲ. ಮತ್ತೆ ಕೈಲಾಗದಿದ್ದರೂ ಕೂಲಿ-ಕುಂಬಳ ಮಾಡುವ ಅನಿವಾರ್ಯ. ರಾತ್ರಿ ಹೊತ್ತು ಕಣ್ಣು 'ಸಬ್ಬರೆ' (ಮಬ್ಬು). ಜೀವನ ಸಂಗಾತಿಯೊಂದಿಗೆ ಮತ್ತೆ ಕೂಡಿಕೊಂಡ ಸಂಗಾತಿ-ಕತೆಯೊಂದೇ. ಜನಪದ ಕತೆಗಳ ಸಾಮ್ರಾಜ್ಯದಲ್ಲಿ ಹೀಗೆ ವಿಹರಿಸುತ್ತಲೇ 65-70ರ ಗಡಿದಾಟಿದ. ಕಂತೆಗೆ ತಕ್ಕ ಬೊಂತೆ ಎಂಬಂತೆ ಕತೆಗಳೊಂದಿಗೆ ಹಾಡುಗಳೂ ಕೂಡಿಕೊಂಡವು. ಮನೆ ದೇವರು ಉಂಗುಲಾರದಮ್ಮ, ಕೋಡಿ ಮಾರಕ್ಕ, ಈರಬಡಪ್ಪನ ಮೇಲೆ ಹಾಡು ಹೇಳುತ್ತಾ ಕುಳಿತರೆ ಹೊತ್ತು ಹೋದುದೇ ಗೊತ್ತಾಗುತ್ತಿರಲಿಲ್ಲ.

ಈರಬಡಪ್ಪ ಹೇಳುತ್ತಿದ್ದ ಕತೆಗಳಲ್ಲಿ ಕೆಲವನ್ನು 80ರ ದಶಕದಲ್ಲೇ ಸಂಗ್ರಹಿಸಿದ ಅದೇ ಊರಿನ 'ಕಲಮರಹಳ್ಳಿ ಮಲ್ಲಿಕಾರ್ಜುನ' ಅವುಗಳನ್ನು 'ಕಲಮರಹಳ್ಳಿ ಕತೆಗಳು' ಎಂದು ಪ್ರಕಟಿಸಿದರು. ಕಲಮರಹಳ್ಳಿ ಮಲ್ಲಿಕಾರ್ಜುನ ಬಿಟ್ಟರೆ ಈರಬಡಪ್ಪನ ಕತೆಗಳ ಕಣಜಕ್ಕೆ ಯಾರೂ ಕೈ ಹಾಕಲಿಲ್ಲ. ಜಾನಪದ ಅಕಾಡೆಮಿಯ ಸದಸ್ಯರಾಗಿದ್ದ ಮೀರಾಸಾಬಿಹಳ್ಳಿ ಶಿವಣ್ಣನವರೇನೋ ಇವರ ಪ್ರತಿಭೆಯನ್ನು ಗುರುತಿಸಿ 2001ರ ಸಾಲಿನ ಅಕಾಡೆಮಿ ಪ್ರಶಸ್ತಿ ದೊರೆಯುವಂತೆ ಮಾಡಿದರು. ಮೂಲೆ ಗುಂಪಾಗಿದ್ದ ಕತೆಗಾರನ್ನೇನೋ ಪ್ರಚಾರದ ಮುಖ್ಯವಾಹಿನಿಗೆ ತಂದಿದ್ದಾಯಿತು. ಆದರೆ ಈಗ ಕತೆ ಕೇಳುವವರು ಯಾರು? ಕತೆ ಕೇಳುವವರು ಇದ್ದಾರೆಯೇ? ಎಂದರೆ, 'ಕತೆ ಹೋಯ್ತು, ಟೀವಿ ಬಂತು ಡುಂ ಡುಂ' ಎಂದು ಹಾಸ್ಯವಾಗಿ

ಹೇಳುವ ಈರಬಡಪ್ಪನ ದನಿಯಲ್ಲಿ ಅಡಗಿರುವ ಸಾಸ್ಕೃತಿಕ ವಿಘಟನೆಯ ನೋವನ್ನು ಗುರುತಿಸಬಹುದು.

'ಎಷ್ಟು ಕತೆ ಹೇಳ್ತಿಯ, ಈರಬಡಪ್ಪ' ಎಂದರೆ - 'ಸ್ವಾಮಿ, ತಲೆಯಾಗೆ ಕೂದಲು ಏಸು ಐದಾವ್ರೋ ಆಸು' ಎನ್ನುವ ಈ ಕತೆಯ ಕಣಜವನ್ನು ಪೂರ್ತಿಯಾಗಿ ಜಪ್ತಿ ಮಾಡುವವರು ಇನ್ನೂ ಹುಟ್ಟಿಲ್ಲವೇನೋ!

'ಈರಬಡಪ್ಪ ಅನ್ನೋದು ವಕ್ಕಲಿಗರ ದೇವರಲ್ಲವೇ! ಅವರ ದೇವರ ಹೆಸರು ನೀನ್ಯಾಕೆ ಇಟ್ಟುಕೊಂಡಿದೀಯ?' ಎಂದು ಎಷ್ಟೋ ಜನ ಕೇಳಿದ ಪ್ರಶ್ನೆಗೆ ಈರಬಡಪ್ಪನ ಮಾರ್ಮಿಕ ಉತ್ತರ ಹೀಗಿದೆ- 'ನಾನು ಕುಲದಲ್ಲಿ ಕುರುಬರು ಇರಬೌದು. ಆದರೆ ದೇವರಿಗೆ ಎಲ್ಲೈತೆ, ಸ್ವಾಮಿ ಕುಲ?' ಕುಲಸಂಬಂಧೀ ವ್ಯಾಜ್ಯಗಳಲ್ಲಿ ಮುಳುಗಿರುವ ಜಗತ್ತು ಯಾಕೆ ಈರಬಡಪ್ಪನಂತೆ ಯೋಚಿಸುವುದಿಲ್ಲ?

ಈರಬಡಪ್ಪ ಹೇಳುವ 'ಬಡಕುದುರೆ ಬಡಪ್ಪ' ಎಂಬ ಕತೆಯೊಳಗೆ ತನ್ನ ಬದುಕಿನ ವ್ಯಥೆಯನ್ನೂ ಹುದುಕುವಂತಿರುವ ಈತನಿಗೆ ತಕ್ಷಣಕ್ಕೆ ಬೇಕಾದ ನೆರವು-ಮಾಸಾಶನ. ಚಾತಕ ಪಕ್ಷಿಯಂತೆ ಕಾಯುತ್ತಿರುವ ಈತನ ಬಯಕೆ ಸಾಯುವುದರೊಳಗಾಗಿ ಈಡೇರೀತೇ?

* ಪ್ರಜಾವಾಣಿ. 24-11-2002.



# ಗಡಿನಾಡಿನ ಜನಪದ ಕಾವ್ಯ ಪ್ರಕಾರಗಳು

ಭಾಷಾ ರಾಜ್ಯಗಳ ಸೃಷ್ಟಿಯು ಒಂದು ಬಗೆಯ ಕೃತಕ ರೆವಿನ್ಯೂ ಗಡಿಯ ನಿರ್ಮಾಣಕ್ಕೆ ಕಾರಣವಾದರೂ, ಭಾಷೆ ಗಡಿಯ ಹಂಗು ತೊರೆದು ತನ್ನದೇ ಸಾಂಸ್ಕೃತಿಕ ವೈಶಿಷ್ಟ್ಯಗಳಿಂದ ವಿಜೃಂಭಿಸುತ್ತಿರುವುದನ್ನು ಕಾಣಬಹುದು. ಆದರೆ ಕ್ರಮೇಣ ರೆವಿನ್ಯೂ ಗಡಿಯ ಕಪಿಮುಷ್ಟಿ ಭಾಷೆಯ ಕತ್ತನ್ನು ಹಿಚುಕತೊಡಗಿರುವುದನ್ನು ಕಾಣಬಹುದು. ಕವಿರಾಜಮಾರ್ಗಕಾರನ 'ಕಾವೇರಿಯಿಂದ ಗೋದಾವರಿವರೆಗಿರ್ದಾ' ಕನ್ನಡನಾಡು ಈಗ ಉಳಿದಿಲ್ಲದಿರುವುದನ್ನು ಕಾಣಬಹುದು. ಮಹಾರಾಷ್ಟ್ರದ ಸಾಂಸ್ಕೃತಿಕ ಧಾಳಿಗೆ ತುತ್ತಾದ ಕೊಲ್ಲಾಪುರ ಭಾಗದ ಕನ್ನಡ ಸಂಸ್ಕೃತಿ ಜೀವಕಳೆದುಕೊಂಡಿದೆ. ಕಾಸರಗೋಡು ಕನ್ನಡ ಸಂಸ್ಕೃತಿಗೂ ಕೇರಳ ತನ್ನ ಮುಸುಕು ಹೊರಿಸುತ್ತಿದೆ. ಬಳ್ಳಾರಿ ಭಾಗದ ಕನ್ನಡ ಸಂಸ್ಕೃತಿಯೂ ಕ್ರಮೇಣ ಮಸುಕಾಗುತ್ತಿದೆ. ಹತ್ತನೇ ಶತಮಾನದ ಪಂಪ ಬದುಕಿದ, ಅರಿಕೇಸರಿಯ ವೇಮುಲವಾಡವನ್ನು ತೆಲುಗು ಸಂಸ್ಕೃತಿ ಸಂಪೂರ್ಣ ನುಂಗಿ ನೊಣೆದಿದೆ. ಕನ್ನಡ ಸಂಸ್ಕೃತಿಯ ಮೂಕ ಸಾಕ್ಷಿಯಾಗಿ ಅಲ್ಲಿ ಅನೇಕ ಕನ್ನಡ ಶಾಸನಗಳು ಮಾತ್ರ ಇವೆ. ತಮಿಳುನಾಡಿನ ಕಬಂಧ ಬಾಹುಗಳು ಕನ್ನಡ ಸಂಸ್ಕೃತಿಯನ್ನು ಆವರಿಸಿವೆ. ಕೃತಕವೆನಿಸಿದ ರೆವಿನ್ಯೂ, ಭಾಷಾ ಗಡಿಗಳೇ ಅಂತಿಮವೆನಿಸ ತೊಡಗುತ್ತಾ ಕನ್ನಡ ಸಂಸ್ಕೃತಿ ಕೃಶವಾಗುತ್ತಾ ಗುಟುಕು ಜೀವ ಹಿಡಿದುಕೊಂಡಿರುವುದನ್ನು ಕಾಣಬಹುದು.

ಪ್ರಸ್ತುತ ಪ್ರಬಂಧದ ಮಿತಿಯಲ್ಲಿ ಗಡಿನಾಡಿನ ಎಲ್ಲ ಭಾಗಗಳ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಇಲ್ಲಿ ಚರ್ಚಿಸಲು ಸಾಧ್ಯವಿಲ್ಲ. ನನ್ನ ಪ್ರಬಂಧವನ್ನು ಚಿತ್ರದುರ್ಗ-ತುಮಕೂರು ಜಿಲ್ಲೆಗಳ ಗಡಿಗಳಷ್ಟೇ ಸೀಮಿತಗೊಳಿಸಿಕೊಂಡಿದ್ದೇನೆ.

ಚಿತ್ರದುರ್ಗ ಜಿಲ್ಲೆಯಿಂದ ಹಿಡಿದು ತುಮಕೂರು ಜಿಲ್ಲೆಯವರೆಗೂ ಚಾಚಿರುವ ಆಂಧ್ರದೊಂದಿಗಿನ ಗಡಿರೇಖೆಯ ಉದ್ದಕ್ಕೂ ಹಬ್ಬಿರುವ ಭಾಷಾ ಬಾಂಧವ್ಯ ಅತ್ಯಂತ ಸ್ವಾರಸ್ಯಕರವಾದುದು. ಈ ಗಡಿಯುದ್ದಕ್ಕೂ ವಾಸಮಾಡುವ ಅರ್ಧದಷ್ಟು ಜನಗಳ ಮಾತೃ ಭಾಷೆ ತೆಲುಗಾದರೂ ಇಲ್ಲಿ ಕನ್ನಡದ್ದೇ ಸಾಮ್ರಾಜ್ಯ. ಈ ಮಾತಂತೂ ಇಲ್ಲಿಯ ಗಡಿ ನಾಡಿನ ಜನಪದ ಸಾಹಿತ್ಯಕ್ಕೆ ನೂರಕ್ಕೆ ನೂರರಷ್ಟು ಅನ್ವಯಿಸುತ್ತದೆ. ಏಕೆಂದರೆ ಈ ಭಾಗದ ತೆಲುಗು ಮಾತನಾಡುವ ಜನರ ಜನಪದ ಸಾಹಿತ್ಯವು ಕನ್ನಡದ್ದೇ ಆಗಿರುವುದೊಂದು ವೈಶಿಷ್ಟ್ಯ. ಪ್ರಧಾನವಾಗಿ ಚಿತ್ರದುರ್ಗ ಗಡಿಭಾಗವಾದ ಮೊಳಕಾಲ್ಮೂರು, ಚಳ್ಳಕೆರೆ

ಪ್ರಾಂತ್ಯಗಳಲ್ಲಿ ದಟ್ಟವಾಗಿ ವಾಸಿಸುವ ಮ್ಯಾಸಬೇಡ ಬುಡಕಟ್ಟಿನವರ ಮಾತೃ ಭಾಷೆ ತೆಲುಗು ಆದರೂ ಆಶ್ಚರ್ಯಕರವೆಂಬಂತೆ ಅವರ ಜನಪದ ಸಾಹಿತ್ಯವೆಲ್ಲಾ ಕನ್ನಡವೇ ಆಗಿರುವುದು ಸಾಂಸ್ಕೃತಿಕ ವಿಶೇಷಗಳಲ್ಲೊಂದು. ಮ್ಯಾಸಬೇಡರ ಕನ್ನಡ ಬೆರೆತ ತೆಲುಗು ಬಹಳ ವಿಶಿಷ್ಟವಾದುದು, ಇದು ಒಂದು ರೀತಿಯಲ್ಲಿ ಕನ್ನಡದ ಸವಾರಿಯನ್ನು ಮನಸಾರೆ ಒಪ್ಪಿಕೊಂಡ ತೆಲುಗು. ಹೀಗಾಗಿ ಇದನ್ನು 'ಕಂದೆಲುಗು' ಇಲ್ಲವೇ 'ತೆಲುಗನ್ನಡ' ವೆಂದು ಕರೆಯಬಹುದು. ಈ ಬಗೆಯ ತೆಲುಗಿನ ಭಾಷಾಶಾಸ್ತ್ರೀಯ ಅಧ್ಯಯನ ಅನೇಕ ಸಾಂಸ್ಕೃತಿಕ ಕುತೂಹಲಗಳನ್ನು ತೆರೆಯಬಲ್ಲದು.

ಚಿತ್ರದುರ್ಗದ ಗಡಿಭಾಗಗಳಲ್ಲಿ ಸ್ವಲ್ಪ ದಟ್ಟವಾಗಿರುವ ತೆಲುಗು ಹಿರಿಯೂರು, ಸಿರಾ, ಮಧುಗಿರಿ ಭಾಗಕ್ಕೆ ಬರುತ್ತಲೇ ಸಂಪೂರ್ಣ ಕರಗಿಬಿಡುತ್ತದೆ. ಇದೊಂದು ಅಚ್ಚಗನ್ನಡ ಸೀಮೆ ಅನಿಸುತ್ತದೆ. ಹಿರಿಯೂರು, ಸಿರಾ, ಮಧುಗಿರಿ ಭಾಗಕ್ಕೆ ಹೊಂದಿಕೊಂಡಿರುವ ಆಂಧ್ರದ ಮಡಕಶಿರಾದಲ್ಲಿ ಕನ್ನಡ ಮಾತೃಭಾಷೆಯ ಮತ್ತೊಂದು ಬುಡಕಟ್ಟಿನ ಕಾಡುಗೊಲ್ಲರು ಮತ್ತು ಕುಂಚಿಟಿಗರು, ಕುರುಬರು ಅತಿದಟ್ಟವಾಗಿ ವಾಸಿಸುವುದೇ ಕಾರಣವಾಗಿದೆ. ಹೀಗಾಗಿ ಚಿತ್ರದುರ್ಗ ಕನ್ನಡ ಬೆರೆತ ತೆಲುಗು ಸಂಸ್ಕೃತಿಯನ್ನು ತೋರಿಸಿದರೆ, ತುಮಕೂರಿನ ಈ ಭಾಗ ತೆಲುಗು ಬೆರೆತ ಕನ್ನಡ ಸಂಸ್ಕೃತಿಯನ್ನು ತೋರುತ್ತದೆ.

ಈ ಗಡಿಯ ಎರಡೂ ಭಾಗದಲ್ಲಿ ವಾಸಿಸುವ ಬುಡಕಟ್ಟುಗಳಾದ ತೆಲುಗು ಮಾತನಾಡುವ ಮ್ಯಾಸಬೇಡರು, ಕನ್ನಡ ಮಾತನಾಡುವ ಕಾಡುಗೊಲ್ಲರು ಹಾಗೂ ಈ ಎರಡೂ ಬಡಕಟ್ಟುಗಳೊಂದಿಗೆ ಅನೇಕ ಬಗೆಯ ಸಾಂಸ್ಕೃತಿಕ ಸಮಾನತೆಯನ್ನು ಹೊಂದಿದ ಕುಂಚಿಟಿ ಒಕ್ಕಲಿಗರ, ಕುರುಬರ ಜನಪದ ಸಂಸ್ಕೃತಿ ಅತ್ಯಂತ ಶ್ರೀಮಂತವಾದುದು. ಸಂಸ್ಕೃತಿಯ ಜೀವಸೆಲೆ ತನ್ನೆಲ್ಲಾ ಸಾಧ್ಯತೆಗಳೊಂದಿಗೆ ಇವರ ಜನಪದ ಸಾಹಿತ್ಯದಲ್ಲಿ ಕಾಣಿಸಿಕೊಂಡಿದೆ.

ಈ ಹಿನ್ನೆಲೆಯಲ್ಲಿ ಇಲ್ಲಿಯ ಕಾವ್ಯಪ್ರಕಾರಗಳನ್ನು, ಆಯಾ ಕಾವ್ಯ ಪ್ರಕಾರಕ್ಕೆ ಬಳಸುವ ವಾದ್ಯದ ಹಿನ್ನೆಲೆಯಲ್ಲಿ ಹೀಗೆ ಗುರುತಿಸಬಹುದು. 'ಗಣೆ ಕಾವ್ಯಗಳು, ತ್ರಿಪದಿ ಕಾವ್ಯಗಳು, ಕೋಲು ಕಾವ್ಯಗಳು, ಚೌಡಿಕೆ ಕಾವ್ಯಗಳು, ಕಿನ್ನರಿ ಕಾವ್ಯಗಳು, ಡೊಳ್ಳು ಕಾವ್ಯಗಳು ಇತ್ಯಾದಿ.

ಗಣೆ ಕಾವ್ಯಗಳು :

ಈ ಗಡಿನಾಡಿನ ಉದ್ದಕ್ಕೂ ಬದುಕುತ್ತಿರುವ ಬುಡಕಟ್ಟು ಮತ್ತು ಜಾತಿಗಳ ಪ್ರಧಾನ ಸಂಸ್ಕೃತಿ ಕೃಷಿ ಸಂಸ್ಕೃತಿ. ಈ ಕೃಷಿ ಸಂಸ್ಕೃತಿಗೂ ಹಿಂದಿನ ಮೂಲಸಂಸ್ಕೃತಿ ಪಶುಪಾಲನೆ ಮತ್ತು ಬೇಟೆ. ಕಾಡುಗೊಲ್ಲರ ಮತ್ತು ಮ್ಯಾಸಬೇಡರ ಸಾಂಸ್ಕೃತಿಕ ಬದುಕಿನ ವಿವರವನ್ನು ಆ ಜನಾಂಗದ ಕತೆ ಪುರಾಣಗಳೇ ಹೇಳುತ್ತವೆ.

ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ-ಜುಂಜಪ್ಪ, ಮ್ಯಾಸಬೇಡರ ಸಾಂಸ್ಕೃತಿಕ ವೀರರಾದ ಗಾದ್ರಿಪಾಲನಾಯಕ, ಜಗಲೂರು ಪಾಪನಾಯಕ (ಜಗಲೂರಜ್ಜ)ರ ಪುರಾಣಕತೆಗಳು ಆ ಜನಾಂಗದ ಸಾಂಸ್ಕೃತಿಕ ಕೋಶಗಳೇ ಆಗಿವೆ. ಅವರ ಕಾವ್ಯಗಳಲ್ಲಿ ಹುಲ್ಲುಗಾವಲುಗಳು

ಸಮೃದ್ಧವಾಗಿದ್ದ ಕಾಲದಲ್ಲಿ ಅವರು ನಡೆಸಿದ ಪಶುಪಾಲಕ ಬದುಕಿನ ಏಳು-ಬೀಳು, ನೋವು-ಸಾವು, ಸಂಘರ್ಷ-ಹೋರಾಟ, ಹತ್ಯೆಯ ಕತೆಗಳೇ ತುಂಬಿವೆ. ಈ ಹೋರಾಟದಲ್ಲಿ ಮುಖಾಮುಖಿಯಾಗುವುದು- ಒಂದು ಕಾಲಕ್ಕೆ ಅಣ್ಣ-ತಮ್ಮಂದಿರಾಗಿದ್ದಿರಬಹುದಾದ ಅರೆ ಬೇಟೆ ಸಂಸ್ಕೃತಿಯ ಮ್ಯಾಸಬೇಡರು ಮತ್ತು ಪಶುಪಾಲಕ ಸಂಸ್ಕೃತಿಯ ಕಾಡುಗೊಲ್ಲರೇ ಆಗಿದ್ದಾರೆ. ಈ ಹೋರಾಟಗಳು ನೂರಾರು ಖಂಡ ಕಾವ್ಯಗಳ ಸೃಷ್ಟಿಗೆ ಕಾರಣವಾದುದಲ್ಲದೆ ಎತ್ತಪ್ಪ-ಜುಂಜಪ್ಪ ಎಂಬ ಎರಡು ಜನಪದ ಮಹಾಕಾವ್ಯಗಳ ಹುಟ್ಟಿಗೆ ಕಾರಣವಾದುದೂ ಕುತೂಹಲಕರವಾಗಿದೆ.



ಕಾಡುಗೊಲ್ಲರ ಬದುಕಿಗೊಂದು ಸಾಂಸ್ಕೃತಿಕ ಸಂವಿಧಾನವನ್ನು ಕೊಟ್ಟ, ಕಾಡುಗೊಲ್ಲರ ಪ್ರಪ್ರಥಮ ಸಾಂಸ್ಕೃತಿಕ ವೀರ ಎತ್ತಪ್ಪನ ಬದುಕು ಶೀಲ-ಶೌಚಗಳಿಗೊಂದು ಮಾದರಿ, ಎತ್ತಪ್ಪನ ರೂಪಿಗೆ ಮೋಹಗೊಂಡ ಬೇಡರ ಬೋರಿ, ಭೋಗಕ್ಕಾಗಿ ಎತ್ತಪ್ಪನನ್ನು ನಾನಾ ವಿಧವಾಗಿ ಕಾಡಿದರೂ ವಶವಾಗದಿದ್ದಾಗ ಹತಾಶಳಾಗಿ, ಬೇಡರ ದಂಡಿನಿಂದ ತಲೆಒಡೆಸುತ್ತಾಳೆ. ಇದೇ ಮಾದರಿಯ ನೂರಾರು ಕತೆಗಳು ಕಾಡುಗೊಲ್ಲರಲ್ಲಿ ದೊರೆಯುತ್ತವೆ. ಇವನ್ನು 'ಈರಗಾರರ ಕತೆಗಳು' ಎನ್ನುತ್ತಾರೆ. ಹೀಗೆ ಪಶುಪಾಲನೆಯಲ್ಲಿ ನಿರತರಾದ ಕಾಡುಗೊಲ್ಲರು ತಮ್ಮ ಪಶುಸಂಪತ್ತಿನೊಂದಿಗೆ ಹುಲ್ಲು-ನೀರು ಹುಡುಕುತ್ತಾ ಕಾಡಿನ ಅಂಚುಗಳಿಗೆ ಹೋಗಬೇಕಾಗಿ ಬರುತ್ತಿತ್ತು. ಅಲ್ಲಿದ್ದ ಬೇಡರ ಹೆಣ್ಣುಗಳು ಸಹಜ ಸುಂದರರಾದ ಗೊಲ್ಲರಿಗೆ ಮೋಹಗೊಂಡು 'ಈಲು' ಬೀಳುತ್ತಿದ್ದರು, ವಶವಾಗದಿದ್ದಾಗ ತಲೆ ಒಡೆಸುತ್ತಿದ್ದರು. ಇದಲ್ಲದೆ ಅವರ ದನ-ಕರುಗಳನ್ನು ಅಪಹರಿಸಲೂ ತಲೆಯೊಡೆಯುತ್ತಿದ್ದರು. 'ಎಲ್ಲಿ ಹುಲ್ಲು ನೀರು ಐತೋ ಅದೇ ನಮ್ಮ ಮನೆಮಾರು' ಎಂಬ ಗೊಲ್ಲರ ಅಲೆಮಾರಿ ಬದುಕಿನ ಸಂಕಟ-ಸಂಕಷ್ಟಗಳನ್ನು ಎದುರಿಸುತ್ತಾ, ಕೊನೆಗೆ ಆಡಳಿತ ವ್ಯವಸ್ಥೆಯ ತುಂಡು ಪಾಳೆಯಪಟ್ಟುಗಳೊಂದಿಗೆ ಸಂಘರ್ಷಕ್ಕೆ ಇಳಿಯಬೇಕಾದ ಹೋರಾಟದ ಕತೆಯನ್ನೇ ಹೊಂದಿರುವ ಜುಂಜಪ್ಪನ ಕತೆಯೂ ಪಶುಪಾಲಕರ ಸಂಕಷ್ಟಗಳ ಮುಂದುವರೆದ ಕತೆಯೇ ಆಗಿದೆ. ಕೊನೆಗೆ ಜುಂಜಪ್ಪ ಸೋದರ ಮಾವಂದಿರ ಅಸೂಯೆಯ ಬಲಿಪಶುವಾಗಿ ವಿಷಪ್ರಾಷನಗೊಳ್ಳುತ್ತಾನೆ. ಹೀಗೆ ಈ ಗಡಿನಾಡಿನ ಕಾವ್ಯ ಪರಂಪರೆ ಪಶುಪಾಲಕ ಸಂಸ್ಕೃತಿಯ ಇಂಥ ದುರಂತ, ಸಂಕಟದ ಕತೆಗಳನ್ನೇ ಒಳಗೊಂಡಿದೆ.

ಈ ಬಗೆಯ ಜೀವದ್ರವ್ಯ ತುಂಬಿದ ಕತೆ ತನ್ನನ್ನು ಅಭಿವ್ಯಕ್ತಗೊಳಿಸಿಕೊಳ್ಳಲು ಆರಿಸಿಕೊಂಡ ಗಣೆಕಾವ್ಯ ಮಾಧ್ಯಮ ಅತ್ಯಂತ ವಿಶಿಷ್ಟವಾದದ್ದು. ಅತ್ತ ಗದ್ಯವೂ, ಇತ್ತ ಪದ್ಯವೂ ಅಲ್ಲದ ಪದ್ಯಗಂಧಿಯಾದ ವಿಶಿಷ್ಟ ನಡೆ ಇದರದ್ದು; ಮಧ್ಯೆ ಮಧ್ಯೆ ಗದ್ಯವೂ ಇಣುಕು ಹಾಕಿ ಚಂಪೂ ಸ್ವರೂಪವನ್ನೂ ಪಡೆದುಬಿಡುತ್ತದೆ. ಒಂದು ರೀತಿ ಶಿವಶರಣರ ವಚನ, ಹರಿಹರನ ರಗಳೆಯನ್ನು ನೆನಪಿಗೆ ತರುವ ಈ ವಿಶಿಷ್ಟ ಕಾವ್ಯ ಸ್ವರೂಪದ ಧಾಟಿ ಹೆಚ್ಚಿನ ಏರಿಳಿತಗಳಿಲ್ಲದ ಒಂದು ರೀತಿಯ ನಿರುಮ್ಮಳವಾದ ಪ್ರಶಾಂತ ನಡೆ. ಪಶುಪಾಲಕ ಸಂಸ್ಕೃತಿಯ ಕಥನಕ್ಕೆ ಅನುಗುಣವಾಗಿಯೇ ಇದೆ. ಹೀಗಾಗಿ ಪಶುಪಾಲಕರ ಒಂಟಿ ಬದುಕಿನ ಸಂಗಾತಿಯಾದ ಗಣೆಯನ್ನೇ ಈ ಹಾಡಿಕೆಗೆ ಹಿನ್ನೆಲೆ ವಾದ್ಯವಾಗಿ ಬಳಸಲಾಗಿದೆ. ಪುಟ್ಟಿ ಕೊಳಲಿನ ವಿಸ್ಮೃತ ರೂಪವೇ ಗಣೆಯಾಗಿದೆಯೋ ಅಥವಾ ವಿಸ್ಮೃತ ರೂಪದ ಗಣೆಯೇ ಕಿರಿದಾಗಿ 'ಪಿಳ್ಳಂಗೋವಿ'ಯಾಗಿದೆಯೋ ಎಂಬ ಜಿಜ್ಞಾಸೆಯಲ್ಲಿ-ಎರಡನೆಯ ಅನಿಸಿಕೆಯಲ್ಲೇ ಹೆಚ್ಚು ಹುರುಳಿದೆ ಅನಿಸುತ್ತದೆ. ಇದೇ ಪದ್ಯಗಂಧಿ ಮಾದರಿಯನ್ನು ಹೋಲುವ ಕಂಸಾಳೆ ಕಾವ್ಯ, ಡೊಳ್ಳಿನ ಕಾವ್ಯ, ಚೌಡಿಕೆ ಕಾವ್ಯಗಳಿಂದ ಇದನ್ನು ಪ್ರತ್ಯೇಕಿಸಲು ಇದನ್ನು 'ಗಣೆ ಕಾವ್ಯ' ಎಂದು ಕರೆದಿದ್ದೇನೆ. ಆದರೆ ಈ ಗಣೆ ಕಾವ್ಯ ಕಾಡುಗೊಲ್ಲರಿಗೇ ಮೀಸಲಾದ ವಿಶಿಷ್ಟ ಪ್ರಕಾರ ಎಂಬುದು ಗಮನಾರ್ಹ. ಹೀಗಾಗಿ ಗಣೆಯ ಮೂಲಕ ಜನಾಂಗದ ಸಾಂಸ್ಕೃತಿಕ ವೀರರ ಕತೆ ಹಾಡುವುದರಿಂದ ಗಣೆ ಎಲ್ಲಿಲ್ಲದ ಪಾವಿತ್ರ್ಯಗೆ ಪ್ರಾಪ್ತವಾಗಿ ಅದು 'ಚರದೈವ'ವೇ ಆಗಿ 'ಜುಂಜಪ್ಪನ ಗಣೆ'ಯೆಂದೇ ಖ್ಯಾತಗೊಂಡಿದೆ. ಈ ಪ್ರಕಾರದ ಸತ್ವ-ಸಾಮರ್ಥ್ಯಕ್ಕೆ ಅದು ನೀಡಿರುವ ಎತ್ತಪ್ಪ-ಜುಂಜಪ್ಪ ಎಂಬ ಎರಡು ಜನಪದ ಮಹಾಕಾವ್ಯಗಳೇ ಸಾಕ್ಷಿ.

ಕಾಡುಗೊಲ್ಲರ ಪುರಾಣ ಪುರುಷರಾದ ಕಾಟಯ್ಯ, ಚಿತ್ತಯ್ಯ, ಕ್ಯಾತೇಲಿಂಗ, ಪಾತೇಲಿಂಗ, ಚಿತ್ರಲಿಂಗ ಅವರನ್ನು ಕುರಿತ ಕಾವ್ಯಗಳೂ ಗಣೆ ಪ್ರಕಾರದಲ್ಲೇ ದೊರೆಯುತ್ತವೆ. ಕಾಡುಗೊಲ್ಲರ ಎಲ್ಲ ಕಥನಗಳು ಗಣೆ-ತ್ರಿಪದಿ-ಗದ್ಯಕತೆ ಪ್ರಕಾರಗಳಲ್ಲಿ ದೊರೆಯುವುದು ಕಾಡುಗೊಲ್ಲರ ಪ್ರತಿಭಾ ವೈವಿಧ್ಯಕ್ಕೆ ಒಂದು ಸಾಕ್ಷಿಯೂ ಆಗುತ್ತದೆ. ಅನೇಕ 'ವೃತ್ತಿಗಾಯಕ ಕಥೋಪಜೀವಿ'ಗಳನ್ನು ಈ ಪರಂಪರೆ ಹುಟ್ಟು ಹಾಕಿರುವುದೊಂದು ವಿಶೇಷ.

**ತ್ರಿಪದಿ ಕಾವ್ಯಗಳು :**

ಇದೇ ಪಶುಪಾಲಕ ಸಂಸ್ಕೃತಿಯ ಹಿನ್ನೆಲೆಯುಳ್ಳ ಮ್ಯಾಸಬೇಡರ, ಕುಂಚಿಟಿಗರ ಸಾಂಸ್ಕೃತಿಕ ವೀರರ ಕಥನ ಕಾವ್ಯಗಳು ಗಣೆಕಾವ್ಯ ರೂಪದಲ್ಲಿ ದೊರೆಯದೆ ತ್ರಿಪದಿಯಲ್ಲಿ ಮಾತ್ರ ದೊರೆಯುವುದು ಒಂದು ವೈಶಿಷ್ಟ್ಯ. ಆದರೆ ಕಾಡುಗೊಲ್ಲರ ಎಲ್ಲ ಕತೆಗಳೂ ಗಣೆಯೊಂದಿಗೆ ತ್ರಿಪದಿ ರೂಪದಲ್ಲೂ ದೊರೆಯುತ್ತವೆ. ಆದರೆ ತ್ರಿಪದಿ ರೂಪದ ಈ ಕಾವ್ಯಗಳೆಲ್ಲ ಗಂಡಸರು ಹಾಡುವ ಗಣೆಕಾವ್ಯದಷ್ಟು ಆಳ-ವಿಸ್ತಾರಗಳನ್ನು ಒಳಗೊಂಡಿಲ್ಲದ ಹೆಂಗಸರ ಹಾಡಿಗಷ್ಟೇ ಮೀಸಲಾಗಿರುವುದು ಒಂದು ವಿಶೇಷ. ಗಣೆಕಾವ್ಯ ಕೊಡುವ ಅಪಾರ ವಿವರಗಳನ್ನು ಇವು ಕೊಡುವುದೇ ಇಲ್ಲ. ಇಲ್ಲಿ ಸಹಜವಾಗಿ ಹೆಂಗರುಳಿಗೆ ಸ್ಪಂದಿಸುವ, ಪೂಜಾಕ್ರಮದ ವಿವರಗಳಿಗಷ್ಟೇ ಹೆಚ್ಚಿನ ಪ್ರಾಧಾನ್ಯತೆ ದೊರೆಯುವುದರಿಂದ ಉಳಿದ ವಿವರಗಳು ಮಸುಕಾಗಿ ಬಿಡುತ್ತವೆ, ಇಲ್ಲವೇ ನಿರ್ಲಕ್ಷ್ಯತೆಗೆ ಒಳಗಾಗುತ್ತವೆ. ಕೊಂಡ ಹೊಕ್ಕು

ಮಹಾಸತಿಯರಾದ ಈರದಿಮ್ಮವ್ವ, ಕೊಂಡದ ಕಾಟವ್ವ ಮುಂತಾದ ಅನೇಕ ಮಹಿಳೆಯರ ಕತೆಗಳು ನಮ್ಮ ಮಹಿಳೆಯರ ಕರುಳು ಮಿಡಿದಿವೆ.

ಕಾಡುಗೊಲ್ಲರಷ್ಟೇ ಜಾನಪದ ಸಮೃದ್ಧಿ ಹೊಂದಿದ ಈ ಭಾಗದ ಕುಂಚಿಟಿಗರ ಅನೇಕ ಸಾಂಸ್ಕೃತಿಕ ವೀರರಾದ ಜಲಧಿ ಬೋಪ್ಪರಾಯ, ಈರಬಡಪ್ಪ, ಉದ್ದಿಗರಾಯ, ತಾಯಿ ಮುದ್ದವ್ವ, ಬರಗೂರು ವೀರಮ್ಮ, ತಾಡಿ ನಾಗಮ್ಮ ಮುಂತಾದ ಕಥನ ಗೀತೆಗಳೂ ಇಲ್ಲಿ ಗಮನಾರ್ಹ.



ಕಾಡುಗೊಲ್ಲರೊಂದಿಗೆ ಸಂಸ್ಕೃತಿಯನ್ನು ಹಂಚಿಕೊಂಡ ಮ್ಯಾಸಬೇಡರ ಜನಪದ ಸಾಹಿತ್ಯ ಮಾತ್ರ ಈ ಎರಡೂ ಜನಾಂಗಗಳಿಗೆ ಹೋಲಿಸಿದರೆ ಬರಡು ಎಂದೇ ಹೇಳಬೇಕು. ಗಾದ್ರಿಪಾಲನಾಯಕನ ಕತೆ ಮಾತ್ರ ತ್ರಿಪದಿಯಲ್ಲಿ ದೊರೆಯುತ್ತದೆ.

**ಕೋಲು ಕಾವ್ಯಗಳು :**

ಕೋಲಿನಲ್ಲಿ ಪೂರ್ಣಪ್ರಮಾಣದ ಕಾವ್ಯಗಳಿಗೆ ಪ್ರಾಶಸ್ತ್ಯವಿಲ್ಲದಿದ್ದರೂ ಸಾಹಸ, ಶೃಂಗಾರದ ಭಾಗಗಳಿಗೆ ಒತ್ತುಕೊಟ್ಟು ಹಾಡುವುದುಂಟು. ಅಪರೂಪಕ್ಕೆಂಬಂತೆ ಮೊಳಕಾಲ್ಮೂರು ಭಾಗದ ಬೇಡರ ಕೋನಸಾಗರದ ಪಾಪಣ್ಣ ಮತ್ತು ಚಳ್ಳಕೆರೆ ಭಾಗದ ಕಾಡುಗೊಲ್ಲರ ಕಸ್ಕಾನಳ್ಳಿ ನಾಗಣ್ಣ ಎಂಬುವವರ ಮೇಲೆ ಕಟ್ಟಿದ ಎರಡು ಕೋಲು ಕಥನಗಳು ಅತ್ಯಂತ ಜನಪ್ರಿಯವಾಗಿರುವುದನ್ನು ಇಲ್ಲಿ ನೆನೆಯಬಹುದು.

ದೇವರು ಹೊಳೆಗೆ ಹೊರಟಾಗಷ್ಟೇ ಹಾಡುವ, ದೇವರನ್ನು ಹೊಗಳುವ 'ಕಗ್ಗ' ಎಂದು ಕರೆಯಲ್ಪಡುವ ಕಾವ್ಯ ಪ್ರಕಾರವೂ ತ್ರಿಪದಿ ರೂಪದ್ದೇ ಆಗಿದ್ದು, ಪೂರ್ಣಪ್ರಮಾಣದ ಕಾವ್ಯದಿಂದ ಆರಿಸಿದ ತುಣುಕುಗಳೇ ಆಗಿವೆ. ಇಲ್ಲಿ ಕುಣಿತಕ್ಕೆ ಹೆಚ್ಚು ಪ್ರಾಶಸ್ತ್ಯ. ಹಾಗೆಯೇ ಕುಣಿತ ಪ್ರಧಾನವಾದ ಡೊಳ್ಳಿನ ಕಾವ್ಯ, ವೀರಗಾಸೆಯ ಖಡ್ಗ ಕಾವ್ಯಗಳನ್ನು ಇಲ್ಲಿ ನೆನೆಯಬಹುದು. ಇಲ್ಲಿ ಕತೆಯ ತುಣುಕುಗಳೂ ಪ್ರಸ್ತಾಪಿತವಾಗದೆ ಕೇವಲ ದೇವರ ಹೊಗಳಿಕೆಯ, ಆಧ್ಯಾತ್ಮ ಲೇಪದ ಹಾಡುಗಳಿರುತ್ತವೆ.

**ಕಿನ್ನರಿ ಕಾವ್ಯಗಳು :**

ಮೊಳಕಾಲ್ಮೂರು ಬಳಿಯ ನುಂಕೆಮಲೆ ಕಿನ್ನರ ಜೋಗಿಗಳ ಒಂದು ಮುಖ್ಯ ಸಾಂಸ್ಕೃತಿಕ ನೆಲೆ. ಅಲೆಮಾರಿಗಳಾದ ವೃತ್ತಿ ಗಾಯಕರಾದ ಇವರನ್ನು ಅರ್ಜುನ ಜೋಗಿಗಳು ಎಂದು ಕರೆಯುವುದುಂಟು. ಇವರು ಕಾಂಭೋಜರಾಜ, ಕಾಡುಸಿದ್ದಮ್ಮ ಮುಂತಾದ ಕತೆಗಳನ್ನು ಹಾಡುತ್ತಾರೆ. ಈ ಕಾವ್ಯ ಪರಂಪರೆಯೂ ಚಂಪೂ ಶೈಲಿಯಿಂದ ಕೂಡಿದುದಾಗಿದೆ.

ಎಲ್ಲಮ್ಮ ದೇವಿಯ ಆರಾಧಕರಾದ ಚೌಡಿಕೆಯವರ ಕಾವ್ಯ ಪ್ರಕಾರ ಹಾಡು-ನರ್ತನ-ವಾದ್ಯ ಸಂಗೀತದಿಂದ ಕೂಡಿದ್ದು ಉತ್ತಮ ಪ್ರದರ್ಶಕ ಕಲೆಯಾಗಿದೆ. 'ಎಲ್ಲಮ್ಮ ದೇವಿ'ಯ ಪೂರ್ಣ ಪ್ರಮಾಣದ ಮಹಾಕಾವ್ಯವನ್ನು 'ಹೆಣ್ಣು ಜೋಗತಿ'ಗಳು ಹಾಡುತ್ತಾರೆ.

ಇದೇ ಚೌಡಿಕೆಯನ್ನು ಬಳಸಿ 'ಎಣ್ಣೆ ಜೋಗಿ'ಗಳುಎಂದು ಕರೆಯಲ್ಪಡುವ ಇನ್ನೊಂದು ವರ್ಗದ ವೃತ್ತಿಗಾಯಕರು ಅನೇಕ ಬಗೆಯ ಕತೆಗಳನ್ನು ಹಾಡುವುದನ್ನು ಈ ಗಡಿಯುದ್ದಕ್ಕೂ ಗಮನಿಸಬಹುದು.

'ಕತೆ' ಎಂದು ಕರೆದರೂ ಹಾಡುವ ಈ ವಿಶಿಷ್ಟ ಸಂಪ್ರದಾಯವನ್ನು ಈ ಜನಪದ ಕಾವ್ಯ ಪ್ರಕಾರಗಳಲ್ಲಿ ಗುರುತಿಸಬಹುದು. ಬಹುಶಃ ಕಾವ್ಯಮಯವಾದ ಗದ್ಯವೇ ಇಲ್ಲಿರುವುದರಿಂದ ಇದನ್ನು 'ಹಾಡುವಕತೆ' ಎಂದು ಕರೆದಿರುವುದೂ ಅರ್ಥಪೂರ್ಣವಾಗೇ ಇದೆ.

(ಶಿರಾದಲ್ಲಿ 2000ರಲ್ಲಿ ನಡೆದ 'ಗಡಿನಾಡು ಜಾನಪದ ಸಮ್ಮೇಳನ'ದಲ್ಲಿ ಮಂಡಿಸಿದ ಪ್ರಬಂಧ)



# ಬುಡಕಟ್ಟು ಅಭಿವೃದ್ಧಿ - ಒಂದು ಚಿಂತನೆ

ಮಧ್ಯ ಕರ್ನಾಟಕದ ಪೂರ್ವದಂಚಿಗೆ-ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿರುವ ಚಿತ್ರದುರ್ಗ ಜಿಲ್ಲೆಯಲ್ಲಿ ಮೂರು ಪ್ರಧಾನ ಬುಡಕಟ್ಟುಗಳನ್ನು ಗುರುತಿಸಬಹುದು. ಸಂಖ್ಯೆಯಲ್ಲಿ ಲಕ್ಷಾಂತರವಿರುವ ಕಾಡುಗೊಲ್ಲರು ಮ್ಯಾಸಬೇಡರನ್ನು ಬಿಟ್ಟರೆ ತೀರಾ ಅಲ್ಪಸಂಖ್ಯಾತರಾಗಿರುವ ಇನ್ನೊಂದು ಗುಂಪು ಲಂಬಾಣಿಗಳದು. ಮಾನವ ಶಾಸ್ತ್ರದ ದೃಷ್ಟಿಯಿಂದ ನಾವು ಇವರನ್ನು ಬುಡಕಟ್ಟುಗಳು ಎಂದೇ ಕರೆದರೂ, ಇಂದಿನ ಮೀಸಲಾತಿಯ ಸಂದರ್ಭದಲ್ಲಿ ಕಾಡುಗೊಲ್ಲರನ್ನು 'ಹಿಂದುಳಿದ ಬುಡಕಟ್ಟು' (B.T.) ಎಂದೂ, ಮ್ಯಾಸಬೇಡರನ್ನು 'ನಿಮ್ನ ಬುಡಕಟ್ಟು' (S.T.) ಎಂದೂ, ಲಂಬಾಣಿಗಳನ್ನು 'ನಿಮ್ನಜಾತಿ' (S.C.) ಎಂದೂ ಗುರುತಿಸಲಾಗುತ್ತದೆ. ಒಂದು ಕಾಲಕ್ಕೆ ಇವರೆಲ್ಲ ಪಶುಪಾಲಕರಾಗಿದ್ದು ಅರೆ-ಅಲೆಮಾರಿಗಳಾಗಿದ್ದರು. 'ಎಲ್ಲಿ ಹುಲ್ಲು-ನೀರು ಇದೆಯೋ ಅದೇ ನಮ್ಮ ಮನೆಮಾರು' ಎಂಬುದು ಅವರ ಜೀವನದ ಸಿದ್ಧಾಂತವಾಗಿತ್ತು. ಈಗ ಬಯಲು ಸೀಮೆಯಾಗಿರುವ ಈ ಭಾಗ ಹಿಂದೊಮ್ಮೆ ಸಂಮೃದ್ಧ ಕಾಡುಗಳಿಂದ ತುಂಬಿತ್ತು ಎಂದು ಆಯಾ ಬುಡಕಟ್ಟಿನ ಸಾಂಸ್ಕೃತಿಕ ವೀರರ ಕಥನಗಳೇ ಹೇಳುತ್ತವೆ. ಎತ್ತಪ್ಪ-ಜುಂಜಪ್ಪ, ಜಗಲೂರು ಪಾಪನಾಯಕ, ಗಾದ್ರಿ ಪಾಲನಾಯಕರ ಕಾವ್ಯಗಳಲ್ಲಿ ಕಾಡಿನ ದಟ್ಟವರ್ಣನೆಗಳೇ ತುಂಬಿವೆ. ಆದರೆ ಇಂದು ಕಾಡು, ಅದರೊಂದಿಗೆ ಪಶುಸಂಪತ್ತು ನಾಶವಾಗಿರುವ ಹಿನ್ನೆಲೆಯಲ್ಲಿ ಅಲೆಮಾರಿಗಳಾಗಿದ್ದವರು ಹಟ್ಟಿಗಳನ್ನು ಹಾಕಿಕೊಂಡು ನೆಲೆ ನಿಂತಿದ್ದಾರೆ. ಈ ಹಟ್ಟಿಗಳು ನಾಗರಿಕ ಜನವಸತಿಯ ಗ್ರಾಮಗಳಿಂದ ದೂರವೇ ಇದ್ದು ತಮ್ಮ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿವೆ. ಕಾಡುಗೊಲ್ಲರ ಮತ್ತು ಲಂಬಾಣಿಗಳ ಹಟ್ಟಿಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ. ಪಕ್ಕದ ನಾಗರೀಕ ಜಾತಿ ಗ್ರಾಮಗಳ ಹೆಸರೇ ಹೇಳಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಬುಡಕಟ್ಟುಗಳಲ್ಲಿ ಸ್ವಾಭಿಮಾನವನ್ನು ತಮ್ಮತನವನ್ನು ತುಂಬುವ ನಿಟ್ಟಿನಲ್ಲಿ ಮೊದಲ ಹೆಜ್ಜೆಯಾಗಿ ಈ ಮಜಿರೆ ಗ್ರಾಮಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಿ ಅವುಗಳಿಗೆ ಅವುಗಳದೇ ಸಾಂಸ್ಕೃತಿಕ ಹಿನ್ನೆಲೆಯ 'ನಾಮಕರಣ'ಗಳನ್ನು ಮಾಡಬೇಕು.

ಆದರೆ ಮ್ಯಾಸಬೇಡ ಬುಡಕಟ್ಟಿನ ಹಟ್ಟಿಗಳು ಹಳ್ಳಿಗಳೇ ಆಗಿವೆ. (ಉದಾ. ಚಳ್ಳಕೆರೆ ತಾಲ್ಲೂಕಿನ ರುದ್ರಮ್ಮನಹಳ್ಳಿ, ಓಬಣ್ಣನಹಳ್ಳಿ, ಕುದಾಪುರ ಇತ್ಯಾದಿ) ಎಂಬುದು ಗಮನಾರ್ಹ. ಕೆಲವು ಬುಡಕಟ್ಟುಗಳು ಹಟ್ಟಿ, ತಾಂಡಗಳ ಸ್ವರೂಪದಲ್ಲೇ ಉಳಿದು, ಮತ್ತೊಂದು

ಬುಡಕಟ್ಟು 'ಹಟ್ಟಿ'ಯಿಂದ ವಿಸ್ತರಿಸಿಕೊಂಡು 'ಹಳ್ಳಿ'ಯಾಗಿ ಬೆಳೆದ ಬಗೆ ಅಧ್ಯಯನಕ್ಕೆ ಹಲವು ಸಾಂಸ್ಕೃತಿಕ ಆಯಾಮಗಳನ್ನು ಒದಗಿಸುತ್ತದೆ. ಆದರೆ ಈ 'ಹಳ್ಳಿ'ಗಳು 'ಜಾತಿಗ್ರಾಮ'ಗಳಾಗದೆ ತೊಂಭತ್ತು ಭಾಗದ ಬುಡಕಟ್ಟು ಜನಗಳಿಂದಲೇ ರೂಪುಗೊಂಡಿರುವುದು ಗಮನಾರ್ಹ.

ಅರಣ್ಯದಲ್ಲಿ ವಾಸಮಾಡುವ ಬುಡಕಟ್ಟುಗಳ ಸಮಸ್ಯೆಗಳಿಗೂ, ಬಯಲು ಸೀಮೆಯ ಸಣ್ಣ-ಪುಟ್ಟ ಬೆಟ್ಟ-ಗುಡ್ಡ-ಮೊರಡಿಗಳ ಕಣಿವೆಗಳಲ್ಲಿ ವಾಸ ಮಾಡುವ ಬುಡಕಟ್ಟುಗಳಿಗೂ ಅಜಗಜಾಂತರ ವ್ಯತ್ಯಾಸವಿದೆ. ಕಾಡಿನ ಉತ್ಪನ್ನಗಳಿಂದಲೇ ಬದುಕುತ್ತಿದ್ದ ಬುಡಕಟ್ಟುಗಳನ್ನು ಉದ್ಧಾರದ ಭ್ರಮೆಯ ನೆಪದಲ್ಲಿ ಒಕ್ಕಲೆಬ್ಬಿಸಿರುವ ಸರ್ಕಾರದ ನೀತಿಗಳಿಂದ ಕಂಗೆಟ್ಟ ಬುಡಕಟ್ಟು ಜನ ಸಂಘರ್ಷದ ಹಾದಿ ಹಿಡಿದಿದ್ದಾರೆ. ಸರ್ಕಾರ ಈಗಲಾದರೂ ತನ್ನ ಬುಡಕಟ್ಟು ಸುಧಾರಣ ನೀತಿಗಳನ್ನು ಕುರಿತ ಆತ್ಮಾವಲೋಕನ ಮಾಡಿಕೊಳ್ಳಬೇಕು. 'ತಮ್ಮನ್ನು ತಮ್ಮ ಪಾಡಿಗೆ ಬಿಟ್ಟರೆ ಸಾಕು' ಎಂಬ ಆದಿವಾಸಿಗಳೊಂದಿಗೆ ಅನುಸಂಧಾನ ನಡೆಸಿ, ಅವರ ಸಾಂಸ್ಕೃತಿಕ ಸೂಕ್ಷ್ಮಗಳಿಗೆ ಅನುಗುಣವಾಗಿ ಸ್ಪಂದಿಸಬೇಕು. 'ಬುಡಕಟ್ಟು ಜನಗಳನ್ನು ಉದ್ಧಾರ ಮಾಡುತ್ತೇವೆ' ಎಂಬ ಅಹಂಕಾರದ ಪೊಳ್ಳು ಪ್ರತಿಷ್ಠೆಯ ಕವಚವನ್ನು ಸರ್ಕಾರ ಮೊದಲು ಕಿತ್ತುಹಾಕಬೇಕು. ಸರ್ಕಾರದ ಬುಡಕಟ್ಟು ಉದ್ಧಾರದ ತನ್ನ ಪರಿಕಲ್ಪನೆಯನ್ನು ಮರುವ್ಯಾಖ್ಯಾನಕ್ಕೆ ಒಳಪಡಿಸಿಕೊಳ್ಳಬೇಕು. ಉದ್ಧಾರದ ನಮ್ಮ ಮಾನದಂಡಗಳನ್ನು ಬುಡಕಟ್ಟುಗಳ ಮೇಲೆ ಹೇರಬಾರದು. ಬುಡಕಟ್ಟುಗಳ ಸಾಂಸ್ಕೃತಿಕ ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂತಹ ಯಾವ ಕಾನೂನುಗಳನ್ನು ಹೇರದೆ 'ಕೊಳ್ಳ ಬಿಲ್ಲು-ಬತ್ತಳಿಕೆ'ಗಳನ್ನು ಅಲ್ಲಿಯೇ ಇಟ್ಟು ಮಾನವೀಯತೆಯಿಂದ, ಸಾಂಸ್ಕೃತಿಕ ಹೃದಯವಂತಿಕೆಯಿಂದ ವ್ಯವಹರಿಸಬೇಕು.

ಕಾಡಿನೊಳಗೆ ಬದುಕುತ್ತಿರುವ ಬುಡಕಟ್ಟುಗಳೂ ಸೇರಿದಂತೆ ಬಯಲುಸೀಮೆಯಲ್ಲಿರುವ ಬುಡಕಟ್ಟುಗಳನ್ನು ಇಂದು ಕಂಟಕಪ್ರಾಯವಾಗಿ ಕಾಡುತ್ತಿರುವ ಇನ್ನೊಂದು ನೀತಿಯೆಂದರೆ- ಸರ್ಕಾರದ ಪಾನನೀತಿ. ಇದರಿಂದ ಬುಡಕಟ್ಟುಗಳಷ್ಟೇ ಅಲ್ಲ ಮಧ್ಯಮವರ್ಗದ ಜನಗಳೂ ದಿವಾಳಿಯಾಗುತ್ತಿದ್ದಾರೆ. ಅದರೆ ಅಲ್ಪವರಮಾನದ ಬುಡಕಟ್ಟುಗಳು ಕುಡಿತದ ದಾಸರಾಗುತ್ತಿವೆ. ಬುಡಕಟ್ಟುಗಳಿಗೆ ಕುಡಿತ ಹೊಸದೇನೂ ಅಲ್ಲ. ಪಾರಂಪರಿಕವಾಗಿ ಅವರು ಕುಡಿಯುತ್ತಲೇ ಬಂದಿದ್ದಾರೆ. ಸ್ಥಳೀಯ ಸಸ್ಯ, ಧಾನ್ಯಗಳ ಮೂಲಕ ತಮ್ಮ ಆರೋಗ್ಯಕ್ಕೆ ಹಿತವಾದ ಮದಿರೆಯನ್ನು ಸ್ವಯಂ ಅವರೇ ತಯಾರಿಸಿಕೊಳ್ಳುತ್ತಿದ್ದರು. ಈಚಲು ಮರ, ಬಗನಿ ಮರಗಳಿಂದ ಉತ್ಪಾದಿಸುತ್ತಿದ್ದ 'ಸೇಂದಿ' ಅವರ ಆರೋಗ್ಯಕ್ಕೆ ಪೂರಕವಾಗಿತ್ತು.

ಆದರೆ ಇಂದು ಕಾಳ್ಗಿಚ್ಚಿನಂತೆ ನಾಡಿನಾದ್ಯಂತ ವ್ಯಾಪಿಸಿರುವ ರಸಾಯನಿಕಗಳಿಂದ ತಯಾರಿಸಿದ ಹೆಂಡ, ಸಾರಾಯಿಗಳಿಂದ ತಮ್ಮ ಪುಡಿ ದುಡಿಮೆಯೊಂದಿಗೆ ಆರೋಗ್ಯವನ್ನೂ ಕಳೆದುಕೊಳ್ಳುತ್ತಿರುವುದು ಅತ್ಯಂತ ಖೇದಕರ. ಹೇಗಾದರೂ ಮಾಡಿ ಈ ಆಧುನಿಕ ಹೆಂಡದ ಮಾರಿಯ ಕಪಿಮುಷ್ಟಿಯಿಂದ ನಮ್ಮ ಬುಡಕಟ್ಟು ಜನಗಳನ್ನು ಪಾರು ಮಾಡಬೇಕು. ಇದುವೇ ಬುಡಕಟ್ಟಿನ ಉದ್ಧಾರದ ಮಂತ್ರ ಎಂದು ಸರ್ಕಾರ ತಿಳಿಯಬೇಕು.

ಬುಡಕಟ್ಟುಗಳನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನವಾಗಿ-ಅನಾವಶ್ಯಕವಾಗಿ ಅವರ ಸಾಂಸ್ಕೃತಿಕ ಬದುಕಿನಲ್ಲಿ ಹಸ್ತಕ್ಷೇಪ ಮಾಡಬಾರದು. ಬಹಳವೆಂದರೆ ಅವರ ಸಂಸ್ಕೃತಿಯೊಳಗೆ ನುಸುಳಿಕೊಂಡಿರಬಹುದಾದ ಮೌಢ್ಯಗಳ ಬಗ್ಗೆ ಅವರಿಗೆ ವೈಜ್ಞಾನಿಕವಾಗಿ ಮನದಟ್ಟು ಮಾಡಿಕೊಡಬೇಕು. ಕಾಡುಗೊಲ್ಲರಿಗೆ ಮಾದಿಗರ ಹಟ್ಟಿ ಪ್ರವೇಶದ ನಿಷೇಧ ಕುರಿತು ಸರಿಯಾದ ತಿಳುವಳಿಕೆಯನ್ನು ಮೂಡಿಸಬೇಕು. ಹಿಂದೆ ಹಟ್ಟಿಯೊಳಗೆ ಬರೀ ಗುಡಿಸಲುಗಳೇ ಇದ್ದುದರಿಂದ ಉರಿಯುವ ದೊಂದಿ ಹಿಡಿದ ಮಾದಿಗ ಕಿಡಿ ಹಾರಿ ಬೆಂಕಿ ಬಿದ್ದೀತೆಂದು ಹಟ್ಟಿಯ ಹೊರಗಡೆಯೇ ನಿಂತ-ಹೀಗಾಗಿ ಈ ಸಂಪ್ರದಾಯ ಬಂದಿದೆ. ಈಗ ಅದನ್ನು ಅನುಸರಿಸುವ ಪ್ರಮೇಯವಿಲ್ಲ ಎಂದು ಸ್ಪಷ್ಟಪಡಿಸಬೇಕು. (ಮಾದಿಗರು ಮ್ಯಾಸಬೇಡರ ಹಟ್ಟಿಯನ್ನು ಹೊಗಲು ಯಾವ ನಿಷೇಧವೂ ಇಲ್ಲ ಎಂಬುದು ಗಮನಾರ್ಹ.) ಹಾಗೆಯೇ ಅವರ ಹೆತ್ತಸೂತಕ, ರಜೋಸೂತಕಗಳ ಬಗ್ಗೆಯೂ ಸರಿಯಾದ ಮಾಹಿತಿ ನೀಡುವ ಮೂಲಕ ಮೌಢ್ಯದಿಂದ ಕೂಡಿದ ನಡವಳಿಕೆಗಳ ಬಗ್ಗೆ ತಿಳಿಹೇಳಬೇಕು. ಅವರ ಪ್ರಗತಿಪರ ಆಲೋಚನೆ ನಡಾವಳಿಗಳನ್ನು ಬೆಂಬಲಿಸುವ ಮೂಲಕ ಅವರಲ್ಲಿ ಆತ್ಮವಿಶ್ವಾಸ ತುಂಬಬೇಕು. ಕಾಡುಗೊಲ್ಲರಲ್ಲಿನ ವೈಧವ್ಯದ ಪರಿಕಲ್ಪನೆ ಅತ್ಯಂತ ಆರೋಗ್ಯಕರ ಮನಸ್ಸಿನಿಂದ ಕೂಡಿರುವಂಥದ್ದು. ಕಾರಣವೇನೇ ಇರಲಿ ಗಂಡ ಸತ್ತರೂ ಅವರು ಮುತ್ತೈದೆತನ ಚಿನ್ಹೆಗಳಾದ ಹೂವು, ಬಳೆ, ತಾಳಿ, ಕುಂಕುಮ ತೆಗೆಯುವುದಿಲ್ಲ! ಇದು ಅತ್ಯಂತ ಕ್ರಾಂತಿಕಾರಿ ಚಿಂತನೆಯಾಗಿದೆ.

ನಾನು ಬಾಲ್ಯದಲ್ಲಿ ಗಮನಿಸಿದಂತೆ- ಲಂಬಾಣಿಗಳಲ್ಲಿ ಗೌರಿ ಹುಣ್ಣಿಮೆ ಸಂದರ್ಭದಲ್ಲಿ ಇನ್ನೂ ವಿವಾಹವಾಗದಿರುವ ಹೆಣ್ಣುಗಳನ್ನು ಮುಕ್ತವಾಗಿ ತಿರುಗಾಡಲು ಬಿಡುತ್ತಿದ್ದರು. ಅವರು ಸುತ್ತಿನ ಹಳ್ಳಿಗಳಿಗೆ ಹೋಗಿ ಗಂಡಸರಿಂದ ಬಲವಂತವಾಗಿ ಹಣ ವಸೂಲು ಮಾಡುತ್ತಿದ್ದರು. ಆಗ ಎಷ್ಟೋ ಹೆಣ್ಣುಗಳು ಸಾವಪ್ಪುತ್ತಿದ್ದವೆಂದು ಕೇಳಿದ್ದೇನೆ. ಆದರೆ ಈ ಅನಿಷ್ಟ ಸಂಪ್ರದಾಯ ಇತ್ತೀಚೆಗೆ ಕಾಣೆಯಾಗಿದ್ದರೂ ನಾಗರೀಕತೆ ಇಲ್ಲದ ತಾಂಡಗಳಲ್ಲಿ ಇನ್ನೂ ಇದೆ ಎಂದು ಕೆಲವರು ಹೇಳುತ್ತಾರೆ. ಅವಿವಾಹಿತ ಹರೆಯದ ಹೆಣ್ಣುಗಳು ಇದೇ ಗೌರಿ ಹುಣ್ಣಿಮೆಯಲ್ಲಿ ರಸ್ತೆಗಳಲ್ಲಿ ವಾಹನ ತಡೆದು, ಹಳ್ಳಿಗೆ ಆಗಮಿಸಿದ ಅಪರಿಚಿತರ ಎದುರಿಗೆ ಸೋಬಾನೆ ಹಾಡುತ್ತಾ ಹಣ ಕೇಳುವ ಪರಿಪಾಠವೂ ತೊಲಗಬೇಕಿದೆ. ಈ ಬಗ್ಗೆ ಆ ಬುಡಕಟ್ಟಿನ ಹಿರಿಯರು ಯುವ ಜನಾಂಗಕ್ಕೆ ಬುದ್ಧಿ ಹೇಳಬೇಕಾಗಿದೆ.

ಬುಡಕಟ್ಟು ಜನಗಳಿಗೆ ಗ್ರಾಮದ ಜಾತಿಯ ಜನಗಳೊಂದಿಗೆ ವಸತಿ ಕಲ್ಪಿಸುವುದರ ಮೂಲಕ ಅವರು ಅನಿವಾರ್ಯವಾಗಿ ಮುಖ್ಯವಾಹಿಯ ಸಂಪರ್ಕಕ್ಕೆ ಬರುವಂತೆ ಪ್ರೋತ್ಸಾಹಿಸಿದರೆ ಸುತ್ತಿನ ನಡಾವಳಿಗಳ ಪ್ರಭಾವದಿಂದ ಸ್ವಯಂ ಪ್ರೇರಣೆಯಿಂದ ತಮ್ಮ ಬದುಕಿನಲ್ಲೂ ಸೂಕ್ತ ಮಾರ್ಪಾಟುಗಳನ್ನು ತಂದುಕೊಳ್ಳಲು ಅವರನ್ನು ಪ್ರೇರೇಪಿಸಿದಂತಾಗುತ್ತದೆ. ವಿಶೇಷ ಬುಡಕಟ್ಟು ಯೋಜನೆಗಳ ಮೂಲಕ ಅವರಿಗೆ ಸಾಕುಪ್ರಾಣಿಗಳ ಪೋಷಣೆಗೆ ಧನ ಸಹಾಯವನ್ನು ನೀಡುವ ಮೂಲಕ ಆರ್ಥಿಕ ಚೈತನ್ಯ ತುಂಬಬೇಕು. ಈ ಆರ್ಥಿಕ ಸಬಲತೆಯೇ ಅವರಲ್ಲಿ ಆಧುನಿಕತೆಯ ಪ್ರವೇಶಕ್ಕೆ ನಾಂದಿ ಹಾಡುತ್ತದೆ.